# ದಲಿತ ಕಾವ್ಯ ಮತ್ತು ಪ್ರತಿಭಟನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಅಧ್ಯಯನ ಪ್ರಬಂಧ)

ಸಂಶೋಧಕರು

**ಮನುಕುಮಾರ್ ಬಿ.ಎಸ್.**

ನೋಂದಣಿ ಸಂಖ್ಯೆ : KRSM 00151

ಮಾರ್ಗದರ್ಶಕರು

**ಡಾ. ಪಿ. ಬೆಟ್ಟೇಗೌಡ**

ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು-17



ಅಧ್ಯಯನ ಕೇಂದ್ರ

ಎಂ.ಎಚ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ), ಮಂಡ್ಯ

**2015**



# ದಲಿತ ಕಾವ್ಯ ಮತ್ತು ಪ್ರತಿಭಟನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಅಧ್ಯಯನ ಪ್ರಬಂಧ)

ಸಂಶೋಧಕರು

ಮನುಕುಮಾರ್ ಬಿ.ಎಸ್.

ನೋಂದಣಿ ಸಂಖ್ಯೆ : KRSM 00151



ಮಾರ್ಗದರ್ಶಕರು

ಡಾ. ಪಿ. ಬೆಟ್ಟೇಗೌಡ

ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು-17




ಮಾನ್ಯತಾ ಕೇಂದ್ರ

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ), ಮಂಡ್ಯ.

2015

## ಸಂಶೋಧಕರ ಪ್ರಮಾಣ ಪತ್ರ

**'ದಲಿತ ಕಾವ್ಯ ಮತ್ತು ಪ್ರತಿಭಟನೆ'** ಎಂಬ ಮಹಾ ಪ್ರಬಂಧವನ್ನು ಡಾ. ಪಿ. ಬೆಟ್ಟೇಗೌಡ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಭಾಷಾ ನಿಕಾಯ ವಿಭಾಗದಲ್ಲಿ ಪಿಎಚ್.ಡಿ. ಪದವಿಗಾಗಿ ಮಂಡ್ಯದ ಕರ್ನಾಟಕ ಸಂಘ (ರಿ.) – ಮಾನ್ಯತಾ ಕೇಂದ್ರದ ಮೂಲಕ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಇದನ್ನು ಈ ಹಿಂದೆ ಯಾವುದೇ ಡಿಪ್ಲೊಮೊ ಅಥವಾ ಪದವಿಗಾಗಿ, ಬೇರೆ ಯಾವುದೇ ವಿಶ್ವವಿದ್ಯಾಲಯಕ್ಕೆ ಅಥವಾ ಇತರ ಸಂಶೋಧನಾ ಸಂಸ್ಥೆಗಳಿಗೆ ಭಾಗಶಹವಾಗಿಯಾಗಲಿ, ಪೂರ್ಣವಾಗಿಯಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಬಿ.ಎಸ್. [signature]

ದಿನಾಂಕ : 16/12/15
ಸ್ಥಳ : ಮಂಡ್ಯ

ಮನುಕುಮಾರ್ ಬಿ.ಎಸ್.
ಸಂಶೋಧನಾ ವಿದ್ಯಾರ್ಥಿ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ.), ಮಂಡ್ಯ..

# ಮಾರ್ಗದರ್ಶಕರ ದೃಢೀಕರಣ ಪತ್ರ

ಕನ್ನಡ ವಿಶ್ವ ವಿದ್ಯಾಲಯಕ್ಕೆ ಅರ್ಪಿಸುತ್ತಿರುವ **'ದಲಿತ ಕಾವ್ಯ ಮತ್ತು ಪ್ರತಿಭಟನೆ'** ಎಂಬ ಮಹಾ ಪ್ರಬಂಧವನ್ನು ಮನುಕುಮಾರ್ ಬಿ.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮೊದಲು ಈ ಮಹಾ ಪ್ರಬಂಧವನ್ನು ಭಾಗಶಹವಾಗಿಯಾಗಲಿ, ಪೂರ್ಣವಾಗಿಯಾಗಲಿ ಯಾವುದೇ ವಿಶ್ವ ವಿದ್ಯಾಲಯದ ಡಿಪ್ಲೊಮೊ ಅಥವಾ ಪದವಿಗಾಗಿ, ಯಾವ ಭಾಷೆಯಲ್ಲೂ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 16.12.2015
ಸ್ಥಳ: ಮಂಡ್ಯ

ಡಾ. ಪಿ. ಬೆಟ್ಟೇಗೌಡ
ಸಹ ಪ್ರಾಧ್ಯಾಪಕರು
ಸರ್ಕಾರಿ ಮಹಳಾ ಪ್ರಥಮ ದರ್ಜೆ ಕಾಜೇಜು
ವಿಜಯನಗರ, ಮೈಸೂರು-17

# ಪರಿವಿಡಿ

## ಅಧ್ಯಾಯ-1
# ಉದ್ದೇಶ ಮತ್ತು ವ್ಯಾಪ್ತಿ

1

ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ದಲಿತ ಸಾಹಿತ್ಯವು ಒಂದು ವಿಶೇಷ ಸ್ಥಾನವನ್ನು ಪಡೆದುಕೊಂಡಿದೆ. 'ದಲಿತ' ಸಮುದಾಯ ಅಷ್ಟೇ ಅಲ್ಲ. ದೇಶದ ವ್ಯವಸ್ಥೆಯ ಚೌಕಟ್ಟಿನಲ್ಲಿ ಹಸಿವು, ನೋವು, ಅಸಮಾನತೆ, ಅಜ್ಞಾನದ ನೆಲೆಯಲ್ಲಿ ಬಹು ಸಂಖ್ಯಾತ ಬದುಕಿನ ವಿಧಾನವನ್ನೇ ಒಳಗೊಳ್ಳುತ್ತದೆ.

ದಲಿತ ಸಾಹಿತ್ಯದ ಪ್ರಜ್ಞೆಯ ಮೂಲವನ್ನು ಆಧುನಿಕ ಸಾಹಿತ್ಯದ ಮೊದಲ ಭಾಗವಾದ ನವೋದಯ ಕಾಲದ ಕಾದಂಬರಿಗಳಾದ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡತಿ', 'ಚೋಮನ ದುಡಿ'ಯಲ್ಲಿ ಕಾಣಬಹುದು. ನಂತರ ಬಂದ ಪ್ರಗತಿಶೀಲ, ನವ್ಯ ಸಂದರ್ಭದಲ್ಲೂ, ಪ್ರಾಸಂಗಿಕವಾಗಿ ಅಲ್ಲಲ್ಲಿ ದಲಿತ ಪ್ರಜ್ಞೆ ಕಂಡರೂ 1970ರಲ್ಲಿ ಕಾಲೂರಿದ 'ದಲಿತ' ಸಾಹಿತ್ಯದಿಂದಲೇ 'ಪ್ರಜ್ಞೆ' ಸ್ಫುಟಗೊಂಡಿದೆ.

ದಲಿತ ಸಾಹಿತ್ಯವು ಓದುಗ ಸಮಾಜಕ್ಕೆ ಅರಿವಿನ ಜಾಗೃತಿ ಮೂಡಿಸಿ, ಅಸ್ಪೃಶ್ಯತೆಯನ್ನು ಹೋಗಲಾಡಿಸಿ, ಸಮತೋಲನ ಕಾಪಾಡುವ ದೃಷ್ಟಿಯಿಂದ ಹುಟ್ಟಿಕೊಂಡಿತ್ತೆಂದು ಹೇಳಬಹುದು. ಅದೇ ದೃಷ್ಟಿಯಿಂದ ದಲಿತ ಕಾವ್ಯಗಳನ್ನು ಆಧಾರವಾಗಿಟ್ಟುಕೊಂಡು ಪ್ರತಿಭಟನೆ, ಅದರ ಮೂಲ, ತೀವ್ರತೆ, ಪ್ರಭಾವ, ಪರಿಣಾಮ ಮೊದಲಾದ ಆಯಾಮಗಳಲ್ಲಿ ಚರ್ಚಿಸುವುದು ಆಧುನಿಕ ಸಂಶೋಧನೆಯ ಸಂದರ್ಭದಲ್ಲಿ ಅತ್ಯಂತ ಮಹತ್ವದ ಕೆಲಸವೆಂದು ಭಾವಿಸುತ್ತೇನೆ.

ದಲಿತ ಸಾಹಿತ್ಯದಲ್ಲಿ ಕಾದಂಬರಿ, ನಾಟಕ, ಸಣ್ಣಕತೆ ಎಂಬ ಪ್ರಾಕಾರಗಳಿದ್ದು, ಇವುಗಳ ಬಗೆಗೆ ಸಾಕಷ್ಟು ಮಹಾ ಪ್ರಬಂಧಗಳು ಹೊರ ಬಂದಿವೆ. ಕಾವ್ಯದಲ್ಲಿ 'ಪ್ರತಿಭಟನೆ' ವಿಷಯದ ಬಗ್ಗೆ ಬಿಡಿ ಲೇಖನ ಅಥವಾ ಪ್ರಬಂಧಗಳು ಬಂದಿದ್ದರೂ, ಮಹಾ ಪ್ರಬಂಧ ಸಿದ್ದಪಡಿಸುವ ಉದ್ದೇಶದಿಂದ, ಸಂಶೋಧನಾ ಪ್ರಯತ್ನಗಳು ನಡೆದಿಲ್ಲವೆಂಬ ಗ್ರಹಿಕೆಯಿಂದ 'ದಲಿತ ಕಾವ್ಯ ಮತ್ತು ಪ್ರತಿಭಟನೆ' ಎಂಬ ಪರಿಕಲ್ಪನೆಯಲ್ಲಿ ಅಧ್ಯಯನ ನಡೆಸಲು ಇಚ್ಛಿಸಿರುತ್ತೇನೆ. ಕನ್ನಡ 'ದಲಿತ ಕಾವ್ಯ' ಹೊಸಗನ್ನಡದ ಇತರ ಸಾಹಿತ್ಯ ಪಂಥಗಳ ಕಾವ್ಯಕ್ಕಿಂತ ಎಲ್ಲಾ ದೃಷ್ಟಿಯಿಂದಲೂ ಗಮನಾರ್ಹವಾಗಿದೆ.

ಕಾವ್ಯದಲ್ಲಿ ಪ್ರತಿಭಟನೆ, ವಸ್ತು ವೈವಿಧ್ಯ, ತಂತ್ರಗಾರಿಕೆ, ಭಾಷಾ ಬಳಕೆ, ದೃಷ್ಟಿ–ಧೋರಣೆ, ಆಶಯಗಳು ಅತ್ಯಂತ ಪರಿಣಾಮಕಾರಿಯಾಗಿ ವ್ಯಕ್ತಗೊಂಡಿದ್ದು,ಓದುಗರಲ್ಲಿ ದಟ್ಟವಾದ 'ದಲಿತ ಪ್ರಜ್ಞೆ', ಸಾಹಿತ್ಯಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಅರಿವನ್ನು ಮೂಡಿಸಿದೆ. ಈ ದೃಷ್ಟಿಕೋನದಲ್ಲಿ ದಲಿತ ಕಾವ್ಯ ಮತ್ತು ಅದು ವ್ಯಕ್ತಪಡಿಸುವ ಪ್ರತಿಭಟನೆಯನ್ನು ಕುರಿತು ಅಧ್ಯಯನ ಮಾಡುವುದು, ಆಧುನಿಕ ವಿಮರ್ಶೆ ಮತ್ತು ಸಂಶೋಧನೆಯ ಸಂದರ್ಭದಲ್ಲಿ ಮಹತ್ವದ್ದು ಎಂದು ಭಾವಿಸಲಾಗಿದೆ.

ದಲಿತ ಕಾವ್ಯದಲ್ಲಿನ ಪ್ರತಿಭಟನೆ ಬಗ್ಗೆ ಅನೇಕರು ಅಲ್ಲಲ್ಲಿ ಚರ್ಚಿಸಿದ್ದರೂ ವ್ಯಾಪಕವೂ, ಸಮಗ್ರವೂ ಆದ ಅಧ್ಯಯನ ನಡೆದಿಲ್ಲದಿರುವುದರಿಂದಲೇ ಈ ವಿಷಯ ಕುರಿತ ನನ್ನ ಅಧ್ಯಯನ ಹೊಸದೆಂದು ಭಾವಿಸಲಾಗಿದೆ. ಜಾತಿ, ಧರ್ಮ, ವರ್ಗ ಹಾಗೂ ವರ್ಣ ವ್ಯವಸ್ಥೆಯ ವಿರುದ್ಧ ಪ್ರಕಟವಾಗಿರುವ ಪ್ರತಿಭಟನೆಯನ್ನು ಅಧ್ಯಯನ ಮಾಡುವ ಮೂಲಕ ದಲಿತ ಕಾವ್ಯದ ತಾತ್ವಿಕ ನಿಲುವುಗಳನ್ನು ಅರ್ಥ ಮಾಡಿಕೊಳ್ಳುವುದು ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ದಲಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ 'ದಲಿತ ಬಂಡಾಯ ಕಾದಂಬರಿಗಳಲ್ಲಿ ಶ್ರಮ ಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಾಗಳ ಹುಡುಕಾಟ', 'ದಲಿತ ಮಹಿಳಾ ಸಂಕಥನ', 'ಕನ್ನಡ ದಲಿತ ಬಂಡಾಯ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ', 'ಕಥಾಕಥನ','ಪ್ರತಿಭಟನಾ ಸಾಹಿತ್ಯಗಳ ನೆಲೆಯಲ್ಲಿ ಬುದ್ಧ, ಬಸವ, ಅಂಬೇಡ್ಕರ್', 'ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿ ಸಂಸ್ಕೃತಿ' ಎಂಬಿತ್ಯಾದಿ ಮಹಾ ಪ್ರಬಂಧಗಳು ಹೊರ ಬಂದಿದ್ದರೂ, ದಲಿತ ಕಾವ್ಯಗಳಲ್ಲಿ ಪ್ರತಿಭಟನೆಯ ದೃಷ್ಟಿಕೋನದಲ್ಲಿ ಇದುವರೆಗೂ ಅಧ್ಯಯನಗಳು ನಡೆದಿಲ್ಲವೆಂದು ದೃಢಪಡಿಸಿಕೊಂಡು 'ದಲಿತ ಕಾವ್ಯ ಮತ್ತು ಪ್ರತಿಭಟನೆ' ಎಂಬ ವಿಷಯದಲ್ಲಿ ಸಂಶೋಧನೆ ನಡೆಸಿ ಈ ಪ್ರಬಂಧವನ್ನು ಸಿದ್ಧಪಡಿಸಿದ್ದೇನೆ.

ದಲಿತ ಪೂರ್ವ ಸಾಹಿತ್ಯ ಘಟ್ಟಗಳ ವಸ್ತು, ಶೈಲಿ, ತಂತ್ರ, ಭಾಷೆಗಳಿಂದ ದಲಿತ ಕಾವ್ಯ ಭಿನ್ನವಾಗಲು ಕಾರಣ ತನ್ನ ಸಮುದಾಯದವರ ಜನಜೀವನದ ಅಸಲಿ ಅನುಭವಗಳನ್ನು ದಾಖಲಿಸಿರುವುದು.

ಸಿದ್ಧಲಿಂಗಯ್ಯ, ಅರವಿಂದ ಮಾಲಗತ್ತಿ, ಮೂಡ್ನಾಕೂಡು ಚಿನ್ನಸ್ವಾಮಿ, ಅನಸೂಯ ಕಾಂಬಳೆ, ದು.ಸರಸ್ವತಿ, ವಿ. ಮುನಿವೆಂಕಟಪ್ಪ ಇತ್ಯಾದಿ ದಲಿತ ಕವಿ, ಕವಯತ್ರಿಯರು ಲೋಹಿಯಾ, ಮಾರ್ಕ್ಸ್, ಅಂಬೇಡ್ಕರ್, ಗಾಂಧಿ ತತ್ತ್ವ ಮತ್ತು ಚಿಂತನೆಗಳಿಂದ ಪ್ರೇರೇಪಿತರಾಗಿ ಕಾವ್ಯದಲ್ಲಿ ಭಿನ್ನ ದಾರಿಯನ್ನು ತುಳಿದರೂ ತನ್ನ ಸಮುದಾಯದವರ ವಾಸನೆಯಿಂದ ದೂರವಾಗದಿರುವುದು ವಿಶೇಷವಾದ ಸಂಗತಿ.

ನೊಂದವರಿಗೆ ನ್ಯಾಯ ದೊರಕಿಸಿಕೊಡುವ ದೃಷ್ಟಿಯಿಂದ ದಲಿತ ಕಾವ್ಯ 'ಪ್ರತಿಭಟನೆ'ಯ ಹಾದಿಯನ್ನು ಅನಿವಾರ್ಯ ಕಾರಣಗಳಿಂದ ಹಿಡಿದಿದೆ. ಇತರೆ ಜಾತಿಯವರಿಂದ ಶೋಷಣೆ, ದಮನಕ್ಕೊಳಗಾದ ಚಿತ್ರಣ ದಲಿತ ಕಾವ್ಯದಲ್ಲಿ ಪ್ರಕಟವಾಗಿರುವಷ್ಟು ಉಳಿದ ಸಾಹಿತ್ಯ ಪ್ರಾಕಾರಗಳಲ್ಲಿ ಕಾಣಸಿಗುವುದಿಲ್ಲ.ಬ್ರಿಟಿಷರಿಂದ ಬಂಧ ವಿಮೋಚನೆಯಾದರೂ ನಮ್ಮ ನೆರೆಹೊರೆಯವರೇ ಶೋಷಣೆ ಮಾಡಿರುವ ಅನೇಕ ನಿದರ್ಶನಗಳಿಗೆ ದಲಿತ ಕಾವ್ಯ ಸಾಕ್ಷಿ ರೂಪವಾಗಿರುವುದರಿಂದ ಸಂಶೋಧನೆಗೆ ಯೋಗ್ಯವಾಗಿದೆ.

ಕೆಳ ಸಮುದಾಯದವರ ದಮನಕ್ಕೆ ಅನಕ್ಷರತೆ, ಬಡತನ, ಪಾರಂಪರಿಕ ಬಳುವಳಿಗಳು, ಜಮೀನ್ದಾರಿ ಪದ್ಧತಿ, ಜಾತಿ ಪದ್ಧತಿಯ ಕ್ರೌರ್ಯ ಮತ್ತು ಪರಿಣಾಮಗಳನ್ನು ಅತ್ಯಂತ ಸೂಕ್ಷ್ಮವಾಗಿ, ಕಲಾತ್ಮಕವಾಗಿ ದಲಿತ ಕಾವ್ಯ ಹಿಡಿದಿಟ್ಟಿರುವ ಉದ್ದೇಶದಿಂದ 'ದಲಿತ ಕಾವ್ಯ ಮತ್ತು ಪ್ರತಿಭಟನೆ' ಎಂಬ ವಿಷಯದಲ್ಲಿ ಅಧ್ಯಯನ ಮಾಡಿದ್ದೇನೆ.

ಪ್ರಸ್ತುತ ನಿಬಂಧದಲ್ಲಿ ದಲಿತ ಸಮುದಾಯದ ಪ್ರತಿಭಟನೆಗೆ ಅನುಗುಣವಾಗಿ 'ದಲಿತ ಸಾಹಿತ್ಯದ ಪರಿಕಲ್ಪನೆ', 'ಕನ್ನಡ ಸಾಹಿತ್ಯದಲ್ಲಿ ಪ್ರತಿಭಟನಾ ಇತಿಹಾಸ','ಪ್ರತಿಭಟನೆಯ ನೆಲೆಗಳು' ಹಾಗೂ 'ಪ್ರತಿಭಟನೆಯ ಗೆಲುವು-ಸೋಲು' ಎಂದು ವಿಭಾಗಿಸಿಕೊಳ್ಳಲಾಗಿದೆ. 'ದಲಿತ ಸಾಹಿತ್ಯದ ಪರಿಕಲ್ಪನೆ'ಯಲ್ಲಿ ಮೊದಲಿಗೆ ದಲಿತ ಎಂಬುದು ಒಂದು ಜನಾಂಗ, ಸಮುದಾಯ ಎಂದು ಸ್ಪಷ್ಟಪಡಿಸಿ, ದಲಿತ ಕವಿಗಳು ದಲಿತ ಜನಾಂಗದ ಬಗ್ಗೆ ಬರೆದ ಕಾವ್ಯಗಳು ಮಾತ್ರ ದಲಿತ ಕಾವ್ಯಗಳೆಂದು, ತನ್ನವರ ಜೀವನ ಸತ್ಯವನ್ನು ವಾಸ್ತವದ ವಸ್ತುವಿನಲ್ಲಿ ಶೋಷಣೆಗೆ ಒಳಗಾದವರ ಬದುಕಿನ ಹಲವು ಮುಖಗಳನ್ನು ಕಾವ್ಯ ರೂಪದಲ್ಲಿ ತೆರೆದಿಟ್ಟಿರುವವರೇ ದಲಿತ ಕವಿಗಳೆಂದು ನಿರ್ಣಯಿಸಲಾಗಿದೆ.

ಭಾಷೆಯ ವಿಚಾರವಾಗಿ ಹೇಳುವುದಾದರೆ ತಮ್ಮ ಆಡು ಭಾಷೆಯಲ್ಲಿ ಸ್ವಾಭಿಮಾನದಿಂದ ಯಜಮಾನ ಸಂಸ್ಕೃತಿಯನ್ನು ವಿರೋಧಿಸುವ, ವ್ಯವಸ್ಥೆಯ ವಿರುದ್ಧ ಸಿಟ್ಟು, ಪ್ರತಿಭಟನೆ ಮತ್ತು ಸೌಮ್ಯವಾದ ಭಾಷೆಗಳಿಂದಲೂ ಕಾವ್ಯ ರಚಿಸಿರುವುದನ್ನು ಗುರುತಿಸಲಾಗಿದೆ. ದಲಿತ ಸಾಹಿತ್ಯದ ತಾತ್ವಿಕ ನಿಲುವುಗಳ ವಿಚಾರದಲ್ಲಿ 'ದಲಿತ' ಎಂಬುದು ಒಂದು ಜನಾಂಗ, ಸಮುದಾಯವೆಂದು, ದಲಿತ ಜನಾಂಗಕ್ಕೆ ಒಂದು 'ಅಥೆಂಟಿಸಿಟಿ' ಇದ್ದು, ಈ ಅಥೆಂಟಿಸಿಟಿಯನ್ನು ಸ್ಥಾಪಿಸುವ ಅಂಬೇಡ್ಕರ್‌ರ ಸಾಮಾಜಿಕ ಕ್ರಾಂತಿಯ ವಾರಸುದಾರರಾಗಿ ದಲಿತ ಕವಿಗಳು ಬಂದಿದ್ದಾರೆಂದು ಗುರುತಿಸಲಾಗಿದೆ. ದಲಿತ ಪ್ರಜ್ಞೆಯಲ್ಲಿ ದಲಿತ ಕವಿಗಳು ತಮ್ಮ ಜನಾಂಗದವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನ ಮಾಡಿರುವುದನ್ನು ಚರ್ಚಿಸಲಾಗಿದೆ.

'ಕನ್ನಡ ಸಾಹಿತ್ಯದಲ್ಲಿಪ್ರತಿಭಟನಾ ಇತಿಹಾಸ' ಎಂಬ ಅಧ್ಯಾಯದಲ್ಲಿ ಜಾತಿ ಶೋಷಣೆ, ಪ್ರತಿಭಟನೆ ಎಂಬುದು ತಾತ್ಕಾಲಿಕವಲ್ಲ, ಇದೊಂದು ಸಾಹಿತ್ಯ ಪ್ರಕಾರಕ್ಕೆ ಮಾತ್ರ ಸೀಮಿತವಾದುದ್ದಲ್ಲ. ಒಂದು ಕಾಲಘಟ್ಟದ ಪ್ರಕ್ರಿಯೆಯಲ್ಲ. ಇದು ಕನ್ನಡ ಸಾಹಿತ್ಯದಲ್ಲಿ ಹಾಸುಹೊಕ್ಕಾಗಿದೆ ಎಂದು ದೃಢಪಡಿಸುವ ಸಲುವಾಗಿ ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಕರ್ಣನಿಗಾದ ಜಾತಿ ನಿಂದನೆ, ವಚನ ಸಾಹಿತ್ಯದಲ್ಲಿ ಕಂಡು ಬರುವ ಸಾಮಾಜಿಕ ಶೋಷಣೆ, ಕನಕದಾಸರ 'ರಾಮಧಾನ್ಯ ಚರಿತೆ'ಯಲ್ಲಿ 'ರಾಗಿ' ಮತ್ತು 'ನೆಲ್ಲಿ'ನ ಹೋರಾಟ, ಸರ್ವಜ್ಞನ ಕಾಲದಲ್ಲಿ ದಲಿತರಿಗಾದ ಶೋಷಣೆ, ಕುಮಾರವ್ಯಾಸ ಭಾರತದಲ್ಲಿ ಕರ್ಣ ಅನುಭವಿಸಿದ ಕುಲದ ಶೋಷಣೆ ಹಾಗೂ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡತಿ', ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿಗಳಲ್ಲಿ ಕಂಡು ಬರುವ ದಲಿತ ಸಂವೇದನೆಗಳ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಪ್ರತಿಭಟನೆಯ ನೆಲೆಗಳಲ್ಲಿ ಅತಿಮುಖ್ಯವಾದ ಅಂಶಗಳೆಂದರೇ 'ಅಸ್ಪೃಶ್ಯತೆ, 'ನೋವು', 'ಹಸಿವು', 'ಲೈಂಗಿಕ ಶೋಷಣೆ' 'ಅರಿವಿನ ವಂಚನೆ' ಇವುಗಳಿಂದ ದಲಿತ ಕಾವ್ಯಗಳು ಹೇಗೆ ವಿರೋಧ ವ್ಯಕ್ತಪಡಿಸಿದವು ಎಂಬುದನ್ನು ಅರಿಯುವುದೇ ಈ ಅಧ್ಯಾಯದ ಉದ್ದೇಶವಾಗಿದೆ. ಮುಂದೆ ಪ್ರತಿಭಟನೆಯ ನೆಲೆಗಳ ಸಂಕ್ಷಿಪ್ತ ಮಾಹಿತಿಯನ್ನು ನೀಡಲಾಗಿದೆ.

'ಅಸ್ಪೃಶ್ಯತೆ : ಪ್ರತಿಭಟನೆ'ಯ ಅಧ್ಯಾಯದಲ್ಲಿ ದಲಿತರು ಜಾತಿ,ವರ್ಣ, ಶೈಕ್ಷಣಿಕ, ಆರ್ಥಿಕ ಅಸ್ಪೃಶ್ಯತೆಗಳಿಂದ ಜರ್ಜರಿತರಾಗಿರುವುದು, ಸವರ್ಣೀಯರು, ಜಮೀನ್ದಾರರು, ರಾಜಕಾರಣಿಗಳು, ಮಾಲೀಕರು, ಯಜಮಾನರು, ಮೇಲು ವರ್ಗಕ್ಕೆ ಸೇರಿರುವ ಈ ವರ್ಗದವರಿಂದ ಅನುಭವಿಸಿದ ಅವಮಾನ, ಶೋಷಣೆಗಳಿಗೆ 'ದಲಿತ ಕಾವ್ಯ' ಅಭಿಮುಖವಾಗಿರುವುದನ್ನು ವಿಶ್ಲೇಷಿಸಲಾಗಿದೆ.

ಹಸಿವು ದಲಿತರ ಪಾಲಿಗೆ ತಲಾತಲಾಂತರದಿಂದ ಬಂದ ರಕ್ತ ಸಂಬಂಧದ ನಂಟಿನಂತೆ ಆಕ್ರಮಣ ಮಾಡಿದೆ. ಹಸಿವಿನ ಬೆಂಕಿಯಲ್ಲಿ ಬೆಂದು ವ್ಯವಸ್ಥೆಯ ಕೈ ಗೊಂಬೆಗಳಾಗಿ ರೂಪುಗೊಂಡು, ಅನುಭವಿಸಿದ ಯಾತನೆಯಲ್ಲಿ ಸಮುದಾಯದಒಡಲಾಳದ ವಾಸ್ತವವನ್ನು ಅನಾವರಣಗೊಳಿಸಲಾಗಿದೆ. ದಲಿತರ ಹಸಿವಿನ ಪರಿಸ್ಥಿತಿಗೆ ವ್ಯವಸ್ಥೆಯೂ ಒಂದು ರೀತಿಯಲ್ಲಿ ಹೊಣೆಯಾಗಿರುವುದನ್ನು 'ಹಸಿವು : ಪ್ರತಿಭಟನೆ'ಯಲ್ಲಿ ಚರ್ಚಿಸಲಾಗಿದೆ.

'ನೋವು ಮನುಷ್ಯ ಜೀವನದ ಅವಿಭಾಜ್ಯ ಅಂಗ' ದಲಿತರ ವಿಷಯ ಬಂದಾಗ ಮಾನಸಿಕ, ಲೈಂಗಿಕ, ದೈಹಿಕ ನೋವುಗಳಿಂದ ತತ್ತರಿಸಿರುವುದು ಕಂಡು ಬಂದಿದೆ. ಇಂಥ ನೋವಿನ ನಡುವೆಯೂ ನೈತಿಕ ಎಚ್ಚರ, ವಿವೇಚನಾ ಶಕ್ತಿಯಿಂದ, ನೋವಿನಿಂದಾದ ಆಕ್ರೋಶವನ್ನು ಹೊರ ಹಾಕಿರುವುದು, ವ್ಯವಸ್ಥೆಯಿಂದ ಪಡೆದ ನೋವನ್ನು ಪ್ರಕೃತಿಯ ಸಹನೆಯಂತೆ ತಡೆದುಕೊಂಡಿರುವ ಅನೇಕ ಜ್ವಲಂತ ಸಮಸ್ಯೆಗಳಿಗೆ 'ದಲಿತ ಕಾವ್ಯ' ಅಭಿವ್ಯಕ್ತವಾಗಿರುವುದು 'ನೋವು : ಪ್ರತಿಭಟನೆ'ಯಲ್ಲಿ ಚರ್ಚೆಗೊಂಡಿದೆ. 'ಶಿಕ್ಷಣ, ಸಂಘಟನೆ, ಹೋರಾಟ' ದಲಿತೋದ್ಧಾರಕ್ಕೆ ಅಂಬೇಡ್ಕರ್ ತೋರಿಸಿದ ದಾರಿ. ಈ ಎಚ್ಚರದ ಮಾರ್ಗಕ್ಕೆ ತೆರೆದುಕೊಳ್ಳದೆ ನೊಗಕ್ಕೆ ಕೊರಳು ಕೊಡುವ ದನದಂತೆ ಮತ್ತೆ ಮತ್ತೆ ಹಿಂದಿನಂತೆಯೇ ಹೆಜ್ಜೆ ಹಾಕಿದ್ದಕ್ಕೆ ಈಗಿನ ದಲಿತ ಕವಿಗಳು ತಮ್ಮ ಕಾವ್ಯದ ಮೂಲಕ ತೋರಿಸಿರುವ ಪ್ರತಿಕ್ರಿಯೆಯನ್ನು ಚರ್ಚಿಸಲಾಗಿದೆ.

ಜ್ಞಾನದೆಡೆಗೆ ಹೆಜ್ಜೆ ಹಾಕದೆ, ಸಾಮರ್ಥ್ಯವಿದ್ದೂ, ಅನ್ಯಾಯವನ್ನು ಪ್ರತಿಭಟಿಸುವ ಸಾಮರ್ಥ್ಯವನ್ನು ಕಳೆದುಕೊಂಡಿರುವ ತನ್ನವರ ಬಗೆಗೆ ಕವಿಯ ಆಕ್ರೋಶ, ಕರುಣಾ ಭಾವಗಳನ್ನು ಗುರುತಿಸಿರುವುದನ್ನು'ಅರಿವಿನ ವಂಚನೆ : ಪ್ರತಿಭಟನೆ'ಯಲ್ಲಿ ಚರ್ಚಿಸಲಾಗಿದೆ. ಅಸಮಾನತೆಯನ್ನು ಪ್ರಶ್ನಿಸುವ, ಪ್ರತಿಭಟಿಸುವ ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸಿ

ಮಾನವತೆಯ ಆಧಾರದಲ್ಲಿ ನವ ಸಮಾಜವನ್ನು ಕಟ್ಟುವ ಸಾಮರ್ಥ್ಯವು ದುಡಿವ ದಲಿತರಿಗಿದೆ. ದಲಿತರಿಗೆ ಶೋಷಣೆ ಅನುಭವಿಸುವುದು ಹೊಸತಲ್ಲ. ಇವರು ಅನುಭವಿಸಿದ ಶೋಷಣೆಗಳು ನಿನ್ನೆ ಬಂದು, ಇಂದು ನೆಲೆಸಿ, ನಾಳೆ ಹೋಗುವಂಥದ್ದೂ ಅಲ್ಲ, ಶತಮಾನಗಳಿಂದ ಇವರಲ್ಲೇ ನೆಲೆ ನಿಂತಿರುವಂಥದ್ದು. ಹೀಗೆ ಶೋಷಣೆಯಲ್ಲೇ ಹುಟ್ಟಿ, ಬೆಳೆದು, ಸಾಯುವ ಮಂದಿಗೆ ಅತ್ಯಂತ ಮುಜುಗರ ಉಂಟು ಮಾಡಿದ ಶೋಷಣೆ ಎಂದರೆ 'ಲೈಂಗಿಕ ಶೋಷಣೆ' ಇದು ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಧಾರ್ಮಿಕ ಶೋಷಣೆಗಳನ್ನು ಮೀರಿ ನಿಂತದ್ದು. ಇಲ್ಲಿನ ಎಲ್ಲಾ ಶೋಷಣೆಗಳಿಗೂ ಕಾರಣ, ಸಾಕ್ಷಿಗಳನ್ನು ಒದಗಿಸಬಹುದು. ಆದರೆ ಲೈಂಗಿಕ ಶೋಷಣೆಗೆ ಕಾರಣವಾಗಲಿ, ಸಾಕ್ಷಿಗಳಾಗಲಿ ಇದ್ದರೂ, ಜಗತ್ತಿಗೆ ಗೋಚರಿಸುವುದಿಲ್ಲ. ಹೀಗೆ ಲೈಂಗಿಕ ಶೋಷಣೆಯಿಂದ ನರಳಿದ ದಲಿತ ಹೆಣ್ಣಿನ ಸ್ಥಿತಿ–ಗತಿಗಳನ್ನು 'ಲೈಂಗಿಕ ಶೋಷಣೆ : ಪ್ರತಿಭಟನೆ' ಎಂಬ ಅಧ್ಯಾಯದಲ್ಲಿ ಕಾಣಬಹುದು. ಈ ಶೋಷಣೆ ವ್ಯವಸ್ಥೆಯಿಂದ ಅಥವಾ ತನ್ನವರಿಂದ ಅಥವಾ ಇಬ್ಬರಿಂದಲೂ ಆಯಿತೇ? ಎಂಬುದನ್ನು ಹಾಗೂ ಆದ ಶೋಷಣೆಗೆ ಹೆಣ್ಣಿನ ಪ್ರತಿಭಟನಾ ವೈಖರಿಯನ್ನು ದಲಿತ ಕಾವ್ಯದ ಅಧ್ಯಯನದಿಂದ ಕಂಡುಕೊಳ್ಳುವ ಪ್ರಯತ್ನಮಾಡಲಾಗಿದೆ.

2

ಇಂದು ದಲಿತ ಸಾಹಿತ್ಯದ ವಿಚಾರಧಾರೆ ಸಮಾಜದ ಎಲ್ಲಾ ವರ್ಗದ ಜನರ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. 'ದಲಿತರ' ಪ್ರತಿಭಟನಾ ಕಾರ್ಯ, ತಂತ್ರಗಳನ್ನು ವ್ಯಾಪಕವಾಗಿ ಅಧ್ಯಯನ ಮಾಡಲಾಗಿದೆ. ದಲಿತ ಕಾವ್ಯದ ವ್ಯಾಪ್ತಿಗೆ ಒಳಪಡುವ ದಲಿತ ಪೂರ್ವದ ಸ್ಥಿತಿ–ಗತಿ, ಪರಿಣಾಮ, ಇದಕ್ಕೆ ದಲಿತರ ಪ್ರತಿಕ್ರಿಯೆಯನ್ನು ಗ್ರಹಿಸಿ, ಪ್ರತಿಭಟನಾ ಸಾಹಿತ್ಯವಾಗಿ ಬೆಳೆದು ಬಂದ ಇವರ ತತ್ವ, ಸಿದ್ಧಾಂತ, ಕಾರ್ಯತಂತ್ರ, ಸಮಾನತೆ ಸಾಧಿಸಲು ನಡೆಸಿದ ಪ್ರಯತ್ನ ಕುರಿತು ವಿಶ್ಲೇಷಿಸುತ್ತದೆ.

ದಲಿತ ಕಾವ್ಯಕ್ಕೆ ಹಿನ್ನೆಲೆಯಾಗಿ ನಿಂತಿರುವ ಹಳಗನ್ನಡ, ನಡುಗನ್ನಡ ಮತ್ತು ದಲಿತ ಪೂರ್ವ ಹೊಸಗನ್ನಡದಲ್ಲಿ 'ದಲಿತ ಪ್ರಜ್ಞೆ ಮತ್ತು ಪ್ರತಿಭಟನೆ'ಯ ಸ್ಥೂಲವಾದ ಪರಿಚಯ, ಕಾಲದ ನೆಲೆಯಲ್ಲಿ ಎಲ್ಲಾ ದಲಿತ ಕವಿಗಳ ಕಾವ್ಯಗಳಲ್ಲಿ ವ್ಯಕ್ತವಾಗಿರುವ ಪ್ರತಿಭಟನೆಯನ್ನು ಹೆಕ್ಕಿ ತೆಗೆಯುವಪ್ರಧಾನ ಉದ್ದೇಶವಿದ್ದರೂ ಪ್ರಾಸಂಗಿಕವಾಗಿ ಬರುವ ಕವಿ ಕೃತಿಗಳನ್ನು ಸ್ಥೂಲವಾಗಿ ಅಧ್ಯಯನ ಮಾಡಲಾಗಿದೆ.

ಈ ಮಹಾ ಪ್ರಬಂಧಕ್ಕೆ ಸಿದ್ಧಲಿಂಗಯ್ಯನವರ 'ಮೆರವಣಿಗೆ' (ನಾಲ್ಕು ಕವನ ಸಂಕಲನಗಳ ಸಂಗ್ರಹ), ಮ.ನ. ಜವರಯ್ಯನವರ 'ವಿದ್ರೋಹ' (ಐದು ಸಮಗ್ರ ಕವನ ಸಂಕಲನಗಳು), ಅರವಿಂದ ಮಾಲಗತ್ತಿಯವರ 'ಕಪ್ಪು ಕಾವ್ಯ', 'ಮೂರನೆಯ ಕಣ್ಣು', 'ನಾದ–ನಿನಾದ', ವಿ. ಮುನಿವೆಂಕಟಪ್ಪನವರ 'ಕಾಡು ಕಣಿವೆಯ ಹಕ್ಕಿ', 'ಸ್ವಾಭಿಮಾನದ ಬೀಡಿಗೆ', ಮುಳ್ಳೂರು ನಾಗರಾಜ್‌ರ 'ದಾಖಲೆ', 'ನೆಲದ ಜೋಗುಳ', ಸುಬ್ಬು ಹೊಲೆಯಾರ್‌ರವರ 'ಎಲ್ಲರ ಬೆರಳಲ್ಲೂ ಅಂಟಿಕೊಂಡಿರುವ ದುಃಖವೇ', 'ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು', ಎಲ್. ಹನುಮಂತಯ್ಯನವರ 'ಕಳ್ಳಿ ಹಾಲಿನ ಕಡಲು'(ನಾಲ್ಕು ಕವನ ಸಂಕಲನಗಳ ಸಂಗ್ರಹ), ಕೆ.ಬಿ. ಸಿದ್ಧಯ್ಯನವರ 'ಗಲ್ಲೆಬಾನಿ', ಅನುಸೂಯ ಕಾಂಬಳೆಯವರ 'ಮತ್ಸ್ಯಗಂಧಿಯ ಹಾಡು'. ಬಿ.ಟಿ. ಲಲಿತಾ ನಾಯಕ್‌ರ 'ಒಡಲ ಬೇಗೆ', ದು.ಸರಸ್ವತಿಯವರ 'ಜೀವಸಂಪಿಗೆ', ಮೂಡ್ನಕೂಡು ಚಿನ್ನಸ್ವಾಮಿಯವರ 'ಚಂದಿರನ ಕಣ್ಣು ಇಂಗಲಾರದ ಹುಣ್ಣು' ಮೊದಲಾದ ಮೂಲ ಹಾಗೂ ಆಯ್ದ ಕವನ ಸಂಕಲನಗಳನ್ನು ಬಳಸಿಕೊಂಡಿದ್ದೇನೆ.

ಅನೇಕ ದಲಿತ ಕವಿಗಳು ಇತ್ತೀಚಿನ ದಿನಗಳಲ್ಲಿ ಸಾಹಿತ್ಯದ ಕದ ಬಡಿಯುತ್ತಿದ್ದರೂ ಅಥವಾ ದಲಿತ ಸಾಹಿತ್ಯದಲ್ಲಿ 60ಕ್ಕೂ ಹೆಚ್ಚು ಕವಿಗಳಿದ್ದರೂ, ಮೇಲೆ ಸೂಚಿಸಿರುವ ವ್ಯಕ್ತಿಗಳು ಹಾಗೂ ಅವರ ಕೃತಿಗಳು ಸಾಹಿತ್ಯ ಕ್ಷೇತ್ರದಲ್ಲಿ ಉಂಟು ಮಾಡಿದ ಸದ್ದು, ಬೇರೆ ದಲಿತ ಕವಿಗಳಲ್ಲಿ ಅಷ್ಟಾಗಿ ಕಂಡು ಬಂದಿಲ್ಲವೆಂದು ಭಾವಿಸಿರುತ್ತೇನೆ. ಈಗಾಗಲೇ ಉಲ್ಲೇಖವಾಗಿರುವ ಕೃತಿಗಳಲ್ಲಿ ಪ್ರತಿಭಟನಾ ತೀವ್ರತೆ, ನೋವು, ಅನುಭವ ಜನ್ಯವಾದ ಸತ್ಯಾಂಶಗಳು ಪ್ರಸ್ತುತ ಪ್ರಬಂಧದ ಕೇಂದ್ರ ಬಿಂದು.

ಈಗಾಗಲೇ ಉಲ್ಲೇಖವಾಗಿರುವ ಕವಿ ಹಾಗೂ ಅವರ ಕವನ ಸಂಕಲನಗಳಲ್ಲಿ ಪ್ರತಿಭಟನೆಯ ನೆಲೆಗಳಾದ ಅಸ್ಪೃಶ್ಯತೆ, ಹಸಿವು, ನೋವು, ಲೈಂಗಿಕ ಶೋಷಣೆ,ಅರಿವಿನ ವಂಚನೆಯ ನೆಲೆಗಳಿಗೆ ಹತ್ತಿರವಾದ ಕಾವ್ಯಗಳನ್ನು ಆರಿಸಿಕೊಂಡಿರುತ್ತೇನೆ. ಅಂಬೇಡ್ಕರ್, ರಾಮ ಮನೋಹರ ಲೋಹೀಯ, ಮಹಾತ್ಮ ಫುಲೆ, ಪೆರಿಯಾರ್ ರಾಮಸ್ವಾಮಿ, ಮಾರ್ಕ್ಸ್ ಹಾಗೂ ಮಾವೋ ಮೊದಲಾದ ರಾಜಕೀಯ ಚಿಂತಕರ ಸೈದ್ಧಾಂತಿಕ ನೆಲೆಗಳು, ದಲಿತ ಕವಿಗಳ ಮೇಲೆ ಹೆಚ್ಚು ಪ್ರಭಾವ ಬೀರಿರುವ ಕಾರಣವನ್ನು

ಹಾಗೂ ಮಹಾ ಪ್ರಬಂಧಕ್ಕೆ ಇವರ ಕವನಗಳು ನೇರವಾಗಿ ನೆರವಾಗುವುದರಿಂದ ಹಾಗೂ ಇಲ್ಲಿ ಉಲ್ಲೇಖಿಸಿರುವ ಕವನ ಸಂಕಲನಗಳಲ್ಲಿ ಹೊಸತನವಾದ ಕಾವ್ಯ ಪ್ರಯೋಗ ಹಾಗೂ ಚಳುವಳಿಯ ತೀವ್ರತೆ ಉಳಿದವರಲ್ಲಿ ಕಾಣ ಸಿಗುವುದಿಲ್ಲ ಎಂಬುದು ನನ್ನ ನಂಬಿಕೆ.

ಸಮಾಜದ ಅನಿಷ್ಟಗಳಲ್ಲಿ ಒಂದಾದ 'ಜಾತಿ' ವ್ಯವಸ್ಥೆಯಿಂದ ದಲಿತ ಸಮುದಾಯವು ಅನುಭವಿಸಿದ ಯಾತನೆಗಳನ್ನು ಅಧ್ಯಯನ ಮಾಡುವುದೆ ಈ ಪ್ರಬಂಧದ ಗುರಿ. ಇದಕ್ಕೆ ಸಹಕಾರಿಸುವ, ದನಿಯೆತ್ತಿ, ಮುಖವೆತ್ತಿ ನಿಂತಿರುವ ಕಾವ್ಯಗಳನ್ನು ನನ್ನ ಅಧ್ಯಯನಕ್ಕೆ ಆರಿಸಿಕೊಂಡಿರುತ್ತೇನೆ.

ಪ್ರತಿಯೊಬ್ಬ ವ್ಯಕ್ತಿಗೂ ಒಂದೊಂದು ರೀತಿಯ ಸಮಸ್ಯೆಗಳು ಕಾಡುತ್ತಿರುತ್ತವೆ. ಒಬ್ಬರಿಗೆ ಆರ್ಥಿಕವಾಗಿ. ಇನ್ನೊಬ್ಬರಿಗೆ ಸಾಮಾಜಿಕವಾಗಿ ಮತ್ತೊಬ್ಬರಿಗೆ ಶೈಕ್ಷಣಿಕವಾಗಿ ಸಮಸ್ಯೆಗಳು ಎದುರಾಗುತ್ತವೆ. ಅವು ಅವರ ಯೋಗ್ಯತೆಯ ಅನುಸಾರವಾಗಿ ಎದುರಾಗುತ್ತವೆ. ಆದರೆ ದಲಿತ ಸಮುದಾಯಕ್ಕೆ 'ಸಮಸ್ಯೆಗಳು' ಎಂಬುದು ಬೆನ್ನ ಹಿಂದೆ ಬರುವ ನೆರಳಿನಂತೆ, ಸದಾ ಅವರನ್ನು ಅಂಟಿಕೊಂಡಿರುತ್ತವೆ. 'ಜಾತಿ' ಅಸ್ಪೃಶ್ಯತೆಗೆ ದಲಿತರು ಯಾವುದೇ ರೀತಿಯಿಂದಲೂ ಕಾರಣರಲ್ಲ. ಇದರ ನೇರ ಹೊಣೆ, ನೈತಿಕ ಹೊಣೆ ಹೊರಬೇಕಾದವರು ಉನ್ನತ ವರ್ಗದವರು. ಈ ರೀತಿಯ 'ಅಸ್ಪೃಶ್ಯತೆ'ಯ ಸಮಸ್ಯೆಯನ್ನು ವ್ಯಕ್ತಪಡಿಸಿದ್ದೆ ಇವರು. ಹಾಗೂ ಇದಕ್ಕೆ ಸಂಪೂರ್ಣವಾಗಿ ಬಲಿಪಶುಗಳಾದವರು ಮಾತ್ರ ದಲಿತ ಸಮುದಾಯದವರು. ಉಳ್ಳವರಿಂದ ದಲಿತರು ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ಆರ್ಥಿಕ ಅಸ್ಪೃಶ್ಯತೆಗಳನ್ನು ಎದುರಿಸಬೇಕಾಯಿತು. ಮನುಷ್ಯನಿಗೆ ಮೂಲಭೂತವಾಗಿ ಇರಬೇಕಾದ ಸವಲತ್ತುಗಳ ಮೇಲೆಯೇ ಉನ್ನತ ವರ್ಗ ಅಸ್ಪೃಶ್ಯತೆಯ ನಿರ್ಬಂಧವೇರಿ, ದಲಿತ ಸಮುದಾಯದ ಏಳಿಗೆಗೆ ಮಾರಕವಾಯಿತ್ತೆಂದು ತಿಳಿದ ದಲಿತ ಕವಿಗಳು ತನ್ನವರ ಅಭಿವೃದ್ಧಿಗೆ ಮುಳ್ಳಾದವರು ಮೇಲ್ವರ್ಗದವರೇ ಎಂದು ನಿರ್ಧರಿಸಿ, ಇದನ್ನು ತಮ್ಮ ಕಾವ್ಯಗಳ ಮೂಲಕ ಪ್ರತಿಭಟಿಸುವ ಅಂಶವನ್ನು 'ಅಸ್ಪೃಶ್ಯತೆ : ಪ್ರತಿಭಟನೆ' ಎಂಬ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

ಈ ಅಧ್ಯಾಯಕ್ಕೆ ಪರಿಗಣಿಸಿರುವ ಕಾವ್ಯಗಳೆಂದರೆ ಮ.ನ.ಜವರಯ್ಯರವರ 'ಯಾವಾಗ', 'ಅಪ್ಪ ಹೇಳಿದ ಕಥೆ', 'ಕನ್ನಡದ ಕಟ್ಟಾಳು', ಎಲ್. ಹನುಮಂತಯ್ಯನವರ 'ಅಪ್ಪಾ', 'ಕಾರು ನಿಂತಲ್ಲೇ ನಿಂತಿದೆ', 'ನೆನಪುಗಳೇ ಸಾಕ್ಷಿ', 'ದ್ರೋಣರಿದ್ದಾರೆ',

ಮೂಡ್ನಾಕೂಡು ಚಿನ್ನಸ್ವಾಮಿಯವರ 'ಸಂಬಂಧಗಳ ಅಂದು-ಇಂದು', 'ರೋಮನ್ ರಾಜ್ಯದ ಗುಲಾಮನೂ ಹಂಗರಹಳ್ಳಿಯ ಜೀತಗಾರನೂ', 'ಮತ್ತೆ ಮಳೆ ಬರುವ ಮುನ್ನ', ಅರವಿಂದ ಮಾಲಗತ್ತಿಯವರ 'ಸಮಾಜದ ಹಾಡು', 'ಶ್ರದ್ಧಾಂಜಲಿ', 'ಕಪ್ಪು ಕಾವ್ಯ', ಸಿದ್ಧಲಿಂಗಯ್ಯನವರ 'ಅಲ್ಲೆ ಕುಂತವೆ', 'ಯುಗಾದಿ-1', 'ಗುಡಿಗೆ ಹೋಗುವವರ ಹಾಡು', ಅನಸೂಯ ಕಾಂಬಳೆಯವರ 'ಹಕ್ಕಿಸಾಲು', 'ನಿರೀಕ್ಷೆ', ಸುಬ್ಬು ಹೊಲೆಯಾರ್‌ರವರ 'ದೇವರನ್ನು ಸಾಕಿಕೊಂಡವರಿಲ್ಲ', ಬಿ.ಟಿ. ಲಲಿತಾ ನಾಯಕ್‌ರವರ 'ಬೇಡ ದಾಸಿಯ ಪಟ್ಟ', ಮುಳ್ಳೂರು ನಾಗರಾಜ್‌ರವರ 'ವಿದಾಯ', ವಿ. ಮುನಿವೆಂಕಟಪ್ಪನವರ 'ಇದು ಕವಿತೆ ಅಲ್ಲ',ಸುಬ್ಬು ಹೊಲೆಯಾರ್‌ರವರ 'ಅಲ್ಲಮ್ಮನ ಹುಡುಕುತ', ಕೆ.ಬಿ. ಸಿದ್ಧಯ್ಯನವರ 'ಗಲ್ಲೆಬಾನಿ' ಎಂಬಿತ್ಯಾದಿ ಕಾವ್ಯಗಳಲ್ಲಿ ದಲಿತರು ಅನುಭವಿಸಿದ ಅಸ್ಪೃಶ್ಯತೆಯ ಶೋಷಣೆ ಹಾಗೂ ಇದಕ್ಕೆ ಇವರು ತೋರಿದ ಪ್ರತಿಭಟನಾ ಪ್ರತಿಕ್ರಿಯೆಯನ್ನು ಪ್ರಬಂಧದ ವ್ಯಾಪ್ತಿಗೆ ಒಳಪಡಿಸಿಕೊಂಡಿರುತ್ತೇನೆ.

ಹೊಟ್ಟೆ ತುಂಬಿಸಿಕೊಳ್ಳಲು ಜನ ಒಳ್ಳೆ ಮತ್ತು ಕೆಟ್ಟ ದಾರಿಗಳನ್ನು ಹಿಡಿಯುವುದು ಸಾಮಾನ್ಯ . ಮರ್ಯಾದೆಯೇ ಮುಖ್ಯವೆಂದು ನಿರ್ಧರಿಸುವ ಬಡವರಿಗೆ ಹೊಟ್ಟೆ ತುಂಬಿಸಿಕೊಳ್ಳುವುದು ಕೊಂಚ ಕಷ್ಟವಾಗಬಹುದು. ಆದರೆ ಹೊಟ್ಟೆಯೇ ಮುಖ್ಯವೆಂದವರಿಗೆ ಅನ್ನ ಸಂಪಾದನೆಯ ದಾರಿ ಯಾವುದಾದರೂ ಸರಿಯೇ. ಆದರೆ ದಲಿತರಿಗೆ ಮರ್ಯಾದೆಯ ಬಾಳು, ಶ್ರಮಕ್ಕೆ ತಕ್ಕ ಪ್ರತಿಫಲ ಎರಡರ ಅವಶ್ಯಕತೆ ತುಂಬಾ ಮುಖ್ಯವಾಗಿದೆ.

ಮಾಡುವ ಕೆಲಸದಲ್ಲೂ ತಮ್ಮ ಮಾನ ಕಾಪಾಡಿಕೊಳ್ಳುವ ಸಲುವಾಗಿ ತುತ್ತಿನ ಚೀಲ ತುಂಬಿಸಿಕೊಳ್ಳಲು ಮೇಲ್ವರ್ಗದವರ ಮನೆಯಲ್ಲಿ ಜೀತ ಮಾಡಿ, ಕೊಟ್ಟಿಗೆಯಲ್ಲಿಯೇ ಅತೃಪ್ತ ಜೀವನ ನಡೆಸುವ ಸಂದರ್ಭ ಹಾಗೂ ದಲಿತರ ಬಳಕೆಯಿಂದ ತನ್ನವರ ತುತ್ತನ್ನು ನಿಗಧಿಪಡಿಸಿಕೊಳ್ಳುವ ಮೇಲ್ವರ್ಗದವರ ಸ್ಥಿತಿ ಇವೆರಡರ ಪರಿಧಿ 'ಹಸಿವು ಪ್ರತಿಭಟನೆ' ಎಂಬ ಅಧ್ಯಾಯದಲ್ಲಿ ಕಂಡು ಬರುತ್ತದೆ. ಈ ಅಧ್ಯಾಯದ ವ್ಯಾಪ್ತಿಗೆ ಒಳಪಡುವ ಪದ್ಯಗಳೆಂದರೆ ಸಿದ್ಧಲಿಂಗಯ್ಯನವರ 'ನನ್ನ ಜನಗಳು', 'ಭೂತದ ಕತೆ', 'ಚಳಿಯ ಹಾಡು', ಅನಸೂಯ ಕಾಂಬಳೆಯವರ 'ಸುನಾಮಿ', 'ಹಸಿದ ಹೊಟ್ಟೆಯ ಹಾಡು', ಸುಬ್ಬು ಹೊಲೆಯಾರ್‌ರವರ 'ಬೂಟ್ ಪಾಲಿಶ್',

ಮುಳ್ಳೂರು ನಾಗರಾಜ್‌ರವರ 'ನೆಲದ ಜೋಗುಳ', ಮೂಡ್ನಾಕೂಡು ಚಿನ್ನಸ್ವಾಮಿರವರ' 'ಈ ವಿಚಾರಧಾರೆ', 'ರಮ್ಯ ಕವಿತೆ ಮತ್ತು ನಾನು', 'ತುತ್ತು ಅನ್ನಕ್ಕಾಗಿ', 'ಗಿರಿಜನರು', ವಿ. ಮುನಿವೆಂಕಟಪ್ಪನವರ 'ಹಸಿವು ಮತ್ತು ಅವಮಾನ', 'ಹಸಿವೇ ನೀನೆಷ್ಟು ಭಯಂಕರ', ಮ.ನ.ಜವರಯ್ಯರವರ 'ಹೊಟ್ಟೆಗಿಲ್ಲದ ಹೊಟ್ಟೆ', ಮಾಲಗತ್ತಿಯವರ 'ಕೂಲಿಗಾರನ ಮೌನಗೀತೆ', 'ಸಾಫ್ಟ್‌ವೇರ್ ಮತ್ತು ಎಮ್ಮೆ', 'ಬಾಡಿಗೆ ಮನೆಯ ಕೋಳಿಗಳ ಬದುಕು', ದು.ಸರಸ್ವತಿಯವರ 'ಪುಟ್ಟ ಹೊಟ್ಟೆಗಳು ಧನ್ಯವಾದಗಳು' ಎಂಬಿತ್ಯಾದಿ ಪದ್ಯಗಳನ್ನು ಈ ಅಧ್ಯಾಯದ ವ್ಯಾಪ್ತಿಗೆ ತೆಗೆದುಕೊಂಡಿರುತ್ತೇನೆ.

ದಲಿತ ಸಮುದಾಯ ಎಂದಾಕ್ಷಣ ನೊಂದ ಸಮುದಾಯವೆಂದು, ದಲಿತ ಕಾವ್ಯ ಎಂದಾಕ್ಷಣ ನೊಂದವರ ಕಾವ್ಯ ಎಂಬುದು ಇವತ್ತಿನ ವಾಡಿಕೆಯಾಗಿದೆ. ಆದರೆ ಯಾಕೆ ಈ ಸಮುದಾಯಕ್ಕೆ 'ನೋವು' ಅಂಟಿಕೊಂಡಿದೆ. ಯಾವ ಉದ್ದೇಶಕ್ಕೆ ಇವರಿಗೆ ಈ ಚಿತ್ರಹಿಂಸೆ ಎಂಬುದು ದಲಿತೇತರರಲ್ಲಿ ನಿಗೂಢವಾಗಿಯೇ ಉಳಿದಿದೆ ಎಂಬುದು ನನ್ನ ಅಭಿಪ್ರಾಯ. ಮೇಲ್ನೋಟಕ್ಕೆ ದಲಿತೇತರರ ಪ್ರಕಾರ 'ಜಾತಿ'ಯೊಂದೇ ಇವರ ನೋವಿಗೆ ಕಾರಣವೆಂದು ಹೇಳಿ ಜಾರಿಕೊಳ್ಳುತ್ತಾರೆ. ಆದರೆ ದಲಿತ ಸಮುದಾಯದ ಪ್ರತಿನಿಧಿಗಳಾದ ದಲಿತ ಕವಿಗಳು ದಲಿತರ ನೋವಿನ ಮೂಲ ಹುಡುಕಿ, ಅದಕ್ಕೆ ಪರಿಹಾರ ಹುಡುಕಿ, ಶೋಷಣೆ ನೀಡಿದವರ ವಿರುದ್ಧ ಪ್ರತಿಭಟಿಸುವ ಸಲುವಾಗಿ ಕಾವ್ಯದ ಹಾದಿಯಲ್ಲಿ ನಡೆದರು. ಇವರ ಈ ಹಾದಿಗೆ ಹೂ ಹಾಸಿಗೆಯಾದ ಕಾವ್ಯಗಳೆಂದರೆ ಸಿದ್ಧಲಿಂಗಯ್ಯನವರ 'ಒಂದು ಪದ', 'ಹಕ್ಕಿಗಳು', ಮೂ.ಚಿನ್ನಸ್ವಾಮಿಯವರ 'ರೋಮನ್ ರಾಜ್ಯದ ಗುಲಾಮನೂ ಹಂಗರಹಳ್ಳಿಯ ಜೀತಗಾರನೂ', 'ಚಪ್ಪಲಿ ಮತ್ತು ನಾನು', ನಾನೊಂದು ಮರವಾಗಿದ್ದರೆ', ಮ.ನ.ಜವರಯ್ಯರವರ 'ಯಲ್ಲಮ್ಮನ ಬಗುತಿ', 'ಆ ಮುಗಿಲು ಈ ನೆಲ', 'ಬಂದದ್ದು ಬರಲಿ', ಅರವಿಂದ ಮಾಲಗತ್ತಿಯವರ 'ಮೌಂಸದ ಕೋಟೆ', 'ಚಟ್ಟ ತೊಟ್ಟಿಲ ಭೂಮಿ', ಎಲ್. ಹನುಮಂತಯ್ಯನವರ 'ಕಾರು ನಿಂತಲ್ಲೆ ನಿಂತಿದೆ', 'ಕನಸು ಕಾಣಲು ಬಿಡಿ','ಒಡಲು-ಕಡಲು', 'ಅಪ್ಪಾ ಎಂಬ ಜೀತ ಕವಚ', 'ಎಷ್ಟು ದಿನ ಕಾಯೋಣ?', ಸೋಜಿಗದ ಜಗ, ಸುಬ್ಬುಹೊಲೆಯಾರ್‌ರವರ 'ಸೂಜಿ ಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು',

'ಬೆಳಕು ಹೊತ್ತವರ ಕಾಲು ಕತ್ತಲೆ', 'ಆಕಾಶವನ್ನು ಅಳೆಯಲು ಹೆಜ್ಜೆಗಳನ್ನು ಬಳಸಬೇಡಿ', ಬಿ.ಟಿ. ಲಲಿತಾನಾಯಕ್‌ರವರ 'ಅದುಮಿಟ್ಟ ಕೊರಳು', ಅನುಸೂಯ ಕಾಂಬಳೆಯವರ 'ಊಟ ಮತ್ತು ಕಂಬಾಲಪಲ್ಲಿ', ವಿ.ಮುನಿವೆಂಕಟಪ್ಪನವರ 'ಹಗಲುಗನಸಿನ ಕೂಸು', 'ಹಡೆದವ್ವ', 'ಪಲ್ಲವಿಸು ಬಾ ವಸಂತ', ಮೂಳ್ಳೂರು ನಾಗರಾಜ್‌ರವರ 'ಆಕಾಶದ ಏಕಾಂತ ಧ್ವನಿ', ದು. ಸರಸ್ವತಿಯವರ 'ಬೆಳಕಿಗೇನು ತೀಟೆಯೇ?', 'ಸಂಕಟಕ್ಕೆ ಗಡಿ ಇಲ್ಲ', ಕೆ.ಬಿ. ಸಿದ್ಧಯ್ಯನವರ 'ಗಲ್ಲೆಬಾನಿ' ಇತ್ಯಾದಿ ಕವನಗಳಲ್ಲಿ ನೋವಿನ ತೀವ್ರತೆ, ನೋವಿನ ಕಂಪನಗಳನ್ನು ಕಾಣಬಹುದು. ನೊಂದವರಿಗೆ ನೋವು ಸಹಜವಾಗಿದ್ದರೂ ಅದನ್ನು ಪ್ರತಿಭಟಿಸುವ ಶೈಲಿಯನ್ನು ಮೇಲಿನ ಪದ್ಯಗಳಲ್ಲಿ ಕಾಣುವುದರಿಂದ ಈ ಅಧ್ಯಾಯಕ್ಕೆ ಬಳಸಿಕೊಂಡಿರುತ್ತೇನೆ.

ಶೋಷಣೆಗಳಲ್ಲೇ ಅತ್ಯಂತ ಭೀಕರವಾದ 'ಲೈಂಗಿಕ ಶೋಷಣೆ'ಗೆ ಬಲಿಯಾದ ದಲಿತ ಹೆಣ್ಣಿಗೆ ಪುರುಷ ಸಮಾಜ ಧಾರ್ಮಿಕತೆಯ ಭಯ ಒಡ್ಡಿ ಶೋಷಣೆ ಮಾಡಿದೆ. ಕೆಲಬಾರಿ ಜಾತಿಯ ಹೀಯಾಳಿಕೆಯಿಂದ ಶೋಷಣೆ ನೀಡಿದ್ದಾರೆ. ದಲಿತ ಹೆಣ್ಣಿಗೆ ತನ್ನವರಿಗಿಂತಲೂ ವ್ಯವಸ್ಥೆಯಿಂದ ಹೆಚ್ಚಿನ ರೀತಿಯಲ್ಲಿ ಶೋಷಣೆ ನೀಡಿರುವುದನ್ನು 'ಲೈಂಗಿಕ ಶೋಷಣೆ : ಪ್ರತಿಭಟನೆ' ಎಂಬ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಇಂತಹ ಶೋಷಣೆಗೆ ದಲಿತ ಸಮುದಾಯದವರೇ ಒಗ್ಗೂಡಿ ಪ್ರಶ್ನಿಸುವ ಮೂಲಕ ಪ್ರತಿಭಟಿಸಿದ್ದಾರೆ. ಹೆಣ್ಣು ತನಗಾದ ಶೋಷಣೆಯನ್ನು ಮೌನವಾಗಿ ಅನುಭವಿಸುವ ಮೂಲಕ ಪ್ರತಿಭಟಿಸುವುದನ್ನು ಈ ಅಧ್ಯಾಯದಲ್ಲಿ ಕಂಡುಕೊಂಡಿದ್ದೇನೆ.

ಈ ಅಧ್ಯಾಯಕ್ಕೆ ಅರವಿಂದ ಮಾಲಗತ್ತಿಯವರ 'ಓಕಳಿ', ಅನಸೂಯ ಕಾಂಬಳೆಯವರ 'ಮನುಷ್ಯರಾಗ ಬನ್ನಿ', ಬಿ.ಟಿ. ಲಲಿತಾ ನಾಯಕ್‌ರವರ 'ಬೇಡ ದಾಸಿಯ ಪಟ್ಟ', ಮೂಡ್ನಾಕೂಡು ಚಿನ್ನಸ್ವಾಮಿಯವರ 'ಬೆತ್ತಲೆ ಸೇವೆ', ಎಲ್. ಹನುಮಂತಯ್ಯನವರ 'ಕಣ್ಣ ಬೆಳಕಿನ ಕಡೆಗೆ', ಸಿದ್ಧಲಿಂಗಯ್ಯನವರ 'ಕಂಡೆ ನನ್ನವರ ಒಂದು ದಿವಸ', ಸುಬ್ಬು ಹೊಲೆಯಾರ್‌ರವರ 'ಬಿಳಿಯ ಹುಡುಗ ಮತ್ತು ಕಪ್ಪು ಹೆಣ್ಣಿನ ಯುದ್ಧ ಎಂಬಿತ್ಯಾದಿ ಕವನಗಳನ್ನು ಬಳಸಿಕೊಂಡಿರುತ್ತೇನೆ.ದಲಿತರ ಅರಿವಿನ ಕೊರತೆಗೆ ಅಥವಾ ಅಕ್ಷರ ವಂಚನೆಗೆ ಎರಡು ವರ್ಗ ಕಾರಣ. ಒಬ್ಬರು ಮೇಲ್ವರ್ಗದ ಜನಾಂಗ, ಇನ್ನೊಬ್ಬರು ಸ್ವತಃ ದಲಿತ ಸಮುದಾಯದಲ್ಲಿರುವ ಕೆಲವರು.

ಇವುಗಳ ಬಗ್ಗೆ ದಲಿತ ಕವಿಗಳು ಬರೆದಿರುವ ಕೆಲ ಕಾವ್ಯಗಳೆಂದರೆ ಸಿದ್ಧಲಿಂಗಯ್ಯನವರ 'ನನ್ನ ಜನಗಳು', 'ಬಿದ್ದಾವು ಮನೆಗಳು', 'ಮಾತಿಗೆ ಮಾತು ಕೊಟ್ಟವರು', 'ಚೋಮನ ಮಕ್ಕಳು', 'ಕೆಂಪು ಸೂರ್ಯ', 'ದಾರಿ ಯಾವುದೋ', ಮೂಡ್ನಾಕೂಡು ಚಿನ್ನಸ್ವಾಮಿಯವರ 'ನನ್ನ ಅಸ್ಪೃಶ್ಯನ ಮಾಡಿದೆ', 'ಹೀಗೊಂದು ಬದುಕು', 'ನನ್ನ ಕವಿತೆಗೆ', 'ಜೀತದಾಳಿನ ಗಾಥೆ', ಅರವಿಂದ ಮಾಲಗತ್ತಿಯವರ 'ಎಲ್ಲಿದ್ದಿರೋ ನೀವು', 'ನಮ್ಮ ತಲೆಗಳು', 'ಓಕಳಿ', 'ಮಾತಾಡು ಮಲ್ಲಿಗೆ', ಎಲ್. ಹನುಮಂತಯ್ಯನವರ 'ಅಟ್ಟ ಹತ್ತಬೇಡ', 'ಎಷ್ಟು ದಿನ ಕಾಯೋಣ', 'ಕರ್ಣರಾಗ', 'ಇವರು ನಮ್ಮವರು', ಮ.ನ.ಜವರಯ್ಯರವರ 'ಉರಿಗಣ್ಣಿನವರು', 'ಪುಟಗಳು', '21ನೇ ಶತಮಾನಕ್ಕೆ ನನ್ನದೊಂದು ಪ್ರಾರ್ಥನೆ', ಸುಬ್ಬು ಹೊಲೆಯಾರ್‌ರವರ 'ಉಸಿರು ಸುಟ್ಟ ಇತಿಹಾಸ', ವಿ. ಮುನಿವೆಂಕಟಪ್ಪನವರ 'ಜೀತದಟ್ಯಾಗ', ಅನಸೂಯ ಕಾಂಬಳೆಯವರ 'ಜೋಗರಹುಡುಗ', 'ಬಿಸಿಲ ಒಡಲು', ಮುಳ್ಳೂರು ನಾಗರಾಜ್‌ರವರ 'ನೆಲದ ಜೋಗುಳ', ಕೆ.ಬಿ. ಸಿದ್ಧಯ್ಯನವರ 'ಗಲ್ಲೆಬಾನಿ', ದು.ಸರಸ್ವತಿಯವರ 'ನಂಬಿಕೆಯ ಬೇಟೆ ಎಂಬಿತ್ಯಾದಿ ಕವನಗಳ ಮಿತಿಗೆ 'ಅರಿವಿನ ವಂಚನೆ : ಪ್ರತಿಭಟನೆ' ಎಂಬ ಅಧ್ಯಾಯವು ಒಳಪಟ್ಟಿದೆ.

# ಅಧ್ಯಾಯ-2
## ಕನ್ನಡ ದಲಿತ ಸಾಹಿತ್ಯಸಂಶೋಧನೆ : ಸಮೀಕ್ಷೆ

ಕನ್ನಡ ದಲಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈಗಾಗಲೇ ಅನೇಕ ಕೋನಗಳಿಂದ ಸಂಶೋಧನೆಗಳು ನಡೆದಿದ್ದು, ಸಂಶೋಧಕರು ದಲಿತ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಇಷ್ಟಾದರೂ ಎಲ್ಲೋ ಒಂದು ಕಡೆ ಇನ್ನಷ್ಟು ಸಂಶೋಧನೆಗಳು 'ದಲಿತ' ಸಾಹಿತ್ಯದ ಮೇಲೆ ಆಗಬೇಕಾಗಿದೆ ಎಂದು ಭಾವಿಸಿ ನಾನು 'ದಲಿತ ಕಾವ್ಯ ಮತ್ತು ಪ್ರತಿಭಟನೆ' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ದಲಿತ ಕಾವ್ಯಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆಯನ್ನು ಕುರಿತು ದಲಿತ ಕಾವ್ಯಗಳ ಮೂಲಕವೇ ಸಂಶೋಧನೆ ಮಾಡಬೇಕೆಂದು ನಿರ್ಧರಿಸಿಕೊಂಡಿರುತ್ತೇನೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಹಿಂದೆ ಯಾವೊಂದು ಸಂಶೋಧನೆಯು ನಡೆದಿಲ್ಲವೆಂದು ದೃಢ ಪಡಿಸಿಕೊಂಡು ಈ ನಿರ್ಧಾರಕ್ಕೆ ಬಂದಿರುತ್ತೇನೆ.

ಈವರೆಗೂ ನಡೆದಿದೆ ಎನ್ನಲಾದ ಕೆಲವೊಂದು ಸಂಶೋಧನಾ ಪ್ರಬಂಧಗಳನ್ನು ಗಮನಿಸಿದ್ದು, ಅವುಗಳಲ್ಲಿ ಕೆ.ಆರ್.ಕೇಶವ ಮೂರ್ತಿರವರ 'ದಲಿತ-ಬಂಡಾಯ ಕಾದಂಬರಿಗಳಲ್ಲಿ ಶ್ರಮ ಸಂಸ್ಕೃತಿಯ ಎಚ್ಚರಹಾಗೂ ಪರ್ಯಾಯಗಳ ಹುಡುಕಾಟ', ಕೆ.ವಿ.ನೇತ್ರಾವತಿಯವರ 'ದಲಿತ ಮಹಿಳಾ ಸಂಕಥನ', ಗಣೇಶ ಅಮೀನಗಡರವರ 'ಕನ್ನಡ ದಲಿತ ಬಂಡಾಯ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ' ಎಲ್.ಹನುಮಂತಯ್ಯನವರ 'ಕಥಾ ಕಥನ',ಶರಣ ಬಸವೇಶ್ವರ ವೀರಭದ್ರಪ್ಪ ಡಾಣಿರವರ 'ಪ್ರತಿಭಟನಾ ಸಿದ್ಧಾಂತಗಳ ನೆಲೆಯಲ್ಲಿ ಬುದ್ಧ, ಬಸವ, ಅಂಬೇಡ್ಕರ್' ಹಾಗೂ ಬಿ.ಎಂ.ಪುಟ್ಟಯ್ಯರವರ 'ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿಸಂಸ್ಕೃತಿ' ಎಂಬ ಮಹಾ ಪ್ರಬಂಧಗಳನ್ನು ಅಧ್ಯಯನ ಮಾಡಿ, ನನ್ನ ಪ್ರಬಂಧದ ವಸ್ತು ವಿಷಯಗಳಿಗೂ ಇಲ್ಲಿ ವ್ಯಕ್ತಗೊಂಡಿರುವ ಸಂಶೋಧನ ಪ್ರಬಂಧಗಳಿಗೂ ಯಾವುದೇ ರೀತಿಯ ಹೋಲಿಕೆಗಳಿಲ್ಲ ಹಾಗೂ ಎಲ್ಲಿಯೂ ಯಾವ ವಿಷಯವೂ ಪುನರಾವರ್ತನೆಯಾಗಿಲ್ಲವೆಂದು ದೃಢಪಡಿಸುವ ಸಲುವಾಗಿ ಮೇಲಿನ ಸಂಶೋಧನಾ ಮಹಾ ಪ್ರಬಂಧಗಳನ್ನು ಸ್ಥೂಲವಾಗಿ ಹಾಗೂ ಪರಿಚಯಾತ್ಮಕ ಅವಲೋಕಿಸಿರುತ್ತೇನೆ.

# 1. ದಲಿತ ಬಂಡಾಯ ಕಾದಂಬರಿಗಳಲ್ಲಿ ಶ್ರಮ ಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಡ

ಸಂಶೋಧಕರಾದ ಕೆ.ಆರ್.ಕೇಶವಮೂರ್ತಿರವರ ಈ ಮಹಾ ಪ್ರಬಂಧದಲ್ಲಿ 'ಶ್ರಮ ಸಂಸ್ಕೃತಿ'ಯ ಬಗ್ಗೆ ತಮ್ಮ ಅಧ್ಯಯನವನ್ನು ಸಾದರಪಡಿಸಿದ್ದಾರೆ. ಇವರ ಪ್ರಕಾರ 'ಸಂಸ್ಕೃತಿ' ಎಂದರೆ ಸಮುದಾಯ ಒಂದರ ಜೀವನ ಕ್ರಮ, ಬದುಕುವ ರೀತಿ. ಪ್ರತಿಯೊಂದು ಸಮುದಾಯವು ತಾನು ಬದುಕುವ ನೆಲೆಯಲ್ಲಿ ಹಲವು ಬಗೆಯ ಮಾದರಿಗಳನ್ನು ರೂಪಿಸಿಕೊಂಡಿರುತ್ತವೆ. ಇದಕ್ಕೆ ಆಂತರಿಕ ಮತ್ತು ಬಾಹ್ಯ ಒತ್ತಡಗಳ ಕಾಣರವೂ ಇರುತ್ತದೆ. ಇಂತಹ ಕಾರಣಗಳು ಸಂಸ್ಕೃತಿಯನ್ನು ಚಲನಾಶೀಲವಾಗಿಸುತ್ತವೆ. ಯಾಕೆಂದರೆ 'ಸಂಸ್ಕೃತಿ' ಎನ್ನುವುದು ಸಿದ್ಧ ವಸ್ತುವೂ ಅಲ್ಲ, ಸ್ಥಾವರ ಸ್ವಭಾವದ್ದೂ ಅಲ್ಲ. ಅದು ಗತಿಶೀಲ ಗುಣವುಳ್ಳದ್ದು ಹಾಗೂ ಬಹುಮುಖಿ ಆಯಾಮವುಳ್ಳದ್ದು. ಉತ್ಪಾದನಾ ಶಕ್ತಿಗಳು ಉತ್ಪಾದನಾ ಸಲಕರಣೆಗಳು ಹಾಗೂ ವಿಧಾನಗಳು ಮನುಷ್ಯ, ಮನುಷ್ಯರಲ್ಲಿಕಂದಕಗಳನ್ನು ಸೃಷ್ಟಿಸಿವೆ. ಇಂತಹ ಬಗೆಗಳು ಹಲವು ಜೀವನ ಕ್ರಮಗಳನ್ನು ಹೊಂದಿರುವಂತೆ ಹಲವು ಸಂಸ್ಕೃತಿಗಳನ್ನು ಹೊಂದಿವೆ. ಆಯಾ ಚಾರಿತ್ರ್ಯ ಸಂದರ್ಭಗಳಲ್ಲಿ ಪ್ರಬಲವಾಗಿದ್ದ ಜೀವನ ಕ್ರಮಗಳು ಪ್ರತಿಷ್ಠಿತ ಸಂಸ್ಕೃತಿಯ ಒಟ್ಟು ಸಮಾಜದ ಸಂಸ್ಕೃತಿಯೆಂದು ಪರಿಗಣಿತವಾಗುತ್ತದೆ. ಸಾಮಾನ್ಯವಾಗಿ ಮನುಷ್ಯನನ್ನೇ ಕೇಂದ್ರವಾಗಿಸಿಕೊಳ್ಳುವ ನಮ್ಮ ಅಧ್ಯಯನಗಳು ಆತನನ್ನು ವಿವಿಧ ಆಯಾಮಗಳ ವಿನ್ಯಾಸದಲ್ಲಿ ಅಧ್ಯಯನಕ್ಕೊಳಪಡಿಸುತ್ತವೆ. ಆದರೆ ಇಂತಹ ಅಧ್ಯಯನಗಳು ಒಂದು ವರ್ಗ, ವರ್ಣ, ಜಾತಿ, ಕಾಲಗಳಿಗೆ ಬದ್ಧವಾಗಿರುತ್ತವೆ. ಇವುಗಳಲ್ಲಿನ ಇತಿ ಮಿತಿಗಳಿಂದಾಗಿ ಇವನ್ನು ಸಾಮಾನ್ಯೀಕರಿಸಲಾಗುವುದಿಲ್ಲ. ವಸಾಹತು, ನವ ವಸಾಹತು ಪ್ರಭಾವ ಪ್ರೇರಣೆಗಳು ಇಂದಿನ ಜಾಗತಿಕವಾದ ರಾಜಕೀಯಾರ್ಥಿಕ ಸಂಬಂಧಗಳು ಹೊಸ ರೀತಿಯ ತಲ್ಲಣಗಳನ್ನು ಹುಟ್ಟು ಹಾಕುತ್ತಿವೆ. ಒಂದು ಹಂತದಲ್ಲಿ ಮನುಷ್ಯರಿಂದ ಮನುಷ್ಯರನ್ನು ಬೇರ್ಪಡಿಸುವ, ಕೀಳಿಕರಿಸುವ ಪ್ರವೃತ್ತಿಗಳು ಸಮಾಜದಲ್ಲಿ ಜೀವಂತವಾಗಿ ಉಳಿದು ಬಂದಿದ್ದವು. ಆದರೆ ಜಾಗತೀಕರಣದ ಫಲಿತಗಳು ಇಂದು ದೇಹ ಮನಸ್ಸುಗಳ ಮಧ್ಯೆಯೇ ಭಿನ್ನತೆಗಳನ್ನು ತಂದು ಹಾಕುತ್ತಿವೆ.

ನಿಸರ್ಗ ವಿಮುಖ ಸಾಮಾಜಿಕ ಬೆಳವಣಿಗೆಗಳನ್ನು, ವಿಶ್ವಾಸ ರಹಿತ ಮಾನವ ಪ್ರವೃತ್ತಿಗಳನ್ನು, ಕೇಂದ್ರೀಕೃತ ಆಕೃತಿಗಳನ್ನು ಹಾಳಾಗಿ ಬೆಳಸುತ್ತಿವೆ. ಆತನ ಭೋಗ ಜೀವನಕ್ಕೆ ಆಡಂಬರ ಬದುಕಿಗೆ ಪ್ರೇರಣೆ ನೀಡುತ್ತಿವೆ. ಇಂತಹ ಸಂದರ್ಭದಲ್ಲಿ ಶ್ರಮಿಕ ವರ್ಗಗಳ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಪುನಾರಚನಾ ಹಂಬಲಿಕೆಗಳ ಕುರಿತು ಮತ್ತೆ ಮತ್ತೆ ಚರ್ಚಿಸುವುದು ಬಹುಮುಖ್ಯವಾಗಿದೆ.

ಇಂದು ಸಂಸ್ಕೃತಿಯ ಅಧ್ಯಾಯನಗಳು ಹೆಚ್ಚು ಪ್ರಚಲಿತಗೊಳ್ಳುತ್ತಿರುವ ಸಂದರ್ಭದಲ್ಲಿ, ಕೆಳ ಸಂಸ್ಕೃತಿಯ ಅಧ್ಯಯನವು ಪ್ರಮುಖವಾಗುತ್ತಿದೆ. ಈಗಾಗಲೇ ಕೆಳ ಸಂಸ್ಕೃತಿಯನ್ನು ಹಲವು ಮುಖಗಳಿಂದ ಅಧ್ಯಯನ ಮಾಡಿದ್ದಾರೆ. ಆದರೆ ಕಾದಂಬರಿಗಳ ಮೂಲಕ ಇಂತಹ ಕೆಳ ಸಮುದಾಯಗಳ ಅಧ್ಯಯನವನ್ನು ಗ್ರಾಮೀಣ ನೆಲೆಯಲ್ಲಿ ಶ್ರಮ ಸಂಸ್ಕೃತಿಯನ್ನು ಗುರುತಿಸುವ ಪ್ರಯತ್ನ ಕಷ್ಟವಾದ ಕಾರಣದಿಂದ ಕಾದಂಬರಿಗಳ ಮುಖೇನ ಈ ಬಗೆಯ ಅಧ್ಯಯನ ಮಾಡುವುದರಿಂದ ಕೆಳ ವರ್ಗಗಳ ಒಟ್ಟು ಸಂಸ್ಕೃತಿಯ ಒಳನೋಟಗಳು ತಿಳಿಯುತ್ತಿವೆ.ಶೋಷಣೆಯ ಪರಿಣಾಮವಾಗಿ ಕೆಳವರ್ಗಗಳು ಸ್ವಾಭಿಮಾನವನ್ನು ಮೈಗೂಡಿಸಿಕೊಂಡಿವೆ. ಇದರಲ್ಲಿ ಸ್ವಾಭಿಮಾನ ಮತ್ತು ಬಡತನಗಳ ಕೂಡಿಕೆಯಿಂದ ಕೂಡಿರುವ ಪ್ರಜ್ಞೆ ಇರುವುದರಿಂದ ವರ್ತಮಾನದ ಬದುಕಿನ ಬಗ್ಗೆ ಭರವಸೆ ಇಟ್ಟು ಜೀವಂತವಾಗಿದ್ದಾರೆ. ಕೆಳವರ್ಗ ಜೀವಪರ ಹಾಗೂ ವ್ಯಕ್ತಿ ಸಮಾನತೆಗಾಗಿ ದಲಿತ ಬಂಡಾಯದ ಸಂದರ್ಭದಲ್ಲಿ ರಚನೆಗೊಂಡ ಸಾಹಿತ್ಯವಾದ ಎಲ್ಲಾ ಪ್ರಕಾರಗಳಲ್ಲಿ ಇಂಥ ಧೋರಣೆಯೇ ಮುಖ್ಯ ಕಾಳಜಿಯಾಗಿದೆ. ಸಮಾಜದಲ್ಲಿ ಸರ್ವ ರೀತಿಯಿಂದಲೂ ಶೋಷಣೆಗೆ ಒಳಗಾಗಿರುವ ಮನುಷ್ಯನ ಬದುಕನ್ನು ಅರ್ಥವತ್ತಾಗಿ ಚಿತ್ರಿಸುವುದರ ಮುಖಾಂತರ ಈ ರೀತಿ ಶೋಷಣೆಗೆ ಒಳಗಾದ ಮನುಷ್ಯನಿಗೆ ಆತನ ಅಸ್ತಿತ್ವದ ಅರಿವನ್ನುಂಟು ಮಾಡುವುದು. ಹೀಗೆ ಈತನಲ್ಲಿ ಅರಿವು ಉಂಟು ಮಾಡಿ ಹೊಸ ಜಗತ್ತಿಗೆ ಆಲೋಚನೆಗಳ ಜೊತೆ ಹೊಂದಿಕೊಂಡು ಹೋಗುವಂತೆ ಮಾಡುವುದು ದಲಿತ ಬಂಡಾಯ ಸಾಹಿತ್ಯದ ಕೆಲಸವೆಂಬುದು ಸಂಶೋಧಕರ ಅಭಿಪ್ರಾಯ.

ಕೆಳವರ್ಗಗಳ ಕೀಳರಿಮೆಗೆ ಕಾರಣವಾದ'ಪ್ರಜ್ಞೆ' ಮತ್ತು 'ಧೈರ್ಯ'ದ ಕೊರತೆಯಿಂದ ಪ್ರತಿಷ್ಠಿತ ವರ್ಗಗಳ ಮೇಲೆ ಪೂಜ್ಯತೆ ಹಾಗೂ ವಿಧೇಯತೆಗಳನ್ನು ಬೆಳೆಸಿಕೊಂಡಿರುವುದಾಗಿದೆ. ಇದನ್ನು ಸದುಪಯೋಗ

ಪಡಿಸಿಕೊಂಡ ಪ್ರತಿಷ್ಠಿತ ವರ್ಗಗಳು ಕೆಳವರ್ಗದವರನ್ನು ಕೂಲಿಯಾಳಾಗಿಯೋ ಬಳಸಿಕೊಂಡಿದ್ದು ಸತ್ಯ ಸಂಗತಿ. ಇದರಿಂದಾಗಿ ಕೆಳ ಸಂಸ್ಕೃತಿಗೆ ನ್ಯಾಯವಾಗಿ ವಿಧೇಯತೆಯ ಬದಲು ವಿನಯವನ್ನು, ಪೂಜ್ಯತೆಯ ಬದಲು ಪ್ರಜ್ಞೆಯನ್ನು ಸ್ಥಾಪಿಸಬೇಕಾಗಿದೆ. ಹಾಗಾಗಿ ಈ ದೇಶದ ಪಟ್ಟ ಭದ್ರರೆನಿಸಿಕೊಂಡಿರುವ ಮೇಲ್ವರ್ಗದವರಿಂದಲೂ ಹಾಗೂ ಜಾತಿ ಸಂಕುಲರೆನಿಸಿಕೊಂಡಿರುವ ಬ್ರಾಹ್ಮಣರ ಅವಮಾನಗಳನ್ನು ತನ್ನನ್ನೇ ಅವಮಾನಿಸುತ್ತಿದೆ ಎಂದು ತಿಳಿಯುವ 'ದಲಿತ ಪ್ರಜ್ಞೆ ' ಅತ್ಯಂತ ಮಹತ್ವದ್ದಾಗಿದೆ.

ಸಂಶೋಧಕರು ತಮ್ಮ ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವ ಸಾಹಿತ್ಯ ಪ್ರಕಾರವೆಂದರೆ 'ದಲಿತ–ಬಂಡಾಯ' ಕಾದಂಬರಿಗಳು. ಇಲ್ಲಿ ಕೆಳವರ್ಗದವರ ಹಾಗೂ ಶ್ರಮ ಸಂಸ್ಕೃತಿಯ ಬಗ್ಗೆ ಗಮನರ್ಹವಾಗಿ ಚರ್ಚಿಸಿ, ಇಲ್ಲಿ ವ್ಯಕ್ತವಾಗಿರುವ ಕೆಳವರ್ಗವೆಂದರೆ ಜಾತಿಯ ಆಧಾರವಾಗಿರುವ ವರ್ಗವಾಗಿದೆ. ಹಾಗೂ ಜಾತಿಯೇ ಇಲ್ಲಿ ಹೆಚ್ಚು ಮುಖ್ಯವಾಗುತ್ತದೆ. ಕೆಳ ಜಾತಿಯವರೆಂದರೆ ಶೋಷಿತರು. ಒಂದು ಸಮುದಾಯದ ಜನರ ಗುಂಪನ್ನು ನಾವಿಲ್ಲಿ ಕಾಣಬಹುದು. ಶ್ರಮ ಸಂಸ್ಕೃತಿ ಎಂದರೇ ಕಷ್ಟಪಟ್ಟು ಕೆಲಸ ಮಾಡುವವರು. ಇಲ್ಲಿ ಶ್ರಮವೇ ಪ್ರಧಾನವಾಗುತ್ತದೆ. ಎಲ್ಲಾ ಜಾತಿಯ ಶ್ರಮಿಕರು ಇಲ್ಲಿ ದೊರಕುತ್ತಾರೆ. ಈ ಎರಡರ ವ್ಯತ್ಯಾಸವನ್ನು 'ದಲಿತ– ಬಂಡಾಯ' ಕಾದಂಬರಿಗಳಲ್ಲಿ ಹುಡುಕುವ ಪ್ರಯತ್ನವನ್ನು ಸಂಶೋಧಕರು ಕಂಡುಕೊಂಡಿದ್ದಾರೆ.

ಈ ಸಂಶೋಧನೆಯ ಮಹತ್ವ ಎಂದರೆ ಕೆಳವರ್ಗದವರು, ಸಾಮಾಜಿಕವಾಗಿ ಎಲ್ಲಾರೀತಿಯಿಂದಲೂ ಶೋಷಣೆಗೆ ಒಳಗಾಗುವ ಜನಾಂಗದವರ ಬದುಕನ್ನು ಕೂಲಂಕಷವಾಗಿ ಚರ್ಚಿಸಿ, ಒಂದುಜನಾಂಗದವರಿಗೆ, ಅವರ ಅಸ್ತಿತ್ವದ ಅರಿವನ್ನುಂಟು ಮಾಡುವ ಮಹತ್ವಯನ್ನು ಇಲ್ಲಿ ಕಾಣಬಹುದು. ಕೆಳವರ್ಗದವರಲ್ಲಿ ಮೇಲ್ವರ್ಗದವರ ಬಗ್ಗೆ ಇರುವ ಪೂಜ್ಯತೆ ಹಾಗೂ ಅಧೀನತೆಯನ್ನು ತೊಲಗಿಸಿ, ಇವರಲ್ಲಿ ವಿನಯ ಮತ್ತು ಪ್ರಜ್ಞೆಯನ್ನು ಬೆಳೆಸುವ ಮಹತ್ವಯನ್ನು ಈ ಸಂಪ್ರಬಂಧ ಒಳಗೊಂಡಿದೆ.

ಒಂದು ಕಾಲದಲ್ಲಿ ಮನುಷ್ಯ ಮನುಷ್ಯರಲ್ಲಿ ಜಾತಿ ವಿಷಯವಾಗಿ ಬೇರ್ಪಟ್ಟು, ಕೆಳ ಜಾತಿಯವರನ್ನು ಕೀಳಿಕರಿಸುವ ಪ್ರವೃತ್ತಿಗಳು ಇಂದಿಗೂ

ಬಲವಾಗಿರುವ ಕಾರಣ ಮನುಷ್ಯರಲ್ಲಿ ಭಿನ್ನತೆ, ಅಸಮಾನತೆ ಎದ್ದು ಕಾಣುತ್ತದೆ. ಉಳ್ಳವರ ಆಡಂಬರ ಜೀವನಕ್ಕೆ ಪ್ರೇರಣೆಯಾಗಿರುವ ಈ ಜಾತಿ ವ್ಯವಸ್ಥೆಗಳನ್ನು ಬದಿಗಿರಿಸಿ, ಶ್ರಮಿಕ ವರ್ಗದವರನ್ನು ಮಾನ್ಯ ಮಾಡಿಕೊಂಡು ಇವರಿಗೆ ಹೊಸ ನೆಲೆ, ಅಸ್ತಿತ್ವ ಕೊಡುವುದು ಈ ಸಂಶೋಧನೆಯ ಮಹತ್ವಗಳಲ್ಲೊಂದು.

ಶ್ರಮಿಕ ವರ್ಗದವರಸಂಸ್ಕೃತಿಯ ಬಗ್ಗೆ ಬೆಳಕು ಚಲ್ಲಿ, ಇವರಿಗೆ ಎದುರಾದ ಶೋಷಣೆಗಳಿಗೆ ಎಚ್ಚರಿಕೆ ಹಾಗೂ ಇದರಿಂದ ಮುಕ್ತರಾಗಿಸುವ ಬೇರೆ ಬೇರೆ ಮಾರ್ಗಗಳನ್ನು ಕಾದಂಬರಿಗಳ ಮೂಲಕ ಶೋಧಿಸಿದ್ದಾರೆ. ದಲಿತ ಸಾಹಿತ್ಯದಲ್ಲಿ ಪ್ರತಿಪಾದಿತವಾಗಿರುವ ಪ್ರತಿಸಂಸ್ಕೃತಿ ನೆಲೆಗಳಿಗೆ ಸಮಕಾಲೀನ ಒತ್ತಡಗಳವೆ. ಈ ಸಮಕಾಲೀನ ಒತ್ತಡಗಳೆನ್ನುವ ಸಾಮಾಜಿಕ ವೈರುಧ್ಯಗಳಿಗೆ, ತಾತ್ವಿಕ ಆಳದಲ್ಲಿ ಒಂದು ಸುದೀರ್ಘವಾದ ಮಹಾನ್ ಪರಂಪರೆ ಇದೆ. ಈ ಪರಂಪರೆಯ ಆಕಾರಗಳಿಂದನಿಷ್ಪನ್ನಗೊಳ್ಳುವ ಚಿಂತನೆಗಳ ಮುಖ್ಯ ನೆಲೆಗಳನ್ನು ಈ ಅಧ್ಯಯನದ ಪರಿಧಿಗೆ ತರಲಾಗಿದೆ. ಕಾರಣ ಈ ಅದ್ಯಯನದ ಪರಿಕಲ್ಪನೆಗೆ ಸಂಬಂಧಿಸಿದಂತೆ ಪಾರಂಪರಿಕ ಆಲೋಚನೆಗಳನ್ನು ಸೈಂದ್ಧಾಥಿಕ ಬೆಂಬಲದ ಹಿನ್ನೆಲೆಯಲ್ಲಿತೆಗೆದುಕೊಂಡಿದ್ದಾರೆ.

## 2. ದಲಿತ ಮಹಿಳಾ ಸಂಕಥನ

ಸಂಶೋಧಕಿ ನೇತ್ರಾವತಿಯವರ 'ದಲಿತ ಮಹಿಳಾ ಸಂಕಥನ' ಎಂಬ ಸಂಶೋಧನಾ ಮಹಾಪ್ರಬಂಧದಲ್ಲಿ ಪ್ರಾಚೀನ ಪರಂಪರೆಗಳಲ್ಲಿ ಅಡಕವಾಗಿರುವ ದಲಿತರ ಜೀವನ ವಿಧಾನಗಳನ್ನು ಅರ್ಥೈಸಿಕೊಂಡು ಸಾದರಪಡಿಸಿರುತ್ತಾರೆ. ದಲಿತರ ಎಲ್ಲಾ ಪ್ರಾಚೀನ ಪರಂಪರೆಗಳು ಅಡಕವಾಗಿರುವ, ದಲಿತರ ಸಂಸ್ಕೃತಿಯಾಭಿವ್ಯಕ್ತಿಯಾಗಿರುವ ದಲಿತರ ಎಲ್ಲಾ ಜೀವನ ವಿಧಾನಗಳನ್ನು ಮರು ಅರ್ಥೈಸಿಕೊಳ್ಳ ಬೇಕಾದ ಸಂದರ್ಭವಿದೆ ಎಂದು ನಿರ್ಧಾರಿಸಿ, ಈ ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ದಲಿತ ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ದಲಿತ ಮಹಿಳೆಯರ ಪಾತ್ರದ ಸ್ವರೂಪವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶವಿದೆ. ದಲಿತ ಮಹಿಳೆಯರಿಗೆ ಮಾತ್ರ ಮೀಸಲಾಗಿರಿಸಿದ ಅಮಾನುಷ ಪದ್ಧತಿಗಳಾದ ದೇವದಾಸಿ, ಬಸವಿ, ಬೇತಲೆ ಸೇವೆ

ಇವುಗಳನ್ನು ಕೆಳ ಜಾತಿಗಳೇ ಯಾಕೆ ಅನುಸರಿಸುತ್ತವೆ ಎಂಬುದರ ಹಿಂದಿರುವ ಸಾಂಸ್ಕೃತಿಕ, ಸ್ವರೂಪದ ತಾತ್ವಿಕತೆಯನ್ನು ಅರ್ಥ ಮಾಡಿಕೊಳ್ಳುವ ಉದ್ದೇಶ ಹೊಂದಿದ್ದಾರೆ. ಸಮಾಜಕ್ಕೆ ದಲಿತ ಮಹಿಳೆಯರ ಕೊಡುಗೆ ಅಖಂಡವೂ, ಅದ್ಭುತವೂ, ಅಭೂತ ಪೂರ್ವವೂ ಆಗಿದೆ. ಸಂಸ್ಕೃತಿಗೆ ದಲಿತ ಮಹಿಳಾ ಕೊಡುಗೆಯನ್ನು ವಿಶ್ಲೇಷಿಸುವುದು ಅಧ್ಯಯನದ ಉದ್ದೇಶವಾಗಿದೆ. ಬಾಹ್ಯ ವೈರುಧ್ಯಗಳು ಹಾಗೂ ಆಂತರಿಕ ವೈರುಧ್ಯಗಳ ವಿನ್ಯಾಸದ ಸ್ವರೂಪವನ್ನು ಸಮಕಾಲೀನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ನೆಲೆಗಳನ್ನು ಗ್ರಹಿಸುವ ಉದ್ದೇಶ ಹೊಂದಿದ್ದಾರೆ.

ಸಂಶೋಧಕಿ ದಲಿತರನ್ನು ಮುಖ್ಯವಾಗಿ ಗುರುತಿಸುವುದು ಭೂಮಿ ಮತ್ತು ಶ್ರಮದ ನಡುವಿನ ಸಂಬಂಧದಲ್ಲಿ. ದಲಿತರ ಆಚರಣೆಯಲ್ಲಿರುವ ಕೃಷಿ ಮತ್ತು ಭೂಮಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಇದರ ಪಡಿಯಚ್ಚು ದಟ್ಟವಾಗಿರುವುದನ್ನು ನೋಡಬಹುದು. ಇಂತಹ ನಿಸರ್ಗ ನಿಷ್ಟತತ್ವವನ್ನೇ ಜೀವವಾಗಿಸಿಕೊಂಡ ದಲಿತರ ಸ್ಥಿತಿ ಏಕೆ ಕಾಲಾಂತರದಲ್ಲಿ ನಿಕೃಷ್ಟ ಸ್ಥಿತಿಗೆ ಇಳಿಯಿತು? ಎಂಬುದರ ಬಗ್ಗೆ ಚರ್ಚಿಸಿದ್ದಾರೆ. ಕಾಲಘಟ್ಟಗಳ ಹಂತ ಹಂತದಲ್ಲಿ ದಲಿತರ ಮೇಲೆ ಜರುಗಿದ ಶೋಷಣೆಯ ಸ್ವರೂಪವನ್ನು ಅಂಬೇಡ್ಕರ್‌ರವರು ಸುದೀರ್ಘವಾಗಿ ವಿವರಿಸುತ್ತಾರೆ. ಆಧುನಿಕ ಸಂದರ್ಭಗಳಲ್ಲಿ ದಲಿತರ ಇಂದಿನ ಸ್ಥಿತಿಗತಿಗಳಿಗೆ ಕಾರಣವಾದ ಪುರೋಹಿತ ಶಾಹಿ ವ್ಯವಸ್ಥೆ ಹಾಗೂ ಊಳಿಗಮಾನ್ಯ ಪದ್ಧತಿ ವ್ಯವಸ್ಥೆಯು ದಲಿತರ ಮೇಲೆ ನಡೆಸಿರುವ ನಿಕೃಷ್ಟ ಘೋರ ಹಲ್ಲೆಗಳನ್ನು ಮೊದಲ ಬಾರಿಗೆ ಅಂಬೇಡ್ಕರ್‌ರವರು ಸುದೀರ್ಘ ವಿಶ್ಲೇಷಣೆಗೆ ಒಳಪಡಿಸಿ ಅದನ್ನು ಭಾರತೀಯ ದಲಿತರಿಗೆ ತಿಳಿಸಿಕೊಡಲು ಮುದಾದುದ್ದನ್ನು ತನ್ನ ಅಧ್ಯಯಕ್ಕೆ ಬಳಸಿಕೊಂಡಿದ್ದಾರೆ.

ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ಚರಿತ್ರೆಯಲ್ಲಿ ದಲಿತರ ಬಗ್ಗೆ, ದಲಿತರ ಸ್ಥಿತಿಗತಿಯ ಬಗ್ಗೆ ತಿಳಿದುಕೊಳ್ಳಲು ನಮಗೆ ಲಭ್ಯವಿರುವ ಆಕರ ಕೆಲವೇ ಕೆಲವು. ಇವುಗಳನ್ನು ಆಧುನಿಕವಾಗಿ ಇಟ್ಟುಕೊಂಡು ದಲಿತರ ಚರಿತ್ರೆಯನ್ನು ಗುರುತಿಸುವುದು ದೊಡ್ಡ ಸಾಹಸದಂತೆ ಆಗಿದ್ದರೂ, ದಲಿತರ ಚರಿತ್ರೆಯನ್ನು ಶೋಧಿಸುವ ಸಾಹಸಕ್ಕೆ ಕೈ ಹಾಕಿದ್ದಾರೆ.

ಸಂಶೋಧಕಿ ತಮ್ಮ ಅಧ್ಯಾಯದ ಅನುಕೂಲಕ್ಕಾಗಿ, ‘ದಲಿತ ಮಹಿಳೆ ಎಂದರೆ ಯಾರು’? ಎಂಬುದನ್ನು ಗುರುತಿಸುವ ಉದ್ದೇಶವನ್ನು ಇಟ್ಟುಕೊಂಡು, ಬಹಿಷ್ಕೃತರೆನಿಸಿಕೊಂಡವರ, ಕಟ್ಟಕಡೆಯವರು

ಅಸ್ಪೃಶ್ಯರೆನಿಸಿಕೊಂಡ ಹೊಲೆ ಮಾದಿಗ, ಜಾಡಮಾಲಿ ಮಹಿಳೆಯರು, ಅದರಲ್ಲಿಯೂ ದಿನಗೂಲಿ, ಕೃಷಿ ಕಾರ್ಮಿಕ ಮಹಿಳೆಯರೇ ನಿಜವಾದ ದಲಿತ ಮಹಿಳೆಯರು ಎಂಬುವುದಕ್ಕೆ ಆಧಾರಗಳನ್ನು ಹುಡುಕುವ ಉದ್ದೇಶವು ಪ್ರಸ್ತುತ ಅಧ್ಯಯನವಾಗಿದೆ.

ನೇತ್ರಾವತಿಯವರು ತಮ್ಮ ಪ್ರಬಂಧದಲ್ಲಿ ದಲಿತ ಮಹಿಳೆಯರ ಸಾಹಿತ್ಯದಲ್ಲಿ ವ್ಯಕ್ತವಾಗಿರುವ 'ದಲಿತ ಸ್ತ್ರೀ ಪ್ರಜ್ಞೆ'ಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಇಲ್ಲಿ ದಲಿತ ಕುಟುಂಬ ಹಾಗೂ ಸಮಾಜದಲ್ಲಿ ದಲಿತ ಮಹಿಳೆಯರ ಪಾತ್ರ ಸ್ವರೂಪವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸುವ, ಸಂಸ್ಕೃತಿಗೆ ದಲಿತ ಮಹಿಳಾ ಕೊಡುಗೆಯನ್ನು ಹಾಗೂ ಪುರೋಹಿತ ಶಾಹಿ ವ್ಯವಸ್ಥೆ, ಊಳಿಗಮಾನ್ಯ ವ್ಯವಸ್ಥೆಗಳು ದಲಿತ ಮಹಿಳೆಯರನ್ನು ಬಳಸಿಕೊಂಡ ಬಗ್ಗೆ ಚರ್ಚಿಸಿದ್ದಾರೆ. ಋಗ್ವೇದದಲ್ಲಿ ಮಹಿಳೆಗೆ ಪುರಷನಷ್ಟೇ ಸಮಾನ ಅವಕಾಶಗಳು ಇತ್ತು. ಆದರೆ ಯಾವ ಜಾತಿಗೆ, ಯಾವ ವರ್ಗಕ್ಕೆ ಎಷ್ಟು ಎಂಬುದನ್ನು ತಿಳಿಸುವಲ್ಲಿ ಈ ಸಂಶೋಧನೆ ಬೆಳಕು ಚಲ್ಲುತ್ತದೆ. ಅಂದಿನಿಂದ ಇಂದಿನವರೆಗೂ ದಲಿತ ಮಹಿಳೆಗೆ ಸಿಕ್ಕ ವಿಫುಲ ಅವಕಾಶಗಳ ಲಿಖಿತ ದಾಖಲೆಗಳನ್ನು ಹೊರ ತರುವ ಪ್ರಯತ್ನ ಮಾಡಿದ್ದಾರೆ. ಒಟ್ಟಿನಲ್ಲಿ ಈ ಸಂಶೋಧನೆ ದಲಿತ ಸಮುದಾಯಕ್ಕೆ ಸೀಮಿತವಾಗಿದ್ದರೂ, ದಲಿತ ಮಹಿಳೆಯ ಇತಿಹಾಸವನ್ನು ಪರಿಚಯಾತ್ಮಕವಾಗಿ ಸಾದರ ಪಡಿಸುತ್ತದೆ. ಆದರೆ ಪ್ರತಿಭಟನೆಯ ಅಂಶಗಳಾಗಲಿ, ದಲಿತ ಕಾವ್ಯದ ಬಗ್ಗೆಯಾಗಲಿ ಯಾವುದೇ ಚರ್ಚೆ ಕಂಡು ಬರುವುದಿಲ್ಲ.

### 3. ಕನ್ನಡ ದಲಿತ–ಬಂಡಾಯ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ

ಪ್ರೊ.ಚಂದ್ರಶೇಖರ ಪಾಟೀಲರವರ ಮಾರ್ಗದರ್ಶನದಲ್ಲಿ ಗಣೇಶ ಅಮೀನಗಡರು ಸಿದ್ಧಪಡಿಸಿರುವ ಪ್ರಬಂಧ. ಈ ಪ್ರಬಂಧದಲ್ಲಿ ಮುಖ್ಯವಾಗಿ 'ಪ್ರತಿಮಾ ಸಂವಿಧಾನದ ತಾತ್ವಿಕತೆ', 'ಆಧುನಿಕ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ', 'ದಲಿತ – ಬಂಡಾಯ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ' ಎಂಬ ಮೂರು ಮುಖ್ಯ ಅಧ್ಯಾಯಗಳನ್ನು ಕಾವ್ಯದ ನೆಲೆಯಲ್ಲಿ ಚರ್ಚಿಸಿದ್ದಾರೆ.

ಮಾನವನ ಹುಟ್ಟಿನೊಂದಿಗೆ ಮೂಡಿದ ಭಾಷೆ ಹಾಗೂ ಆ ಭಾಷೆಯ ಮೂಲಕ ಅವನ ಅನುಭವಗಳಿಗೆ ಒಂದು ಕಲಾತ್ಮಕ ಆಕಾರ ನೀಡುವಿಕೆ ಮತ್ತು ಹೀಗೆ ಸೃಷ್ಟಿಸಲ್ಪಟ್ಟ ಆಕೃತಿಗಳ ಬಗೆಗಿನ ವಿಶ್ಲೇಷಣೆಯ

ಪ್ರಕ್ರಿಯೆ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ.ಆಧುನಿಕ ಕನ್ನಡ ಕಾವ್ಯ ದರ್ಜೆಯ ನೆಪದಲ್ಲಿ ಕಾವ್ಯದ ಹಲವಾರು ಮಗ್ಗಲುಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸುವ ಒಂದು ಪರಂಪರೆ ಇದ್ದೇ ಇದೆ. ಆದ್ದರಿಂದ ಕಾವ್ಯದ ವಿಶ್ಲೇಷಣೆಯ ಮೊದಲ ಹಂತವೆಂದರೆ ಅಧ್ಯಯನ ವಿಧಾನದ ಆಯ್ಕೆ ಆಗಿರುತ್ತದೆ. ಈ ಮಹಾ ಪ್ರಬಂಧದ ಮುಖ್ಯ ಆಶಯ ಹಾಗೂ ವ್ಯಾಪ್ತಿ ಎಂದರೆ ದಲಿತ-ಬಂಡಾಯ ಕಾವ್ಯವನ್ನು ಪ್ರತಿಮಾ ಸಂವಿಧಾನದ ಮೂಲಕ ವಿಶ್ಲೇಷಿಸುವುದು. ಬೇರೆ ಬೇರೆ ಕಾಲಘಟ್ಟಗಳಲ್ಲಿ, ವಿವಿಧ ಸಾಂಸ್ಕೃತಿಕ ಮನೋಧರ್ಮಗಳ ಗ್ರಹಿಕೆಯನ್ನು ಈ ಪ್ರಬಂಧದಲ್ಲಿ ಕಾಣಬಹುದು. ಆಧುನಿಕತೆಯ ವರದಿಂದ ಕನ್ನಡ ಕಾವ್ಯದ ವಿಚಾರದಲ್ಲಿ ಕಾವ್ಯವನ್ನು ಅನೇಕ ವಿಧಗಳಿಂದ ಪ್ರತ್ಯೇಕವಾಗಿ ನೋಡುವುದು ಒಂದು ಸಂಪ್ರದಾಯ. ಅದರಂತೆ ಇವರು ಆಧುನಿಕ ಕಾವ್ಯಗಳನ್ನು ಪ್ರತಿಮಾ ಸಂವಿಧಾನದ ಮೂಲಕ ವಿಶ್ಲೇಷಿಸುವ ಉದ್ದೇಶ ಹೊಂದಿದ್ದಾರೆ. ಆಯಾ ಕಾಲಘಟ್ಟದಲ್ಲಿ ತಲೆದೋರಿದ್ದ ವಿವಿಧ ಸಾಂಸ್ಕೃತಿಕ ಕಾರಣಗಳಿಂದ ಆ ಕಾಲದ ಕವಿಗಳು ಹೇಗೆ, ಏಕೆ ಮತ್ತು ಯಾವ ಪ್ರತಿಮೆಗಳನ್ನು ಕಾವ್ಯದಲ್ಲಿ ಬಳಸಿದರು ಎಂಬುದನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದ್ದಾರೆ. ಪ್ರತಿಮಾ ಸಂವಿಧಾನದ ಮೂಲಕ ಕಾವ್ಯ ವಿಶ್ಲೇಷಣೆಯು ನಿರ್ದಿಷ್ಟ ಪ್ರತಿಮೆಗಳ ಆಯ್ಕೆಯ ಹಿಂದಿನ ಸಾಂಸ್ಕೃತಿಕ ಕಾರಣಗಳನ್ನು ಹುಡುಕುವ ಉದ್ದೇಶವನ್ನು ಸಂಶೋಧಕರು ಹೊಂದಿದ್ದಾರೆ. ಇವರು ಕವಿಯ, ಕವಿತೆಯ ಸಾಲುಗಳನ್ನು ಮಾತ್ರ ವಿಶ್ಲೇಷಣೆ ಮಾಡದೆ, ಕವಿಯ ಹಿನ್ನೆಲೆ, ಕವಿಯ ಆತ್ಮ ಚರಿತ್ರೆ, ಸಮಕಾಲೀನ ಸಂದರ್ಭವನ್ನು ಕೂಡ ಹೇಳುವ ಉದ್ದೇಶ ಹೊಂದಿದ್ದಾರೆ.

ಶೀರ್ಷಿಕೆಯ ಅನುಗುಣವಾಗಿ ಹೆಚ್ಚು ಒತ್ತನ್ನು ದಲಿತ ಬಂಡಾಯ ಕಾವ್ಯಕ್ಕೆ ಕೊಟ್ಟಿದ್ದರೂ, ಹಿನ್ನೆಲೆಯ ರೂಪದಲ್ಲಿ ಇತರ ಸಾಹಿತ್ಯ ಘಟ್ಟಗಳ ಕಾವ್ಯಗಳಿಗೆ ಸೀಮಿತಗೊಳಿಸಿಕೊಂಡಿದ್ದಾರೆ. ಈ ಪ್ರಬಂಧವನ್ನು ಲೈಂಗಿಕ, ಹಿಂಸೆ, ಮಾನವ, ನಿಸರ್ಗ ಹೀಗೆ ವಿಭಾಗಿಸಿಕೊಂಡು ಚರ್ಚಿಸಿದ್ದಾರೆ. ನಿಜವಾದ ಕಾವ್ಯ ವಿಶ್ಲೇಷಣೆಯೆಂದರೆ ಕೇವಲ ಉತ್ತಮ ಸಾಲುಗಳು ಮಾತ್ರವಲ್ಲ, ಕವಿಯ ಹಿನ್ನೆಲೆ, ಆತ ಬರೆದ ಆತ್ಮಚರಿತ್ರೆ, ಆತನ ಸಮಕಾಲೀನ ಅರ್ಥವೂ ಒಳಗೊಳ್ಳುತ್ತದೆ.

ಹೀಗಾಗಿ ಕಾವ್ಯ ವಿಶ್ಲೇಷಣೆಯೆಂದರೆ ಅದು ಸಾಂಸ್ಕೃತಿಕ ವಿಶ್ಲೇಷಣೆ ಆಗಿರುತ್ತದೆ ಎಂದು ಸಂಶೋಧಕರ ಅಭಿಪ್ರಾಯವಾಗಿದೆ.

ಒಂದು ಸಾಹಿತ್ಯ ಕೃತಿಯನ್ನು ಓದುವುದು ಬೇರೆ, ಅಧ್ಯಯನ ಮಾಡುವುದು ಬೇರೆ. ಕನ್ನಡ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ ಪಂಪನ ಕಾಲದಿಂದ ಇವತ್ತಿನ ದಲಿತ ಬಂಡಾಯ ಕಾವ್ಯದವರೆಗೂ ವೈವಿಧ್ಯದಿಂದ ಕೂಡಿದೆ. ಯಾವುದೇ ಕಾಲಘಟ್ಟದಲ್ಲಿ ಬರೆಯುತ್ತಿರುವ ಕವಿ ತನ್ನ ಕಾವ್ಯವನ್ನು ಒಂದು ನಿರ್ದಿಷ್ಟ ಸಾಹಿತ್ಯ ಪರಂಪರೆಯಿಂದ ಪಡೆದಿರುತ್ತಾನೆ. ಹೀಗಾಗಿ ಕಾವ್ಯ ಪರಂಪರೆಯಲ್ಲಿ ಪ್ರತಿಮಾ ಸಂವಿಧಾನದ ಸ್ವರೂಪ ನಿರಂತರತೆಯಿಂದ ಕೂಡಿದೆ. ದಲಿತ ಬಂಡಾಯ ಕಾವ್ಯಕ್ಕೆ ಈ ಪ್ರಬಂಧದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಆದರೂ ಹಿನ್ನೆಲೆಯ ರೂಪದಲ್ಲಿ ಇತರ ಘಟ್ಟಗಳ ಸಂಕ್ಷಿಪ್ತ ಪರಿಶೀಲನೆಯಾಗಿದೆ.ಯಾವುದೇ ಕಾವ್ಯದ ಗ್ರಹಿಕೆ ತಾತ್ಕಾಲಿಕವಾದರೆ, ಅನುಭವ ಶಾಸ್ವತವಾದುದು.ಹೀಗಾಗಿ ವಿಶ್ಲೇಷಣೆ ತಾತ್ಕಾಲಿಕ ಮಾತ್ರ. ಅಂದರೆ ಸ್ಥಳ ಹಾಗೂ ಕಾಲಘಟ್ಟದ ವ್ಯತ್ಯಾಸದಿಂದಾಗಿ ಗ್ರಹಿಕೆಯ ಪ್ರಕ್ರಿಯೆ ಬದಲಾಗುತ್ತಲೇ ಹೋಗುವುದು. ಪ್ರತಿಮಾ ಸಂವಿಧಾನದ ಮೂಲಕ, ಕಾವ್ಯದ ಗ್ರಹಿಕೆ ಎಂಬುದು ಬಹು ಸಾಧ್ಯತೆಯಲ್ಲಿ ಒಂದು. ಆದರೆ ಕಾವ್ಯ ಕೊಡುವ ಅನುಭವ ದಟ್ಟ ಹಾಗೂ ಸಂಕೀರ್ಣವಾದುದು.

ಪ್ರಸ್ತುತ ಮಹಾ ಪ್ರಬಂಧದಲ್ಲಿ ನಿಸರ್ಗ ಪ್ರತಿಮೆಗಳ ಬದಲಾವಣೆ. ಹಿಂಸೆ, ಲೈಂಗಿಕ ಹಾಗೂ ಮಾನವ ಹೀಗೆ ನಾಲ್ಕು ತೆರನಾಗಿ ವರ್ಗೀಕರಿಸಲಾಗಿದೆ. ಈ ರೀತಿ ಪ್ರತಿಮೆಯ ಪರಿಕರಗಳನ್ನು ವರ್ಗೀಕರಣದ ಆಧಾರವಾಗಿಟ್ಟುಕೊಂಡರೂ ಅನೇಕ ಪ್ರತಿಮೆಗಳಲ್ಲಿ ಇಂತಹ ಮುಖಾಮುಖಿ ನಡೆಯುತ್ತದೆ. ಆ ಬಗೆಯ ಸಂಕೀರ್ಣ ಪ್ರತಿಮೆಗಳನ್ನು ಕೂಡ ಇಲ್ಲಿ ಪರಿಶೀಲಿಸಲಾಗಿದೆ.

/ ದಲಿತ ಬಂಡಾಯ ಕಾವ್ಯದ ವಸ್ತು, ರೂಪ, ಆಶಯ ಹಾಗೂ ಮನೋಧರ್ಮಗಳ ಕುರಿತು ಸಾಕಷ್ಟು ಅಧ್ಯಯನವಾಗಿದ್ದರೂ ಕಾವ್ಯದ ವಿನ್ಯಾಸದ ಬಗ್ಗೆ, ಅದರಲ್ಲೂ ಪ್ರತಿಮಾ ಸಂವಿಧಾನದ ಬಗ್ಗೆ ಬಂದಿರುವ ವಿಮರ್ಶೆ ಕಡಿಮೆಯೆಂದೇ ಹೇಳಬೇಕು.

ದಲಿತ ಬಂಡಾಯ ಕಾವ್ಯದ ಬಗೆಗಿನ ಚರ್ಚೆಗೆ ಅವರು ಬಳಸುವ ಪ್ರತಿಮೆಗಳ ನಡುವೆ ಇರುವ ಅಂತರವು ಕೆಲವು ಮಾರ್ಗಗಳನ್ನು ನೀಡಬಹುದೆಂದು ಈ ನಿಬಂಧದಲ್ಲಿ ಗೋಚರಿಸುತ್ತದೆ.

### 4.ಕಥಾ ಕಥನ

ಸಂಶೋಧಕರು ಕನ್ನಡ ಸಾಹಿತ್ಯದ ಮುಖ್ಯ ಚಳುವಳಿಯಾಗಿ, ಸಾಹಿತ್ಯಿಕವಾಗಿ ತನ್ನ ಛಾಪನ್ನು ಮೂಡಿಸಿದ ಬಂಡಾಯ ದಲಿತ ಸಾಹಿತ್ಯದ ಮುಖ್ಯ ಪ್ರಕಾರವಾದ ಸಣ್ಣ ಕತೆಗಳು. ವಸ್ತು ವೈವಿಧ್ಯದ ದೃಷ್ಟಿಯಿಂದಲೂ, ಭಾಷೆ, ಶೈಲಿಯ ಸೃಷ್ಟಿಯಿಂದಲೂ ವೈವಿದ್ಯಮಯವಾಗಿದೆ ಎಂದು ತಿಳಿಸಿದ್ದಾರೆ.

ಮನುಷ್ಯನ ಆತ್ಮ ನಿರೀಕ್ಷೆಗೆ ಅಂತರ್ಮುಖತೆಗೆ ಹೆಸರಾಗಿದ್ದ ನವ್ಯ ಕತೆಗಳಿಂದ ಭಿನ್ನವಾಗಿ ಬಂಡಾಯ ದಲಿತ ಕತೆಗಳು ಸಮಾಜ ಮುಖಿಯಾಗಿ ಕಂಡು ಬಂದದ್ದು, ಹಳ್ಳಿಗಾಡಿನ ಕನ್ನಡದ ಒಡಕು ಭಾಷೆಯನ್ನು ಬಳಸುವ ಮೂಲಕ ಭಾಷೆಗೆ ಇದ್ದ ಮೈಲಿಗೆಯನ್ನು ಹೊಡೆದೊಡಿಸಿದರು.ಕನ್ನಡ ಭಾಷೆಗೆ ಇರಬಹುದಾದ ಅನೇಕ ಆಯಾಮಗಳನ್ನು, ಸಮೃದ್ಧತೆಯನ್ನು ಇಲ್ಲಿ ಎತ್ತಿ ಹಿಡಿಯಲಾಗಿದ್ದು, ಯಾವುದೇ ಭಿನ್ನ ಚಳುವಳಿಯ ವೈಶಿಷ್ಟ್ಯವನ್ನು ಹೇಳುವಾಗದಲಿತ ಬಂಡಾಯ ಕತೆಗಳ ಈ ಮಾದರಿಯನ್ನು ಉಲ್ಲೇಖಿಸಬಹುದಾದಷ್ಟುಪ್ರಖರತೆಯನ್ನು ಸಂಶೋಧಕರು ಕಂಡುಕೊಂಡಿದ್ದಾರೆ. ಶೈಲಿ ಮತ್ತು ತಂತ್ರದ ದೃಷ್ಟಿಯಿಂದ ಅಭ್ಯಾಸ ಮಾಡಿದ್ದರೆ. ಹಳ್ಳಿಗಾಡಿನಿಂದ ಬಂದ ಲೇಖಕರಾದ್ದರಿಂದ ಸಹಜವಾದ ಶೈಲಿಯನ್ನು ಬಹುತೇಕ ಕತೆಗಳಲ್ಲಿ ಬಳಸಿ, ವ್ಯಕ್ತಿ ವಿಶಿಷ್ಟ ಅನುಭವಕ್ಕಿಂತಲೂ ಸಮಾಜದ ಅನುಭವವನ್ನು ನಮ್ಮ ಕಥಾಬಿತ್ತಿಯ ಸಿದ್ಧಾಂತವನ್ನಾಗಿ ಸ್ವೀಕರಿಸಿದ್ದಾರೆ. ಕತೆಗಾರರಲ್ಲಿ ಕಂಡ ಕಥನಕಲೆ ಸಮುದಾಯದಅನುಭವದಿಂದ ಬಂದಿದ್ದಾದ್ದರಿಂದ ಪ್ರತಿಮೆ, ಪ್ರತೀಕಗಳು, ರೂಪಕ, ಉಪಮೆಗಳು, ಸಾಮಾನ್ಯ ಜನರ ನುಡಿಗಟ್ಟುಗಳಿಂದ ರೂಪುಗೊಂಡು, ಕತೆಗಳ ಭಾಷೆಗೆ ಕಾವ್ಯದ ಸ್ಪರ್ಶವಿರುವುದು ಕಂಡುಕೊಂಡಿದ್ದಾರೆ. ಕಾವ್ಯಮಯ ಭಾಷೆಯಿಂದ ಸರಳತೆಯ ಕಡೆಗೆ, ಸಾಮಾನ್ಯರ ಆಡುಮಾತಿನ ಕಡೆಗೆ ಕಥಾ ಸಾಹಿತ್ಯ ಸಾಗದೆ 'ಗದ್ಯ ಸಾಹಿತ್ಯದ

ಬೆಳವಣಿಗೆಯ ಸೃಷ್ಟಿಯಿಂದ ಸಣ್ಣಕತೆಗಳು ಮಹತ್ವದ ಕೊಡುಗೆ ನೀಡಿವೆ' ಎಂದು ಸಂಶೋಧನೆಯ ಮೂಲಕ ಸ್ಪಷ್ಟ ಪಡಿಸಿದ್ದಾರೆ. ದಲಿತ ಬಂಡಾಯ ಕತೆಗಳ ಸಂವೇದನೆ ವಿಶಿಷ್ಟವಾದುದ್ದು. ಹಿಂದಿನ ಸಂವೇದನೆಗಳಿಗಿಂತ ಬೇರೆಯಾದ, ವಿಶಿಷ್ಟವಾದ ಸಂವೇದನೆ ಹುಟ್ಟಿಕೊಂಡದ್ದು ಆಂತರಿಕ ಒತ್ತಡ ಮತ್ತು ಸಾಮೂಹಿಕ ಅನಿವಾರ್ಯತೆಗಳಿಂದ ಎಂಬುದನ್ನು ಕಂಡುಕೊಂಡಿದ್ದಾರೆ. ಬಂಡಾಯದ ಕತೆಗಳ ಸೃಷ್ಟಿ ಸಮುದಾಯದ ಚಳುವಳಿಗಳಿಂದ ಪ್ರೇರಿತರಾಗಿ ಜನಸಮುದಾಯದ ಎಚ್ಚರ, ಹೊಸ ಆಲೋಚನೆ, ಬದಲಾವಣೆಯ ತುರ್ತುಗಳು, ಸಂವೇದನಾಶೀಲತೆಯಲ್ಲಿವೆ. ಹಳ್ಳಿಗಾಡಿನ ಮೂಲೆಯಲ್ಲಿ ವ್ಯಕ್ತಿತ್ವವೇ ಇಲ್ಲದಂತೆ ಬದುಕುತ್ತಿದ್ದ ಕ್ಷುದ್ರ ಜೀವಿಗಳು, ತಮ್ಮದೇ ಆದ ಅಸ್ತಿತ್ವಕ್ಕಾಗಿ ಹೋರಾಟ ನಡೆಸಿದ ಘಟನೆಗಳು ಮತ್ತು ಜೀವನ ವೃತ್ತಾಂತಗಳು ಬಂಡಾಯ ಕತೆಗಳದ್ದು.

ನಮ್ಮ ಲೇಖಕರು ನಾಡಿನ ಮೂಲೆ ಮನುಷ್ಯನ ಮನಸ್ಸನ್ನು ಹೊಕ್ಕು, ಅವರ ಅನಿಸಿಕೆಗಳನ್ನು ಕತೆಗಳಾಗಿಸಿರುವ ವಿಶೇಷ ಸಂವೇದನೆ ಇಲ್ಲಿನ ಕತೆಗಳಲ್ಲಿವೆ. ನವ್ಯ ಕತೆಗಾರರ ಸೃಜನ ಶೀಲತೆ ಎದುರಿಸುತ್ತಿದ್ದ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳಲು ಬಂಡಾಯ ಕತೆಗಾರರು ಸಾಕಷ್ಟು ಪ್ರಯತ್ನಿಸಿ ಯಶಸ್ವಿಯಾಗಿದ್ದು, ವ್ಯವಸ್ಥೆಯೇ ಕ್ರೌರ್ಯದ ಸಾಧನವಾದಾಗ ಮನುಷ್ಯ ಅಸಹಾಯಕನಾಗುತ್ತಾನೆ ಎಂದು ವಿವರಿಸಿದ್ದಾರೆ. ಇಂತಹ ಸಂದಿಗ್ಧವನ್ನು ಸೆರೆಹಿಡಿಯುವಲ್ಲಿ ಸಣ್ಣ ಕತೆಗಳು ಯಶಸ್ವಿ ಪ್ರಯೋಗವಾಗಿ, ಬಂಡವಾಳ ಶಾಹಿ ಸಮಾಜದ ಬೆಳವಣಿಗೆಯಾಗುತ್ತಿದ್ದಂತೆಯೇ ಅನೇಕ ಬುಡಕಟ್ಟು ಜನಾಂಗಗಳು, ಸಾಂಸ್ಕೃತಿಕ ಮಹತ್ವದ ಅಂಶಗಳು ವಿನಾಶದಅಂಚಿಗೆ ತಲುಪಿ ಅನೇಕ ಭಾರಿ ನಿರ್ನಾಮವಾಗುತ್ತವೆ. ಸಣ್ಣ ಕತೆಗಳು ಇಂತಹ ಸಾಂಸ್ಕೃತಿಕ ದಾಖಲೆಗಳಾಗಿ ಧರ್ಮ ಮತ್ತು ನೈತಿಕತೆ ಎಪ್ಪತ್ತರಶತಮಾನದಿಂದೀಚೆಗೆ ಅನೇಕ ರೀತಿಯ ಬದಲಾವಣೆಗೆ ಒಳಗಾಗಿವೆ. ಮೇಲಿನ ಎಲ್ಲಾ ಕಾರಣಗಳಿಂದ ಬಂಡಾಯ ಕತೆಗಳ ಸಂವೇದನಾಶೀಲತೆ ಉತ್ತಮ ಮಟ್ಟದ್ದಾಗಿದೆ ಎಂಬುದು ಸಂಶೋಧಕರ ಅನಿಸಿಕೆಯಾಗಿದೆ.

ಪ್ರಸ್ತುತ ಪ್ರಬಂಧವು ದಲಿತ ಬಂಡಾಯ ಕಥಾ ಸಾಹಿತ್ಯವನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಶಿಸ್ತುಗಳ ಮೂಲಕ ಮಾಡಿದ ಅಧ್ಯಯನವಾಗಿದೆ. ಬಂಡಾಯ ದಲಿತ ಕಥಾ ಸಾಹಿತ್ಯವು ಎರಡೂ ನಿಲುವುಗಳನ್ನು ಒಟ್ಟಿಗೆ ಸೃಜನಕ್ರಿಯೆಯಲ್ಲಿ ಒಡಮೂಡಿಸಿಕೊಂಡಿರುವುದರಿಂದ ಅಧ್ಯಯನ

ಮಾಡಲಾಗಿದ್ದು, ಭಾಷೆ, ವಸ್ತು, ಶೈಲಿ ಸಾಹಿತ್ಯಿಕ ಅಧ್ಯಯನದ ವ್ಯಾಪ್ತಿಗೆ ಬಂದರೆ, ವಸ್ತುವಿನ ಆಯ್ಕೆಗೆ ಕಾರಣವಾದ ಸಮಾಜ, ಅದರ ಕ್ರೌರ್ಯ, ಸಾಮಾಜಿಕ ಸಂದರ್ಭಗಳು ಸಾಹಿತ್ಯೇತರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ, ಕತೆಗಳ ಪರಿಸರ, ಅಲ್ಲಿ ಬರುವ ಜನಸಮುದಾಯದ ಸಾಮಾಜಿಕ ಹಿನ್ನೆಲೆಯನ್ನು ಪ್ರಧಾನವಾಗಿ ಪರಿಗಣಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಆದ್ದರಿಂದಲೇ ಸಾಂಸ್ಕೃತಿಕವಾಗಿ ಭಿನ್ನವಾದ ಮುಸ್ಲಿಂ ಸಮುದಾಯದ ಕತೆಗಾರನ ವೈಶಿಷ್ಟ್ಯವನ್ನು, ಮಹಿಳೆಯರ ಹೆಣ್ತನದ ತುಡಿತಗಳನ್ನು ಬೇರೆ ಬೇರೆಯಾಗಿಯೇ ಚರ್ಚಿಸಿ ಮೌಲ್ಯಮಾಪನಮಾಡಿದ್ದಾರೆ.

**5. ಪ್ರತಿಭಟನಾ ಸಿದ್ಧಾಂತಗಳ ನೆಲೆಯಲ್ಲಿ ಬುದ್ಧ, ಬಸವ, ಅಂಬೇಡ್ಕರ್**

ಶರಣಬಸವೇಶ್ವರ ವೀರಭದ್ರಪ್ಪ ಡಾಣಿ ಎಂಬುವರು ಡಾ.ಎನ್.ಚಿನ್ನಸ್ವಾಮಿ ಸೋಸಲೆಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುವ ಮಹಾ ಪ್ರಬಂಧವಿದು. ಈ ಪ್ರಬಂಧವು ಬುದ್ಧನ ಬದುಕು ಹಾಗೂ ಬೋಧನೆ, ಬಸವಣ್ಣನವರ ಬದುಕು ಹಾಗೂ ವಿಚಾರಗಳು, ಅಂಬೇಡ್ಕರ್‌ರವರ ಬದುಕು ಹಾಗೂ ವಿಚಾರಗಳು, ಈ ಮೂವರ ಕಾಲಘಟ್ಟದಲ್ಲಿ ವರ್ಣ, ವರ್ಗ, ಅಸ್ಪೃಶ್ಯತೆಯ ಆಚರಣೆಯ ವಿರುದ್ಧ, ಮೌಢ್ಯತೆ, ಅನಿಷ್ಟಗಳ ವಿರುದ್ಧ ಪ್ರತಿಭಟನೆ, ಕೊನೆಯದಾಗಿ ಬುದ್ಧ, ಬಸವ, ಅಂಬೇಡ್ಕರ್ ವಿಚಾರಗಳ ಪ್ರಸ್ತುತತೆ ಬಗ್ಗೆ ಬೆಳಕು ಚಲ್ಲುತ್ತಾದೆ.

ಬುದ್ಧ, ಬಸವ, ಅಂಬೇಡ್ಕರ್‌ರವರು ತಮ್ಮ ಕಾಲದಲ್ಲಿ ಸುಂದರ ಸಮಾಜ ನಿರ್ಮಿಸಲು ತಮ್ಮ ಜೀವನವನ್ನೇ ಅರ್ಪಣೆ ಮಾಡಿದ ಮಹಾತ್ಮರು. ಈ ಮೂವರ ಜೀವನ, ಸಿದ್ಧಾಂತ, ಸಾಧನೆ, ಸಿದ್ಧಿಗಳತ್ತ ಗಮನಹರಿಸಿ, ನಿರಂತರ ಪರಿವರ್ತನಾ ಶೀಲ ಸಮಾಜದ ಅಭ್ಯುದಯಕ್ಕೆ ನೀಡಿದ ಕೊಡುಗೆಯನ್ನು ಅಧ್ಯಯನ ಮಾಡುತ್ತ ಸಮಕಾಲೀನ ಜನರ ಗಮನ ಸೆಳೆದು, ಚಿಂತನೆ ಹಚ್ಚುವ ಉದ್ದೇಶ ಹೊಂದಿದ್ದಾರೆ. ಆಯಾ ಕಾಲದ ಜನ ವರ್ಗದ ಸಮಸ್ತ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಬದುಕಿನ ಮೌಲ್ಯಗಳು ಯಾವ ರೀತಿಯಲ್ಲಿದ್ದವು, ಇವರ ವಿಚಾರಗಳು ಆಯಾ ಕಾಲದ ಜನ ವರ್ಗದ ಜೀವನವನ್ನು ಉತ್ಕರ್ಷಕ್ಕೆ ಕೊಂಡ್ಯೊಯಲು ಬುದ್ಧ, ಬಸವ, ಅಂಬೇಡ್ಕರ್ ಹೇಗೆ ಹೋರಾಡಿದರು ಎಂಬುದನ್ನು ಅರಿಯುವ ಉದ್ದೇಶಹೊಂದಿದ್ದಾರೆ. ನಮ್ಮ ಪರಂಪರೆಯ ಕಂದಾಚಾರಗಳನ್ನ ಪ್ರತಿಭಟಿಸಿ ತಮ್ಮ ಯುಗ

ಧರ್ಮಕ್ಕನುಗುಣವಾದ ಹೊಸ ವಿಚಾರ ಪ್ರಣಾಳಿಕೆಯನ್ನು ನಿರೂಪಿಸಿದವರಲ್ಲಿ ಈ ಮೂರು ವ್ಯಕ್ತಿಗಳು ಪ್ರಮುಖರು. ಆದ್ದರಿಂದ ಇಂಥವರ ಕುರಿತ ಅಧ್ಯಯನ, ಸಮಾಜದ ಪುನರ್ ರಚನೆಯ ದೃಷ್ಟಿಯಿಂದ, ಇತಿಹಾಸ ಮರೆತು ಬದುಕುತ್ತಿರುವ ಸಮಾಜಕ್ಕೆ ಐತಿಹಾಸಿಕ ಪ್ರಜ್ಞೆಯನ್ನು ಮೂಡಿಸಲು, ಆ ಕುರಿತು ಚಿಂತಿಸಲು, ಸೂಕ್ತವಾದದ್ದನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಲು ಹಲವು ದೃಷ್ಟಿಯಿಂದ ಈ ಅಧ್ಯಯನ ಮಹತ್ವವೆನಿಸುತ್ತದೆ. ಈ ಮೂರು ವ್ಯಕ್ತಿಗಳು ನಡೆಸಿದ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ, ಸಂಘರ್ಷದ ತಾತ್ವಿಕ ಧೋರಣೆ ಹಾಗೂ ಬೌದ್ಧಿಕ ಉನ್ನತಿಯನ್ನು ಅರಿತುಕೊಂಡು ಅಂತಹ ಹೋರಾಟದ ಅಗತ್ಯ ಸಮಕಾಲೀನ ಸಂದರ್ಭದಲ್ಲಿ ಅತ್ಯಂತ ಮಹತ್ವವೆಂದು ಸಂಶೋಧಕರು ಭಾವಿಸಿದ್ದಾರೆ.

ಬುದ್ಧನ ಹಿಂದಿನ ಸ್ಥಿತಿಗತಿ, ಕರ್ನಾಟಕದಲ್ಲಿ ಬೌದ್ಧ ಧರ್ಮದ ಪ್ರಸಾರ, ಪ್ರಭಾವ ಕುರಿತು ಅಧ್ಯಯನ ಮಾಡಿದ್ದಾರೆ. ಬೌದ್ಧ ಧರ್ಮದ ತತ್ವ, ಸಿದ್ಧಾಂತ, ಕಾರ್ಯತಂತ್ರ, ಸಮಾನತೆ ಪಡೆಯಲು ನಡೆಸಿದ ಪ್ರಯತ್ನದ ಬಗ್ಗೆ ಈ ಸಂಶೋಧನೆ ಬೆಳಕು ಚಲ್ಲುತ್ತಾದೆ. ಬಸವಣ್ಣನವರ ಪೂರ್ವದ ಸ್ಥಿತಿಗತಿ, ಇವರ ಪ್ರತಿಭಟನಾತ್ಮಕ ಹೋರಾಟದ ಪ್ರಭಾವ, ಪರಿಣಾಮ, ಕೆಳವರ್ಗದ ಮೇಲೆ ಬೀರಿದ ಪ್ರಭಾವಗಳನ್ನು ಕುರಿತು ಚರ್ಚಿಸಿದ್ದಾರೆ. ಅಂಬೇಡ್ಕರ್‌ರವರ ಪೂರ್ವದ ಸ್ಥಿತಿಗತಿ, ಭಾರತದಲ್ಲಿ ಆರಂಭಗೊಂಡ ಸಾಮಾಜಿಕ ಸುಧಾರಣೆಯ ಪ್ರಯತ್ನ, ಅಂಬೇಡ್ಕರ್ ಜೀವನ ಸಾಧನೆಗಳು, ಇವರ ಹೋರಾಟದ ವಿವಿಧ ಮಜಲುಗಳು ಹಾಗೂ ಸಾಮಾಜಿಕ ನ್ಯಾಯ, ಸಮಾನತೆಗಾಗಿ ನಡೆಸಿದ ಕಾರ್ಯ ತಂತ್ರ ಕುರಿತು ಚರ್ಚಿಸಿದ್ದಾರೆ.

ಈ ಪ್ರಬಂಧದಲ್ಲಿ 'ಅಸ್ಪೃಶ್ಯತೆ'ಯ ಆಚರಣೆಯ ವಿರುದ್ಧ ಪ್ರತಿಭಟನೆ ಮಾಡಿರುವ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಆದರೆ ಈ ಆಚರಣೆಯನ್ನು ಪ್ರತಿಭಟಿಸುವಾಗ ಈ ಮೂರು ವ್ಯಕ್ತಿಗಳಿಗೆ ಎದುರಾದ ಸಮಸ್ಯೆ, ಸಂಕಟಗಳನ್ನು ವ್ಯಕ್ತ ಪಡಿಸುವಲ್ಲಿ ವಿಫಲರಾಗಿದ್ದಾರೆ. ಈ ಮೂರು ವ್ಯಕ್ತಿಗಳ ಕಾಲದಲ್ಲಿ 'ಅಸ್ಪೃಶ್ಯ'ರಿಗೆ ಉಂಟಾದ ಶೋಷಣೆಯ ಬಗ್ಗೆ ಎಲ್ಲೂ ಹೇಳಿಲ್ಲ. ಬುದ್ಧ, ಬಸವ, ಅಂಬೇಡ್ಕರ್ ರವರ ತತ್ವಗಳು ಎಷ್ಟರ ಮಟ್ಟಿಗೆ ಸಮಾಜಕ್ಕೆ ತಲುಪಿದೆ ಎಂಬುದು ಈ ಪ್ರಬಂಧದಲ್ಲಿ ಕಂಡು ಬಂದಿಲ್ಲ.

## 6. ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿಸಂಸ್ಕೃತಿ

ಬಿ.ಎಂ.ಪುಟ್ಟಯ್ಯನವರು ಈ ಪ್ರಬಂಧವನ್ನು ಪ್ರೊ. ಶ್ರೀಕಂಠ ಕೂಡಗಿಯವರ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದಾರೆ. ಸಮಾಜದಲ್ಲಿ ಸರ್ವ ರೀತಿಯಿಂದಲೂ ಶೋಷಣೆಗೆ ಒಳಗಾಗಿರುವ ಮನುಷ್ಯನ ಬದುಕನ್ನು ಅರ್ಥವತ್ತಾಗಿ ಚಿತ್ರಿಸುವುದರ ಮುಖಾಂತರ ಈ ರೀತಿ ಶೋಷಣೆಗೆ ಒಳಗಾದ ಮನುಷ್ಯನಿಗೆ ಆತನ ಅಸ್ತಿತ್ವದ ಅರಿವನ್ನುಂಟು ಮಾಡುವ ಉದ್ದೇಶ ಹೊಂದಿದ್ದಾರೆ. ಅರಿವುಂಟು ಮಾಡುವುದರ ಜತೆಗೆ ಹೊಸ ಜಗತ್ತಿನ ಆಲೋಚನೆಗಳ ಜತೆ ಹೊಂದಿಕೊಂಡು ಹೋಗುವಂತೆ ಮಾಡುವುದು ದಲಿತ ಬಂಡಾಯ ಸಾಹಿತ್ಯದ ಉದ್ದೇಶವೆಂದು ಭಾವಿಸಿದ್ದಾರೆ. ಕಾದಂಬರಿಗಳ ಮೂಲಕ ಕೆಳ ಸಮುದಾಯಗಳ ಅಧ್ಯಯನವನ್ನು ಗ್ರಾಮೀಣ ನೆಲೆಯಲ್ಲಿ ಶ್ರಮ ಸಂಸ್ಕೃತಿಯನ್ನು ಗುರುತಿಸುವ ಉದ್ದೇಶ ಹೊಂದಿದ್ದಾರೆ. ವಸಾಹತು, ನವ ವಸಾಹತು ಪ್ರಭಾವ ಪ್ರೇರಣೆಗಳು ಇಂದಿನ ಜಾಗತಿಕವಾದ ರಾಜಕೀಯಾರ್ಥಿಕ ಸಂಬಂಧಗಳು ಹೊಸ ರೀತಿಯ ತಲ್ಲಣಗಳನ್ನು ಹುಟ್ಟು ಹಾಕುತ್ತವೆ. ಒಂದು ಹಂತದಲ್ಲಿ ಮನುಷ್ಯರಿಂದ ಮನುಷ್ಯರನ್ನು ಬೇರ್ಪಡಿಸುವ, ಕೀಳೀಕರಿಸುವ ಪ್ರವೃತಿಗಳು ಸಮಾಜದಲ್ಲಿ ಜೀವಂತವಾಗಿ ಉಳಿದು ಬಂದಿದ್ದವು. ಆದರೆ ಜಾಗತೀಕರಣದ ಫಲಿತಗಳು ಇಂದು ದೇಹ ಮನಸ್ಸುಗಳ ಮಧ್ಯೆಯೇ ವಿಕಾರಗಳನ್ನು , ಭಿನ್ನತೆಗಳನ್ನು ತಂದುಹಾಕುತ್ತಿವೆ. ನಿಸರ್ಗ ವಿಮುಖ ಸಾಮಾಜಿಕ ಬೆಳವಣಿಗೆಗಳನ್ನು ವಿಶ್ವಾಸ ರಹಿತ ಮಾನವ ಪ್ರವೃತ್ತಿಗಳನ್ನು ಕೇಂದ್ರೀಕೃತ ಆಕೃತಿಗಳನ್ನು ಥಾಳಾಗಿ ಬೆಳೆಸುತ್ತಿವೆ. ಆತನ ಭೋಗ ಜೀವನಕ್ಕೆ ಆಡಂಬರದ ಬದುಕಿಗೆ ಪ್ರೇರಣೆ ನೀಡುತ್ತಿವೆ. ಇಂತಹ ಸಂದರ್ಭದಲ್ಲಿ ಶ್ರಮಿಕ ವರ್ಗಗಳ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಪುನಾರಚನಾ ಹಂಬಲಿಕೆಗಳ ಕುರಿತು ಮತ್ತೆ ಚರ್ಚಿಸುವ ಉದ್ದೇಶ ಹೊಂದಿದ್ದಾರೆ.

ಮನುಷ್ಯನ ಬದುಕು 'ಪ್ರಜ್ಞೆ' ಮತ್ತು 'ಧೈರ್ಯ'ದ ಮೇಲೆ ಕ್ರಿಯಾಶೀಲವಾಗಿದೆ. ಕೆಳ ವರ್ಗಗಳು ಪ್ರಜ್ಞೆ ಮತ್ತು ಧೈರ್ಯದ ಕೊರತೆಯಿಂದಲೇ ಪ್ರತಿಷ್ಠಿತ ವರ್ಗಗಳ ಮೇಲೆ ಪೂಜ್ಯತೆ ಹಾಗೂ ವಿಧೇಯತೆಗಳನ್ನು ಬಳಸಿಕೊಂಡಿವೆ. ಇದು ಅವರ ಕೀಳರಿಮೆಗೆ

ಕಾರಣವಾಗಿದೆ. ಇದನ್ನು ಸದುಪಯೋಗ ಪಡಿಸಿಕೊಂಡ ಪ್ರತಿಷ್ಠಿತ ವರ್ಗಗಳು ಕೆಳವರ್ಗದವರನ್ನು ಜೀತಗಾರನಾಗಿಯೇ, ಕೂಲಿಯಾಳಾಗಿಯೇ ಬಳಸಿಕೊಂಡಿದ್ದು ಸತ್ಯ ಸಂಗತಿ. ಇದರಿಂದಾಗಿ ಕೆಳ ಸಂಸ್ಕೃತಿ ನ್ಯಾಯವಾಗಿ ವಿಧೇಯತೆಯ ಬದಲು ವಿನಯವನ್ನು, ಪೂಜ್ಯತೆಯ ಬದಲು ಪ್ರಜ್ಞೆಯನ್ನು ಸ್ಥಾಪಿಸ ಬೇಕಾಗಿದೆ. ಹಾಗಾಗಿ ಈ ದೇಶದ ಪಟ್ಟ ಭದ್ರರೆನಿಸಿಕೊಂಡಿರುವ ಮೇಲುವರ್ಗದವರಿಂದಲೂ ಹಾಗೂ ಜಾತಿ ಸಂಕುಲರೆನಿಸಿಕೊಂಡಿರುವ ಬ್ರಾಹ್ಮಣರ ಅವಮಾನಗಳು ತನನ್ನೇ ಅವಮಾನಿಸುತ್ತಿದೆ ಎಂದು ತಿಳಿಯುವ ದಲಿತ ಪ್ರಜ್ಞೆ ಇಲ್ಲಿ ಮಹತ್ವದ್ದಾಗಿದೆ.

ಕೆಳ ವರ್ಗ ಶೋಷಣೆಗೊಳಗಾಗಿಯೇ ಸ್ವಾಭಿಮಾನವನ್ನು ಮೈಗೂಡಿಸಿಕೊಂಡಿದೆ. ಇವರಲ್ಲಿ ಸ್ವಾಭಿಮಾನ ಮತ್ತು ಬಡತನಗಳ ಕೂಡಿಕೆಯಿಂದ ಹುಟ್ಟಿರುವ 'ಪ್ರಜ್ಞೆ' ಇರುವುದರಿಂದ ವರ್ತಮಾನದ ಬದುಕಿನ ಬಗ್ಗೆ ಭರವಸೆ ಇಟ್ಟು ಜೀವಂತವಾಗಿದ್ದಾರೆ. ಕೆಳ ವರ್ಗಗಳ ಜೀವಪರ ಹಾಗೂ ವ್ಯಕ್ತಿ ಸಮಾನತೆಗಾಗಿ ದಲಿತ ಬಂಡಾಯದ ಸಂದರ್ಭದಲ್ಲಿ ರಚನೆಗೊಂಡ ಸಾಹಿತ್ಯದ ಎಲ್ಲಾ ಪ್ರಾಕಾರಗಳಲ್ಲಿ ಇದು ಮಹತ್ವದ್ದಾಗಿರುತ್ತದೆ.

ಈ ಮಹಾ ಪ್ರಬಂಧಕ್ಕೆ ದಲಿತ ಸಾಹಿತ್ಯ ಪ್ರಾಕಾರಗಳಾದ ಕಾವ್ಯ, ಕಥೆ, ನಾಟಕ, ಕಾದಂಬರಿ, ಬೌದ್ಧ, ಜೈನ, ವಚನ ಸಾಹಿತ್ಯದ ಚಿಂತನೆಗಳನ್ನು ತೆಗೆದುಕೊಂಡಿದ್ದಾರೆ. ಒಟ್ಟಿನಲ್ಲಿ ದಲಿತ ಸಾಹಿತ್ಯದ ಸ್ವರೂಪವನ್ನು ಸೂಕ್ಷ್ಮವಾಗಿ ಗಮನಿಸಿ, ಅದರ ಮುಖ್ಯ ನೆಲೆಗಳನ್ನು ಚರ್ಚಿಸಿದ್ದಾರೆ.

'ಕನ್ನಡ ದಲಿತ ಬಂಡಾಯ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ ಎಂಬ ಪ್ರಬಂಧದಲ್ಲಿ ನಿಸರ್ಗ ಪ್ರತಿಮೆಯ ಬದಲಾವಣೆ, ಹಿಂಸೆ, ಲೈಂಗಿಕತೆ ಮತ್ತುಮಾನವ ಸಂಬಂಧದ ದೃಷ್ಟಿಕೋನದಲ್ಲಿ ಅಧ್ಯಯನ ನಡೆಸಿದ್ದಾರೆ. 'ದಲಿತ ಬಂಡಾಯ ಕಾದಂಬರಿಗಳಲ್ಲಿ ಶ್ರಮ ಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ' ಎಂಬ ಸಂಪ್ರಬಂಧದಲ್ಲಿ ಕಾದಂಬರಿಗಳನ್ನು ಆಧಾರವಾಗಿಟ್ಟುಕೊಂಡು ಕೆಳವರ್ಗ ಹಾಗೂ ಶ್ರಮ ಸಂಸ್ಕೃತಿಯ ಬಗ್ಗೆ ಗಮನರ್ಹವಾಗಿ ಚರ್ಚಿಸಿ, ಶೋಷಣೆಗೆ ಒಳಗಾದ ಜನಾಂಗದವರ ಬದುಕನ್ನು ಚರ್ಚಿಸಿದ್ದಾರೆ ಹಾಗೂ 'ದಲಿತ ಮಹಿಳಾ ಸಂಕಥನ' ಎಂಬ ಮಹಾಪ್ರಬಂಧದಲ್ಲಿ ಪ್ರತ್ಯೇಕವಾಗಿ ದಲಿತ ಸ್ತ್ರೀ ಪ್ರಜ್ಞೆಯನ್ನು, ಕುಟುಂಬ ಸಮಾಜದಲ್ಲಿ ದಲಿತ ಮಹಿಳೆಯ ಪಾತ್ರ, ಸ್ವರೂಪ, ಸಂಸ್ಕೃತಿಗೆ ದಲಿತ

ಮಹಿಳೆಯರ ಕೊಡುಗೆ ಕಾಣಿಕೆ ವೇದಗಳ ಕಾಲದಲ್ಲಿ ದಲಿತ ಹೆಣ್ಣಿನ ಪಾತ್ರಗಳನ್ನು ಚರ್ಚಿಸಿದ್ದಾರೆ. ಕೊನೆಯದಾಗಿ 'ಕಥಾ-ಕಥನ'ವೆಂಬ ಸಂಶೋಧನ ಪ್ರಬಂಧದಲ್ಲಿ ದಲಿತ ಬಂಡಾಯದ ಕಥೆಗಳನ್ನು ಆಯ್ಕೆ ಮಾಡಿಕೊಂಡು ಸಮಾಜ, ಸಮಾಜದ ಕಾರ್ಯ, ಸಾಮಾಜಿಕತೆ, ಕತೆಗಳ ಪರಿಸರ, ಜನ ಸಮುದಾಯದ ಸಾಮಾಜಿಕ ಹಿನ್ನೆಲೆಯನ್ನು ಪ್ರಧಾನವಾಗಿಸಿಕೊಂಡು ಅಧ್ಯಯನವನ್ನು ಕೈಗೊಂಡಿದ್ದಾರೆ.

ಒಟ್ಟಿನಲ್ಲಿ ಈವರೆಗೂ ದಲಿತ ಸಮುದಾಯದ ವಿಷಯವಾಗಿ ನಡೆಸಲಾದ ಕೆಲ ಸಂಶೋಧನೆಗಳಲ್ಲಿ ಅತಿ ಮುಖ್ಯವಾದ ಪ್ರಬಂಧಗಳನ್ನು ಸಂಕ್ಷಿಪ್ತ ಸಮೀಕ್ಷೆ ನಡೆಸಿ, ಅವುಗಳಲ್ಲಿ ಯಾವೊಂದು ಪ್ರಬಂಧವು ದಲಿತ ಕಾವ್ಯಗಳಲ್ಲಿನ ಪ್ರತಿಭಟನೆಯ ವಿಚಾರವನ್ನು ಪ್ರಸ್ತಾಪ ಮಾಡಿಲ್ಲವೆಂದು ಖಾತ್ರಿ ಪಡಿಸಿಕೊಂಡಿದ್ದೇನೆ.

ಮೇಲಿನ ಸಂಶೋಧನಾ ಪ್ರಬಂಧಗಳಲ್ಲಿ ಎಲ್ಲಿಯೂ ಪ್ರತಿಭಟನಾ ಕಾವ್ಯಗಳಿಗೆ ಸಂಬಂಧಪಟ್ಟ ಅಧ್ಯಯವಾಗಲಿ, ಅಧ್ಯಾಯನವಾಗಲಿ ಇಲ್ಲದಿರುವ ಅಂಶಗಳು ಕಂಡು ಬಂದಿದ್ದು, ನನ್ನ ಮಹಾ ಪ್ರಬಂಧವಾದ 'ದಲಿತ ಕಾವ್ಯ ಮತ್ತು ಪ್ರತಿಭಟನೆ' ತೀರಾ ಹೊಸದೆಂದು ಭಾವಿಸಿರುತ್ತೇನೆ. ಈ ಸಂಶೋಧನೆಯಲ್ಲಿ ದಲಿತ ಕಾವ್ಯದಲ್ಲಿ ವ್ಯಕ್ತವಾಗಿರುವ ಹಸಿವು, ಅರಿವಿನ ವಂಚನೆ, ನೋವು, ಲೈಂಗಿಕಶೋಷಣೆ ಹಾಗೂ ಪ್ರತಿಭಟನೆಯ ಅಂಶಗಳ ಬಗ್ಗೆ ಚರ್ಚಿಸಲಾಗಿರುವುದರಿಂದ ಇತ್ತೀಚಿನ ಸಂಶೋಧನಾ ಕ್ಷೇತ್ರಕ್ಕೆ ಈ ಪ್ರಯತ್ನ ನೂತನವಾಗಿದೆ.

# ಅಧ್ಯಾಯ-3
# ದಲಿತ ಸಾಹಿತ್ಯದ ಪರಿಕಲ್ಪನೆ

ಕಾವ್ಯವನ್ನೇ ಪ್ರತಿಭಟನೆಯ ಅಸ್ತ್ರವನ್ನಾಗಿ ಬಳಸಿದ ಸಾಹಿತ್ಯ ಚಳುವಳಿ ಎಂದರೆ 'ದಲಿತ ಸಾಹಿತ್ಯ'. ಪ್ರತಿಭಟನೆಯೆಂಬುದು ದಲಿತ ಜನಾಂಗಕ್ಕಾಗಿಯೇ ಜನ್ಮ ತಾಳಿದ ಸಾಹಿತ್ಯಿಕ ಅಸ್ತ್ರ. ಇಂತಹ ಪ್ರತಿಭಟನಾ ಸಾಹಿತ್ಯದ ಬಗ್ಗೆ ಅಧ್ಯಯನ ಮಾಡಿ ಇದರ ಹೆಜ್ಜೆಗಳನ್ನು, ಚಹರೆಗಳನ್ನು ಚರ್ಚಿಸುವುದು ಮಹತ್ವದ ಕೆಲಸವೇ ಸರಿ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ ಸಾಹಿತ್ಯಗಳೆಂಬ ಘಟ್ಟಗಳಿವೆ. ನವೋದಯ ಸಾಹಿತ್ಯವು ಆದರ್ಶ ಪ್ರಿಯತೆ, ನೈಜವಾದ ಉತ್ಸಾಹದೊಂದಿಗೆ ವಾಸ್ತವಾಂಶಗಳನ್ನು ಜನರಿಗೆ ನೀಡಿತು. ವಾಸ್ತವಾಂಶವನ್ನು ಹೇಳುವಾಗ ಜನರಿಗೆ ಹೊಸ ಜ್ಞಾನ ಪ್ರಸರಣೆ, ಹಿಂದಿನ ಕಲೆಯ ಅನುಭವ, ಉತ್ತಮ ಜೀವನದ ಪ್ರೇರಣೆಗಳನ್ನು ಗಮನದಲ್ಲಿಟ್ಟುಕೊಂಡು, ಜೀವನವೆಂಬುದು ಅರ್ಥಪೂರ್ಣವಾದ ಅಸ್ತಿಭಾರದ ಮೇಲೆ ನಿಂತಿದೆ ಎಂಬ ನಿಲುವನ್ನು ಪ್ರಕಟಿಸಿ ಸಮಕಾಲೀನ ಸಮಾಜದ ಚಿತ್ರವು ಸಾಹಿತ್ಯದಲ್ಲಿ ಹೊಸದೆಂದು ತೋರಿಸಿ, ಆಧ್ಯಾತ್ಮಿಕ ದೃಷ್ಟಿ, ಪ್ರಕೃತಿಯ ವಿನೂತನಗಳನ್ನು ಚಿತ್ರಿಸಿದರು. ಆದರೆ ಅನ್ಯಾಯವನ್ನು ತಿಳಿಸುವಾಗ ರೋಷ, ಕ್ರಾಂತಿಯ ಕಾವು ಈ ಸಾಹಿತ್ಯದಲ್ಲಿ ಕಂಡು ಬರಲಿಲ್ಲ. ನವೋದಯ ಸಾಹಿತಿಗಳು ವ್ಯಕ್ತಿಯ ಮನಸ್ಸನ್ನು ಮೃದುಗೊಳಿಸುವ ಪ್ರಭಾವವನ್ನು ನಂಬಿಕೊಂಡಿದ್ದರು ಹಾಗೂ ಈ ಸಾಹಿತ್ಯವನ್ನು ಓದುವ ಸಾಹಿತ್ಯಾಸಕ್ತನು ಇದರಲ್ಲಿ ಸೃಷ್ಟಿಯಾದ ಪರಿಸರವನ್ನು ಗಮನದಲ್ಲಿ ಇಟ್ಟುಕೊಂಡಿರಬೇಕು. ಅಂದರೆ ಇಲ್ಲಿನ ಪರಿಸರಕ್ಕೆ ಪೂರ್ವಸಿದ್ಧನಾಗಿರಬೇಕು. ಏಕೆಂದರೆ "ಯಾವುದು ಪಲಾಯನವಾದ ಎಂದು ನಮಗೆ ತೋರಬಹುದೋ ಟೊಳ್ಳು ಆದರ್ಶ ಎಂದು ತೋರಬಹುದೋ, ನಿಷ್ಪ್ರಯೋಜಕ ಆಧ್ಯಾತ್ಮಿಕತೆ ಎಂದು ನಮಗೆ ತೋರಬಹುದೋ ಅದು ಪ್ರಾಮಾಣಿಕವಾಗಿ ಆ ಸಾಹಿತಿಗಳಿಗೆ ಜೀವಂತವಾಗಿ, ಶಕ್ತಿಯುತವಾಗಿ ಕಾಣುವ ಪರಿಸರದಲ್ಲಿ ಅವರಿದ್ದರು ಎಂಬುದನ್ನು ಮರೆಯುವಂತಿಲ್ಲ. ಅವರ ಕಣ್ಣ ಮುಂದೆಯೇ ಪವಾಡಗಳನ್ನು ಕಾಣುವಂತಾಗಿತ್ತು."(ಹೊಸಗನ್ನಡ ಸಾಹಿತ್ಯ ಚರಿತ್ರೆ, ಶೇಷಗಿರಿರಾವ್ ಎಲ್.ಎಸ್., 2013, ಪುಟ 59) ಒಟ್ಟಿನಲ್ಲಿ ನವೋದಯ ಸಾಹಿತ್ಯವು ನಿಸರ್ಗ, ಆಧ್ಯಾತ್ಮಕತೆ, ಭಾವಗೀತೆಯಉಕ್ತಿ, ಭಕ್ತಿ, ಪ್ರೇಮ ಭಾವನೆ, ನಿವೇದನೆ, ಜೀವನ ವಿವೇಕ, ಸ್ನೇಹ ಸೌಹಾರ್ದ, ಸ್ವಾತಂತ್ರ್ಯ ಪ್ರೇಮ, ರಾಷ್ಟ್ರೀಯ, ಸಾಮಾಜಿಕ, ಚಾರಿತ್ರಿಕ ಸಂದರ್ಭಕ್ಕೆ ಸಾಕ್ಷಿಯಾಯಿತು.

ಆದರೆ ಇಲ್ಲಿ ಒಂದು ಜನಾಂಗ, ಸಮುದಾಯ, ಜಾತಿಯ ಜನರಿಗಾಗಿ ಅಥವಾ ದಲಿತ ಸಮುದಾಯಕ್ಕೆ ದುಡಿದ ಮಹನೀಯರು ಕಾಣಬರುವುದಿಲ್ಲ.

ಪ್ರಗತಿಶೀಲ ಸಾಹಿತಿಗಳು ತಮ್ಮ ಸುತ್ತಲ ಸಮಾಜದ ಕೊಳೆಯನ್ನು ತೊಡೆದು ಹಾಕುವ ಧೈರ್ಯವನ್ನು ಸಾಹಿತ್ಯದಲ್ಲಿ ತೋರಿಸಿದರು. ಉತ್ತಮರು ಬಚ್ಚಿಡುವ ವಸ್ತು ವಿಷಯಗಳನ್ನು, ಆಷಾಡ ಭೂತಿಗಳನ್ನು ಬಯಲಿಗೆಳೆದು ಮನೆ–ಮಠ–ದೇವಸ್ಥಾನದಲ್ಲಿ ನಡೆಯುತ್ತಿದ್ದ ಮೋಸವನ್ನು, ಅನೈತಿಕತೆ, ಕಾರ್ಖಾನೆಗಳಲ್ಲಿ ನಡೆಯುವ ಶೋಷಣೆಯನ್ನು ಕೃತಿಗಳ ವಸ್ತುವಾಗಿಸಿಕೊಂಡು, ತಮ್ಮಬಹುತೇಕ ಕೃತಿಗಳಲ್ಲಿ ಜೀವನದ ನಗ್ನ ಸತ್ಯ ಹಾಗೂ ದೀನ–ದಲಿತರ ಮೇಲೆ ನಡೆದ ಶೋಷಣೆಯನ್ನು ಚಿತ್ರಿಸಿ "ರಾಜಸೇವಾಸಕ್ತ–ರಾಜಸೇವಾ ಪ್ರಸಕ್ತರ ಜರತಾರಿ ರುಮಾಲಿನವರ ಸಾಹಿತ್ಯ ಸಾಕು" (ಹೊಸಗನ್ನಡ ಸಾಹಿತ್ಯ ಚರಿತ್ರೆ , ಶೇಷಗಿರಿರಾವ್‌ಎಲ್.ಎಸ್., 2013, ಪುಟ 72) ಎಂದು ಸಾಹಿತ್ಯದ ಮೂಲಕ ಕೂಗಿ ಹೇಳಿದರು. 1935ರಲ್ಲಿ ಬಂದ ಸಾಹಿತ್ಯವು ಮಾರ್ಕ್ಸ್‌ವಾದದ ಮುಖ್ಯ ಕಾಳಜಿಗಳನ್ನು ಮೈಗೂಡಿಸಿಕೊಂಡು, ಬಂಡವಾಳ ಶಾಹಿ ಸಂಸ್ಕೃತಿಗೆ ವಿರೋಧವಾಗಿ ಪ್ರತಿಕ್ರಿಯಿಸಿತು. ಇದರಲ್ಲಿ ಕೆಲವೊಂದು ಕಾದಂಬರಿಗಳು ದಲಿತ–ಬಂಡಾಯ ಸಂವೇದನೆಯನ್ನು ಒಳಗೊಂಡಿವೆ. ಸಾಮಾಜಿಕ ಪ್ರಜ್ಞೆ, ಇತಿಹಾಸ ಪ್ರಜ್ಞೆ, ಸಾಂಸ್ಕೃತಿಕ ಪ್ರಜ್ಞೆ ಜೀವನದಲ್ಲಿ ಉತ್ತಮವಾದುದನ್ನು ಪಡೆಯ ಬೇಕಾದರೆ ಸಂಕಟ ಪಡಲೇ ಬೇಕೆಂಬ ನಿಲುವನ್ನು ಈ ಸಾಹಿತ್ಯ ಹೊಂದಿತ್ತು.

ನವ್ಯ ಸಾಹಿತಿಗಳು "ಅಪೂರ್ಣ ವ್ಯಕ್ತಿತ್ವದಿಂದ ಉದ್ವಿಗ್ನರಾಗಿ ಒಬ್ಬರ ಮೇಲೊಬ್ಬರು ನಾವು ಹರಿಹಾಯುತ್ತಿದ್ದೇವೆ. ಪ್ರಳಯದೆಡೆಗೆ ಜಗತ್ತನ್ನು ಎಳೆದೊಯುತ್ತಿದ್ದೇವೆ. ಆದ ಕಾರಣ ಸಾಹಿತ್ಯ ಬರೀ ಸತ್ಯ ಇಲ್ಲವೆ ಸೌಂದರ್ಯಕ್ಕೆ ಅಂಟಿಕೊಂಡು ನಿಲ್ಲದೆ, ಮೇಲೆ ಹೇಳಿದ ಸಮ್ಯಕ್ತ್ವವನ್ನು ಚಿತ್ರಿಸಬೇಕಾಗಿದೆ. ಇದು ಅಮೃತ ತತ್ವಗಳ ಸಮೀಕರಣವಾಗಬೇಕಾಗಿದೆ. ಈ ಸಮೀಕರಣವೇ ನವ್ಯ ಸಾಹಿತ್ಯದ ಸೂತ್ರವಾಗಬೇಕಾಗಿದೆ"(ಹೊಸಗನ್ನಡ ಸಾಹಿತ್ಯ ಚರಿತ್ರೆ , ಶೇಷಗಿರಿರಾವ್‌ಎಲ್.ಎಸ್., 2013, ಪುಟ 59 )ಎಂದು ವಿ.ಕೃ.ಗೋಕಕ್‌ರವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ನವ್ಯರು ತಮ್ಮ ಜೀವನದ ವಿಶ್ಲೇಷಣೆಯ ಒಂದು ಮಾಧ್ಯಮವನ್ನಾಗಿ ಸಾಹಿತ್ಯವನ್ನು ಆಯ್ಕೆ ಮಾಡಿಕೊಂಡರು. ಈ ಕಾಲದ ಸಾಹಿತಿಗಳು ಜೀವನದ ಅನುಭವಗಳನ್ನು ಸಾಹಿತ್ಯದಲ್ಲಿ ತಂದು, ಅನುಭವದ ಅರ್ಥವನ್ನು ಬಿಚ್ಚುವ ಪ್ರಯತ್ನ ಮಾಡಿದರು. ಆದರೆ ತಮ್ಮ ಅನುಭವವನ್ನು ವರ್ಣನೆ ಮಾಡದೇ, ಜೀವನದ ಪದರಗಳನ್ನು ಬಿಡಿಸಿಟ್ಟು ಅದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾಗಆಧುನಿಕ ತಾತ್ವಿಕ ಚಿಂತನೆಗಳಾದ 'ಇರುವಿಕೆ', 'ಅಸಂಬದ್ಧ'ವಾದಗಳನ್ನು ತಮ್ಮ ಕೃತಿಗಳಲ್ಲಿ ಬಳಸಿಕೊಡು ಸಿನಿಕತನ, ಪರಕೀಯತೆ, ಅನಾಥ ಪ್ರಜ್ಞೆ ಮುಂತಾದ ಜೀವನದ ಒತ್ತಡಗಳನ್ನು ಶೋಧಿಸುವುದೇ ಮುಖ್ಯವಾಗಿಸಿಕೊಂಡಿದ್ದರು.

ದಲಿತ ಸಾಹಿತ್ಯವು ನವೋದಯ, ಪ್ರಗತಿಶೀಲ, ನವ್ಯ ಸಾಹಿತ್ಯಗಳಿಗಿಂತ ಭಿನ್ನವಾಗಲು ಮುಖ್ಯ ಕಾರಣ ಈ ಸಾಹಿತ್ಯದಲ್ಲಿ ಪ್ರತಿಭಟನೆ ಹಾಗೂ ಸಾಮಾಜಿಕ ದನಿಗಳು ಮೂಡಿಬಂದಿರುವುದು. ಡಾ. ಬಿ.ಆರ್.ಅಂಬೇಡ್ಕರ್‌ರವರ ಪ್ರಭಾವದಿಂದ ಆರಂಭವಾದ ದಲಿತರ ಸಂಘಟನೆಗಳು, ಹೋರಾಟ ಪ್ರಾರಂಭಿಸಿ ಕೆಲವು ಗೆದ್ದರೆ, ಇನ್ನೂ ಕೆಲವು ಗೆಲುವಿನ ದಾರಿಯನ್ನು ಹಿಡಿಯುವ ಪ್ರಯತ್ನದಲ್ಲಿದ್ದವು. ಇದರ ನಂತರ ದಲಿತರು ಸಾಹಿತ್ಯದ ಮೂಲಕ, ಅದರಲ್ಲೂ ರಾಜಕೀಯ ಪ್ರೇರಣೆ ಇಲ್ಲದೆ, ದಲಿತರಿಗೆ, ಉಳ್ಳವರಿಂದ ಉಂಟಾದ ಅವಮಾನ, ಶೋಷಣೆ, ಅಸ್ಪೃಶ್ಯತನವನ್ನು ಹೋಗಲಾಡಿಸುವ ಪ್ರಯತ್ನವನ್ನು ಸಾಹಿತ್ಯದ ಮೂಲಕ ಮಾಡಿದರು.

ದಲಿತ ಲೇಖಕರ ಪ್ರಕಾರ ದಲಿತರಿಗೆ ಎದುರಾಗಿದ್ದ ಮುಖ್ಯ ಸಮಸ್ಯೆಗಳೆಂದರೆ 'ಅಸಮಾನತೆ', 'ಅವಮಾನ', 'ಅನಕ್ಷರತೆ', 'ಅಸ್ಪೃಶ್ಯತೆ', 'ಹಸಿವು', 'ಬಡತನ'. ಇವುಗಳಿಂದ ಶೋಷಿತರನ್ನು ಪಾರು ಮಾಡುವ ಧ್ಯೇಯದೊಂದಿಗೆ ದಲಿತ ಲೇಖಕರು ಸಾಹಿತ್ಯವನ್ನು ರಚಿಸಿದ್ದಾರೆ. ದಲಿತ ಸಾಹಿತ್ಯವು ದಲಿತರ ಜೀವನಾನುಭವವನ್ನು ಅಧಿಕೃತವಾಗಿ ತಂದು, ದಲಿತರ ಬದುಕಿನ ದಾಖಲೆಗಳನ್ನು ಆಧಾರ ಸಹಿತವಾಗಿ ಸಾಹಿತ್ಯದೊಳಕ್ಕೆ ತರುವಲ್ಲಿ ಯಶಸ್ವಿಯಾಗಿದೆ. ದಲಿತರು 'ಅಸ್ಪೃಶ್ಯತೆ'ಯಿಂದ ಮುಕ್ತಿಗಾಗಿ ಹೋರಾಟವನ್ನು ತಮ್ಮ ಅವಿಭಾಜ್ಯ ಅಂಗವಾಗಿ ಮಾಡಿಕೊಂಡು, ನೋವುಂಡ ಜನರ ಅನುಭವವನ್ನು ಅಕ್ಷರ ರೂಪದ ಮೂಲಕ ಸಾಹಿತ್ಯವಾಗಿಸಿದರು.

ಹಲವಾರು ಶತಮಾನಗಳಿಂದ ದಮನಕ್ಕೆ ಒಳಗಾಗಿ ಶೋಷಣೆಗೆ ಸಿಕ್ಕಿರುವ ನಾವು ಅಸ್ಪೃಶ್ಯರಲ್ಲ, ನಾವು ಮನುಷ್ಯರೆಂಬ 'ಎಚ್ಚರ' ಇವರಲ್ಲಿ ಮೂಡಿದಾಗ ದಲಿತ ಸಾಹಿತ್ಯ ಹುಟ್ಟಿಕೊಂಡಿದೆ.

ಒಟ್ಟಿನಲ್ಲಿ ನವೋದಯ ಸಾಹಿತ್ಯವು ವ್ಯಕ್ತಿಯ ಮನಸ್ಸನ್ನು ಮೃದುಗೊಳಿಸಲು, 'ಪ್ರಗತಿಶೀಲ' ಸಾಹಿತ್ಯವು ಸಾಮಾಜಿಕ ಕ್ರಾಂತಿಯನ್ನು ಸಾಧಿಸಲು, ನವ್ಯ ಸಾಹಿತ್ಯವು ಜೀವನದ ಅನುಭವಗಳನ್ನು ಸಾಹಿತ್ಯಕ್ಕೆ ತರಲು ನೆರವಾದರೆ, 'ದಲಿತ ಸಾಹಿತ್ಯ'ವು ತಮ್ಮ ಸ್ವಂತ ಅನುಭವಗಳ ಮೂಲಕ ಸಮಾಜದಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಅವಮಾನ, ಶೋಷಣೆ, ಉಳ್ಳವರ ದೌರ್ಜನ್ಯಕ್ಕೆ ಒಳಗಾದವರಲ್ಲಿ ಮೂಡಿದ ಶೈಕ್ಷಣಿಕ ಎಚ್ಚರಿಕೆಯಾಗಿದೆ.

## ದಲಿತರು ಯಾರು?

ಪ್ರಾಚೀನ ಕಾಲದಿಂದಲೂ 'ಜಾತಿ' ವ್ಯವಸ್ಥೆ ಇದ್ದು, ಇಂದಿನ ಆಧುನಿಕ ಕಾಲದಲ್ಲಿ. ಈ ಪ್ರಭಾವ ಹೆಚ್ಚಾಗಿಯೇ ಇದೇ. ಒಂದು ಕಾಲದಲ್ಲಿ ನಾಲ್ಕು ವರ್ಣಗಳಿದ್ದು, ಇತ್ತೀಚಿನ ದಿನಗಳಲ್ಲಿ ಸುಮಾರು 4000 ಜಾತಿಗಳಾಗಿ ವಿಸ್ತಾರಗೊಂಡಿರುವುದು ಸೋಜಿಗದ ವಿಷಯವಾಗಿದೆ. ಹಿಂದೆ ಇದ್ದ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ವರ್ಣಗಳಿಗಿಂತ ಕೆಳಗಿನವರು 'ಪಂಚಮ' ವರ್ಣವೆಂದು, ಇದನ್ನು 'ಅಸ್ಪೃಶ್ಯ' ಜಾತಿ ಎಂದು ಕರೆಯಲಾಗಿದೆ. ಇಂದು ಈ ಜಾತಿಯವರು ಹೊಲೆಯರಾಗಿ, ಶಿಷ್ಟ ಭಾಷೆಯಲ್ಲಿ ದಲಿತರಾಗಿದ್ದಾರೆ.

ಈ ಅಸ್ಪೃಶ್ಯರನ್ನು ಡಾ. ಬಿ.ಆರ್. ಅಂಬೇಡ್ಕರ್‌ರವರು 'ಅವರ್ಣೀ'ಯರು ಎಂದಿದ್ದಾರೆ. ಕೆಲವಿಮರ್ಶಕರ ಪ್ರಕಾರ 'ದಲಿತ' ಎನ್ನುವುದು ಒಂದು ಜಾತಿಯಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಶೋಷಣೆಗೆ ಒಳಗಾದ ಜನರೆಲ್ಲರೂ ದಲಿತರು ಎಂದಿದ್ದಾರೆ. ಆದರೆ ಇವರುಗಳ ಪ್ರಕಾರ ಎಲ್ಲಾ ಜಾತಿಯಲ್ಲಿಯೂ ಶೋಷಣೆಗೆ ಒಳಗಾದವರನ್ನು 'ದಲಿತ', 'ಹೊಲೆಯ', 'ಅಸ್ಪೃಶ್ಯ' ಎಂದು ಕರೆಯಲಾಗದು. ಏಕೆಂದರೆ ಇತರ ಜಾತಿಯವರು ಈ ಹೇಳಿಕೆಯನ್ನು ಒಪ್ಪಿಕೊಳ್ಳಲು ಸಿದ್ಧರಾಗಿರುವುದಿಲ್ಲ. ತಮ್ಮ ಮೂಲ ಜಾತಿಯನ್ನು ಬಿಟ್ಟು ಹೀನ ಕುಲದ ಜಾತಿಗೆ ಹೋಲಿಸಿಕೊಳ್ಳಲು ಇಷ್ಟಪಡುವುದಿಲ್ಲ. ದಲಿತರು ಕೇವಲ ಶೋಷಣೆಗೆ ಒಳಗಾದವರಲ್ಲ, ಹುಟ್ಟಿನಿಂದಲೂ ಶತ-ಶತಮಾನಗಳಿಂದಲೂ ಅವಮಾನಕ್ಕೆ, ಹಿಂಸೆಗೆ, ದಮನಕ್ಕೆ ಒಳಗಾದವರಾಗಿದ್ದಾರೆ.

ಈ ಅರ್ಥದಲ್ಲಿ ಅಸ್ಪೃಶ್ಯರೆಲ್ಲರೂ, ಶೋಷಣೆಗೆ ಒಳಗಾಗಿರುತ್ತಾರೆ. ಆದರೆ ಶೋಷಣೆಗೆ ಒಳಗಾದವರೆಲ್ಲ ಅಸ್ಪೃಶ್ಯರು ಎಂದು ಹೇಳಲಾಗದು. 'ದಲಿತ' ಎಂದರೇನು? ಅಥವಾ 'ದಲಿತ' ಯಾರು? ಎಂಬುದನ್ನು ಸ್ಪಷ್ಟಪಡಿಸಲು ಅನೇಕರು ಶ್ರಮಿಸಿದ್ದಾರೆ. ಹೀಗೆ ಶ್ರಮಿಸಿದವರಲ್ಲಿ ದಲಿತ ಸಾಹಿತಿಗಳ ಜತೆಗೆ ದಲಿತೇತರ ಸಾಹಿತಿಗಳು ಆಸಕ್ತಿವಹಿಸಿರುವುದು ವಿಶೇಷವಾಗಿದೆ. ದಲಿತರು ಯಾರು ಎಂಬುದಕ್ಕೆ ದಲಿತ ಸಾಹಿತಿಗಳಲ್ಲೇ ಹುಟ್ಟಿರುವ ಅಭಿಪ್ರಾಯವೆಂದರೆ "ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ನಿರಂತರ ಶೋಷಣೆಗೊಳಗಾದವರೇ ದಲಿತರೆಂಬ ಭಾವನೆ" (ದಲಿತ ಚಳುವಳಿ ಮತ್ತು ಸಾಹಿತ್ಯ, ಮುನಿವೆಂಕಟಪ್ಪ ವಿ., 2009, ಪುಟ 23) ಯನ್ನು ದಲಿತ ಕವಿಯೊಬ್ಬರು ಹೊಂದಿದ್ದಾರೆ. ಇವರು ಸಮಾಜದಿಂದ, ಅಕ್ಷರ ಕಲಿಕೆಯಿಂದ ಹಾಗೂ ಹಣಕಾಸಿನಲ್ಲಿ ಹಿಂದೆ ಬಿದ್ದು, ಸತತವಾಗಿ ಇನ್ನೊಬ್ಬರಿಂದ ಶೋಷಣೆಗೆ ಒಳಗಾದವರು ದಲಿತರು ಎಂದು ಭಾವಿಸಿದ್ದಾರೆ. ಪ್ರತಿಯೊಂದು 'ಜಾತಿ'ಯಲ್ಲೂ ಈ ರೀತಿಯ ಶೋಷಣೆಯನ್ನು ಕಾಣುವುದರಿಂದ ಈ ಹೇಳಿಕೆ ದಲಿತರ ಸಂಪೂರ್ಣ ಚಿತ್ರಣವನ್ನು ಕಟ್ಟಿ ಕೊಡುವುದಿಲ್ಲ.

ಅರವಿಂದ ಮಾಲಗತ್ತಿಯವರು "ಶತಮಾನಗಳಿಂದ ಜನ ಸಮುದಾಯದಲ್ಲಿ ಆರ್ಥಿಕ ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕವಾಗಿ ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ, ಊರ ಹೊರಗೆ ವಾಸಿಸುವ ಕೀಳು ವೃತ್ತಿಗೆ ಅವಲಂಬಿತರಾಗಿ, ಹೆಸರು ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ ದಲಿತರೆನಿಸಿಕೊಳ್ಳುತ್ತಾರೆ"(ದಲಿತಜ್ಞ , ಅರ್ಜುನಗೊಳಸಂಗಿ (ಸಂ), 2000, ಪುಟ 2 ಮತ್ತು 3) ಎಂದು ಅಭಿಪ್ರಾಯ ಪಡುತ್ತಾರೆ. ಮನುಷ್ಯ ಕುಲದಿಂದದೂರ ಉಳಿದು, ಹೀನ ಕುಲ ಎಂಬ ಹಣೆ ಪಟ್ಟಿ ಹೊತ್ತು, ಉತ್ತಮ ಕುಲದವರು ಮಾಡದ ಕೆಲಸವನ್ನು ನಿರ್ವಹಿಸುವವರು ದಲಿತರು. ಇವರು ಎಲ್ಲಾ ಹಂತಗಳಿಂದಲೂ ಶೋಷಣೆ ಅನುಭವಿಸಿದವರು ಎಂಬ ನಿರ್ಣಯಕ್ಕೆ ಬರುತ್ತಾರೆ. ಇದು ದಲಿತರ ಸಂಪೂರ್ಣ ಚಿತ್ರಣವಾಗಿರುತ್ತದೆ.

ಎಲ್. ಹನುಮಂತಯ್ಯನವರು "ಆರ್ಥಿಕವಾಗಿ, ಸಾಮಾಜಿಕವಾಗಿ, ಶೋಷಿತರಾದ ಎಲ್ಲಾ ಜನಾಂಗವನ್ನು ಸೇರಿಸಿದರೂ, ಸಾಹಿತ್ಯಕವಾಗಿ ಅಸ್ಪೃಶ್ಯತೆಯನ್ನು ನಿವಾರಿಸಲು ಅಸ್ಪೃಶ್ಯರು ಮತ್ತು ಇವರಷ್ಟೇ ಶೋಷಣೆಗೆ ಒಳಗಾದ ಕೆಳವರ್ಗದ ಜನರು ದಲಿತರಾಗುತ್ತಾರೆ"(ದಲಿತ ಮಾರ್ಗ, ಅರವಿಂದ ಮಾಲಗತ್ತಿ (ಸಂ), 2002, ಪುಟ 06 )ಎಂದು ವ್ಯಾಖ್ಯಾನಿಸುತ್ತಾರೆ.

ಇಲ್ಲಿ ಎಲ್ಲಾ ಜಾತಿ ಜನರೂ ದಲಿತರೆಂದು ಅಭಿಪ್ರಾಯಪಟ್ಟಿದ್ದಾರೆ. ಇವರು 'ಅಸ್ಪೃಶ್ಯ' ಜಾತಿಯ ಬಗ್ಗೆ ಹೇಳಿರುವ ಹೇಳಿಕೆಯಲ್ಲಿ ಪ್ರತಿ ಜಾತಿಯ ಜನರ ವೇದನೆಯನ್ನು ವ್ಯಕ್ತಪಡಿಸಿದ್ದಾರೆ. ಈ ಹೇಳಿಕೆಯನ್ನು 'ದಲಿತ' ಸಮುದಾಯದವರು ಒಪ್ಪಿದರೂ 'ದಲಿತೇತರ' ಸಮುದಾಯಗಳು ಒಪ್ಪುವುದಿಲ್ಲ.ದಲಿತರು ಯಾರು? ಎಂಬುದನ್ನು ಕವಿಯೊಬ್ಬರು 'ನನ್ನ ಹತ್ತಿರದ ಬಂಧುಗಳು' ಎಂಬ ಕವನದಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ.

ಮುಟ್ಟಬಾರದ ಜನ
ಮುಟ್ಟಲಾಗದ ಜನ
ತಾವಾಗೆ ಮುಟ್ಟಿಸಿಕೊಳ್ಳದ ಮುಗ್ಧ ಜನ
ಮತ್ತೆ ಹುಟ್ಟದ ಜನ
ನನ್ನ ಹತ್ತಿರದ ಬಂಧುಗಳ.

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 62)

'ಅಸ್ಪೃಶ್ಯ' ಜನಾಂಗದವರ ಸ್ಥಿತಿಯನ್ನು ತಿಳಿಸುವ ಸಾಲುಗಳಿವು. ಇವರು ಸವರ್ಣೀಯರಿಂದ ಮುಟ್ಟಿಸಿಕೊಳ್ಳದೇ, ಇವರು ಅವರನ್ನು ಮುಟ್ಟಲಾಗದೇ, ದೂರ ಉಳಿದೇ ಜೀವಿಸುವವರಾಗಿದ್ದು, ಇಡೀ ಭೂಮಿಯಲ್ಲಿ ಮತ್ತೆ ಹುಟ್ಟಿದ ಜನರಾಗಿದ್ದಾರೆ ಎಂಬುದು ಕವಿಯ ಭಾವನೆ. ಉಳ್ಳವರ ಜತೆ ಉತ್ತಮ ಒಡನಾಟವಿಲ್ಲದೆ, ಸರ್ವ ರೀತಿಯಿಂದಲೂ ತುಳಿತಕೊಳ್ಳಗಾದವರೇ 'ಅಸ್ಪೃಶ್ಯ'ರು ಎಂಬುದನ್ನು ಕವಿ ಕಾವ್ಯವಾಗಿಸಿದ್ದಾರೆ.'ದಲಿತ'ರು ಮೇಲ್ವರ್ಗದವರ ಮನೆಯಲ್ಲಿ ಕತ್ತೆಗಳ ರೀತಿ ದುಡಿದು, ದಣಿದರೂ ಸಹ ತುತ್ತು ಅನ್ನಕ್ಕಾಗಿ ಅಲೆದಾಡಬೇಕಾದ ಸ್ಥಿತಿ ಎದುರಾಗಿತ್ತು. ಉಳ್ಳವರ ಮನೆಯಲ್ಲಿ ಜೀತಕ್ಕೆ ಇದ್ದರೂ, ಹಸಿವಿನ ಒಡೆಯರಾಗಿ, ಸಾಯಲೂ ಆಗದೇ, ಬದುಕಲೂ ಆಗದೇ, ಅತಂತ್ರ ಸ್ಥಿತಿಯಲ್ಲಿದ್ದ ದಲಿತರ ಸ್ಥಿತಿಯನ್ನು ಕಂಡ ಕವಿ ತಮ್ಮ 'ಬರ' ಕವನದಲ್ಲಿ ಹೀಗೆ ಗ್ರಹಿಸಿದ್ದಾರೆ.

ತುತ್ತು ನೀಡೇ ತಾಯಿ ಇಪ್ಪತ್ತು ದಿನವಾಯ್ತು
ಒಪ್ಪತ್ತಿನೂಟಕ್ಕೆ ಕಷ್ಟವನು ಕೊಟ್ಟೇನು
ಹಸಿವಿನಂಗಳದಲ್ಲೇ ಜೀವ ಬಿಟ್ಟೇನು

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2006, ಪುಟ 110)

ಇದು 'ಹಸಿವಿನ' ಆಕ್ರಂದನ ತೋರುವ ಚಿತ್ರಣ. ಒಂದು ಹೊತ್ತಿನ ಕೂಳಿಗೆ ದೇವರನ್ನು ಬೇಡುವಂತೆ ಉಳ್ಳವರನ್ನು ಬೇಡಿ, ಕಾಲಿಗೆ ಬೀಳಬೇಕಾದ ಸಂದರ್ಭ ಎದುರಾಗಿದೆ.

ದಲಿತರು ಒಂದ್ಹೊತ್ತಿನ ಊಟಕ್ಕೆ ತಮ್ಮ ಸರ್ವಸ್ವವನ್ನು ಕೊಡಲು ತಯಾರಿದ್ದರೂ ಕೂಡ ಸಫಲವಾಗಲಿಲ್ಲ. ಅಂದರೆ ಹಸಿವಿನ ಅಂಗಳದಲ್ಲೇ ತಮ್ಮ ಪ್ರಾಣ ಬಿಡಬೇಕಾದ ಸ್ಥಿತಿ ದಲಿತರದ್ದು ಎಂದು ಕವಿ ಮಾರ್ಮಿಕವಾಗಿ ತಿಳಿಸಿದ್ದಾರೆ. ಈ ರೀತಿ ದುಡಿದು ಅನ್ನವಿಲ್ಲದೆ ಹಸಿದ ಜನರೇ 'ದಲಿತರು' ಎನ್ನಿಸಿಕೊಳ್ಳುತ್ತಾರೆ.

ದಲಿತರನ್ನು ಊರ ಆಚೆ ಇಟ್ಟಿದ್ದಕ್ಕೆ, ಇದನ್ನು ಬಹಿಷ್ಕರಿಸುವ ಸಲುವಾಗಿ ಊರಾಚೆ ಇರುವ ಬದಲು ಊರೊಳಗೆ ಬಂದರು. ಆದರೆ ಸವರ್ಣೀಯರು ಇದರಿಂದ ತಮ್ಮ ನೆಲ ಮಲಿನವಾಯ್ತೆಂದು ಅಪವಾದ ಹೊರಿಸಿದರು. ಕುಡಿಯಲು ಕೆರೆ ನೀರನ್ನು ಮುಟ್ಟಿದಕ್ಕೆ ಕಳ್ಳ ಎಂಬ ಪಟ್ಟವನ್ನು ಹೋರಿಸಿ ಶಿಕ್ಷೆ ನೀಡಿದರು. ಇದನ್ನು ಕವಿ ತಮ್ಮ 'ವಿದ್ರೋಹ' ಎಂಬ ಪದ್ಯದಲ್ಲಿ ಹೀಗೆ ಚಿತ್ರಿಸುತ್ತಾರೆ.

ಊರಾಚೆ ಇದ್ದವರು
ಇಟ್ಟಂತಿರದೆ ಎದ್ದವರು
ಊರೊಳಗೆ ಬಂದವರು
ನೆಲಮಲಿನ ಮಾಡಿದವರು
ಕೆರೆ ನೀರನು ಕದ್ದವರು
ನಿಜ ಹೇಳದೆ ಇದ್ದವರು
ಜಲ ಮಲಿನ ಮಾಡಿದವರು

(ಮ.ನ.ಜವರಯ್ಯ, ವಿದ್ರೋಹ, 2002, ಪುಟ 312)

ಮೇಲಿನ ಪದ್ಯವು 'ಅಸ್ಪೃಶ್ಯತೆ'ಯನ್ನು ಅನಾವರಣಗೊಳಿಸುತ್ತದೆ.ದಲಿತರ ಮೇಲಾದ ದೌರ್ಜನ್ಯದ ಕಾರಣವನ್ನು, ದೌರ್ಜನ್ಯದ ಪರಿಣಾಮವನ್ನು ಅತ್ಯಂತ ಭೀಕರವಾಗಿ ಇಲ್ಲಿನ ಸಾಲುಗಳು ಚಿತ್ರಿಸುತ್ತವೆ. ಹಾಗೂ ದಲಿತರು ಊರೊಳಗೆ, ಕೆರೆ ನೀರನ್ನು ಮುಟ್ಟಿದರೂ ಸವರ್ಣೀಯರಿಗೆ 'ಅಪರಾಧ'ವಾಗಿ ಕಂಡಿದ್ದು, ಇದಕ್ಕೆ ದಂಡಕಟ್ಟ ಬೇಕೆಂದು, ದಲಿತರನ್ನು ಜೀತಕ್ಕೆ ಇಟ್ಟುಕೊಂಡಿರುವ ಸ್ಥಿತಿಯನ್ನು ಕವಿಕಾವ್ಯವಾಗಿಸಿದ್ದಾರೆ. 'ದಲಿತ' ಎಂಬುದೊಂದು ಸಮುದಾಯ. ಉಳ್ಳವರ ಮನೆಯಲ್ಲಿ ಜೀತ ಮಾಡಿಕೊಂಡಿರಬೇಕಾದ ಅನಿವಾರ್ಯತೆ ದಲಿತರಿಗೆ ಎದುರಾಗಿತ್ತು. ಇವರ ಸ್ಥಿತಿಯು 'ಜೀತದ ಗೀತ' ಎಂಬ ಕವನದಲ್ಲಿ ಹೀಗೆ ಅಭಿವ್ಯಕ್ತಿಗೊಂಡಿದೆ.

ದಣಿಯ ಹಟ್ಯಾಗ ದುಡಿದುಡಿದು ನಾವು
ಬೇಲಿಯಾಗಿ ನಿಂತವರು
ಏಣಿಯ ದರ್ಪದಲ್ಲಿ ಬಂದೆವು ನಾವು
ಅವರ ಗರ್ಜನೆಯಲಿ ಮೂಕರು

(ಮುನಿವೆಂಕಟಪ್ಪ ವಿ., ಸ್ವಾಭಿಮಾನದ ಬೀಡಿಗೆ, 1996, ಪುಟ 43)

ದಲಿತರು ಮೇಲ್ವರ್ಗದವರ ಮನೆಯಲ್ಲಿ ಜೀತಕ್ಕೆ ಇದ್ದು, ಅವರ ಮನೆಗೆ ದುಡಿದು, ದುಡಿದು, ಬೇಲಿ ಕಾಡನ್ನು ರಕ್ಷಣೆ ಮಾಡುವಂತೆ ಮೇಲ್ವರ್ಗದವರ ಮನೆಯನ್ನು ಕಾಯಬೇಕಾಗಿತ್ತು. ಎಷ್ಟೇ ದುಡಿದರೂ ದಣಿ ತನ್ನ ದರ್ಪವನ್ನು 'ದಲಿತ'ರ ಮೇಲೆ ತೋರುತ್ತಿದ್ದರು. ಏಕೆಂದರೆ ಸಣ್ಣ ತಪ್ಪು ಮಾಡಿದರೆ ಹಾಗೂ ಏನೇ ಆದರೂ ಮೂಕರಂತೆ ನಿಂತು, ಸತ್ಯ-ಸುಳ್ಳಿನ ಅರಿವನ್ನು ಉಳ್ಳವರಿಗೆ ತಿಳಿಸುವ ಧೈರ್ಯವನ್ನು ದಲಿತರು ಮಾಡುತ್ತಿರಲಿಲ್ಲ.

ಮೇಲಿನ ಅಭಿಪ್ರಾಯಗಳಂತೆ ಅಥವಾ ವ್ಯಾಖ್ಯಾನಗಳಂತೆ ದಲಿತ ಜನಾಂಗದವರು ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಹಿಂದೆ ಇದ್ದುದರ ಜತೆಗೆ ಹುಟ್ಟಿನಿಂದಲೇ ಅಸ್ಪೃಶ್ಯರಾಗಿದ್ದು, ಊರಿನಿಂದ ಬಹಿಷ್ಕೃತರಾಗಿ, ಸಾಲದ ಹೆಸರಿನಲ್ಲಿ ಜೀತಕ್ಕೆ ಸಿಲುಕಿ, ಉಳ್ಳವರಿಂದ ಅವಮಾನಿತರಾಗಿ, ತನ್ನ ತನವನ್ನೇ ಉಳ್ಳವರಿಗೆ ಧಾರೆ ಎರೆದು, ಇತರಜಾತಿಯವರಿಂದ ದೂರ ಉಳಿದು, ಸಮಾಜದ ಅನಿಷ್ಟ ಕೃತ್ಯಕ್ಕೆಲ್ಲಾ ತಾವೇ ಕಾರಣರೆಂಬ ಮನೋಭಾವವನ್ನು ಇತರರಲ್ಲಿ ಮೂಡಿಸಿದ್ದಾರೆ. ಇಂತಹವರನ್ನು 'ದಲಿತ' ಎಂದು ಕರೆಯಲಾಗಿದೆ.

ಇನ್ನು ದಲಿತೇತರರ ದಲಿತ ಸಂವೇದನೆಯ ಹೇಳಿಕೆಗಳನ್ನು ನೋಡುವುದಾದರೆ, "ದಲಿತರು ಕೇವಲ ಶೋಷಿತರಷ್ಟೇ ಅಲ್ಲ, ಶೋಷಣೆಯಜೊತೆಗೆ ಅಮಾನವೀಯವಾದ ಹಿಂಸೆ, ಕ್ರೌರ್ಯಗಳಿಗೆ ಒಳಗಾದವರು. ಒಂದು ವ್ಯಕ್ತಿತ್ವವೇ ಇಲ್ಲದವರಂತೆ ನಡೆಯಿಸಿಕೊಳ್ಳಲ್ಪಟ್ಟವರು"(ದಲಿತ ಮಾರ್ಗ,ಅರವಿಂದ ಮಾಲಗತ್ತಿ (ಸಂ), 2002, ಪುಟ 06) ಎಂದು ಜಿ. ಎಸ್. ಶಿವರುದ್ರಪ್ಪನವರು ತಮ್ಮ ಅನಿಸಿಕೆಯನ್ನು ತಿಳಿಸುತ್ತಾರೆ.

ಈ ಹೇಳಿಕೆಯನ್ನು ಒಪ್ಪಿದರೂ ಇಲ್ಲಿ 'ಅಸ್ಪೃಶ್ಯ' ಜಾತಿಯವರು ಅನುಭವಿಸಿದ ಶೋಷಣೆಯ ಅನಾನುಭವ ಎದ್ದುಕಾಣುತ್ತದೆ. ಒಬ್ಬ ದಲಿತ ಲೇಖಕ ಅಥವಾ ಕವಿ ತನ್ನ ಸ್ವಂತ ಅನುಭವವನ್ನು ಚಿತ್ರಿಸುತ್ತಾನೆ. ಅದೇ ಒಬ್ಬ ದಲಿತೇತರ ಲೇಖಕ ಕಂಡು, ಕೇಳಿದನ್ನು ಮಾತ್ರ ಚಿತ್ರಿಸುವುದರಿಂದ ಇದೊಂದು 'ದಲಿತ ಸಂವೇದನೆ' ಹೊಂದಿರುವ ಹೇಳಿಕೆಯಾಗಿದೆ.

ಡಾ. ಅಂಬೇಡ್ಕರ್‌ರವರ ಪ್ರಕಾರ ದಲಿತ ಯಾರು? ಎನ್ನುವುದಕ್ಕೆ ಈ ವ್ಯಾಖ್ಯೆ ಸ್ಪಷ್ಟಪಡಿಸುತ್ತದೆ. "ಯಾರನ್ನು ಹಿಂದೆ ಮನುವು ಚಾತುವರ್ಣದಲ್ಲಿ ಸೇರಿದವರು ಎಂದು ಕರೆದನೋ ಅವರೇ ಹಿಂದುಗಳು ಯಾರನ್ನು ಮನವು ಬಾಹ್ಯರು ಅಥವಾ ಚಾತುರ್ವರ್ಣಕ್ಕೆ ಹೊರತಾದವರು ಎಂದು ಕರೆದನೊ ಅವರೇ ಇಂದಿನ ಅಸ್ಪಶ್ಯರು. ಈ ಅಸ್ಪೃಶ್ಯರೇ ದಲಿತರು ಎಂದು ಕರೆಯಲ್ಪಡುತ್ತಾರೆ".(ಮನುಸ್ಮೃತಿ ಹಾಗೂ ದಲಿತರು,ನಾರಾಯಣ ಸ್ವಾಮಿ ಜ.ಹೊ., 2013, ಪುಟ 11) ಹಿಂದೆ ಚಾಲ್ತಿಯಲ್ಲಿದ್ದ ನಾಲ್ಕು ವರ್ಣಗಳಲ್ಲಿ ಯಾವ ವರ್ಣ ಈ ಚಾತುವರ್ಣಕ್ಕೆ ಸೇರುತಿರಲಿಲ್ಲವೋ ಅವೆಲ್ಲವೂ 'ಅಸ್ಪೃಶ್ಯ'ರೆಂದು ಹೇಳಿದ್ದಾರೆ. ಶೂದ್ರರ ಕೆಳಕ್ಕೆ ಇದ್ದವರು 'ಅಸ್ಪೃಶ್ಯ'ರು ಅಂದರೆ, ಈ ಹೇಳಿಕೆ ದಲಿತರಿಗೆ ಒಪ್ಪುವಂಥದ್ದು.

ಡಾ. ಕೆ.ಎಸ್.ಭಗವಾನ್‌ರವರು "ದಲಿತರೆಂದರೆ ಹಿಂಸೆಗೆ ಒಳಗಾದವರು ಎಂದು ಅರ್ಥ. ದೈಹಿಕ, ಮಾನಸಿಕ ಹೊಡೆತಕ್ಕೆ ಗುರಿಯಾದ ಆರ್ಥಿಕ, ಸಾಮಾಜಿಕ, ಶೋಷಣೆಗೆ ಬಲಿಯಾದ, ಸಾಂಸ್ಕೃತಿಕವಾಗಿ ದಿವಾಳಿಯಾದ ಜನರೇ ದಲಿತರು, ದಲಿತರೆಂದರೆ ಕೇವಲ ಪರಿಶಿಷ್ಟ ಜಾತಿ ಬುಡಕಟ್ಟುಗಳಲ್ಲ. ವ್ಯವಸ್ಥೆಯ ವೇದನೆಯನ್ನು ತಾಳಲಾರದೆ ಕಣ್ಣೀರಿಗೆ ಬದಲು ರಕ್ತಸುರಿಸುವ ದುರ್ಬಲ ವರ್ಗವೇ ದಲಿತರು"(ಮನುಸ್ಮೃತಿ ಹಾಗೂ ದಲಿತರು,ನಾರಾಯಣ ಸ್ವಾಮಿ ಜ.ಹೊ., 2013, ಪುಟ 09) ಎಂದು ಅಭಿಪ್ರಾಯಪಡುತ್ತಾರೆ. ಇದು ದಲಿತರ ಸ್ಪಷ್ಟ ಚಿತ್ರಣ ಕೊಡುವ ಹೇಳಿಕೆ. ಇಲ್ಲಿ ದಲಿತರ ಶೋಷಣೆಯ ವಿವಿಧ ಮಜಲುಗಳನ್ನು ಕಾಣಬಹುದು. ದಲಿತರಿರುವುದೇ ಹಿಂಸೆ ಅನುಭವಿಸಲು ಹಾಗೂ ಹಿಂಸೆ ಇರುವುದೇ ದಲಿತರಿಗಾಗಿ ಎಂಬುದು ಇಲ್ಲಿನ ವ್ಯಾಖ್ಯೆ. ವ್ಯವಸ್ಥೆ ನೀಡಿದ ನೋವಿಗೆ ಪ್ರತಿಕ್ರಿಯಿಸದೆ ದುರ್ಬಲರಾಗಿದ್ದವರೇ ನಿಜವಾದ ದಲಿತರಾಗಿದ್ದಾರೆ.ಮೇಲಿನ ಹೇಳಿಕೆ, ಪ್ರತಿ ಹೇಳಿಕೆಗಳ ಆಧಾರದಿಂದ 'ದಲಿತ' ಎನ್ನುವುದು ಒಂದು ಜಾತಿಯಲ್ಲ, ಒಂದು ಸಮುದಾಯ.

ಈ ಸಮುದಾಯದಲ್ಲಿ 'ಸ್ಪೃಶ್ಯ'ರಿಂದ ದೂರ ಉಳಿದವರು ಹಾಗೂ 'ಅಸ್ಪೃಶ್ಯ'ರೆಂಬ ಪಟ್ಟ ತೊಟ್ಟವರಾಗಿರುತ್ತಾರೆ. 'ಅಸ್ಪೃಶ್ಯ'ರು 'ಸ್ಪೃಶ್ಯ'ರಿಂದ ಮುಟ್ಟಸಿಕೊಳ್ಳದೆ ಒಂದು ನಿರ್ದಿಷ್ಟ ಪ್ರದೇಶದಲ್ಲಿ, ಅಂದರೆ ಊರ ಹೊರಭಾಗದಲ್ಲಿ ವಾಸಮಾಡುವ ಮಂದಿ. ಹೊಲೆಯ, ಮಾದಿಗ ಎಂಬಿತ್ಯಾದಿ ಜಾತಿಯವರು ಈ ಸಮುದಾಯಕ್ಕೆ ಸೇರಿದವರು. ಇವರೆಲ್ಲರನ್ನು 'ಅಸ್ಪೃಶ್ಯ'ರೆಂದು, ಶೋಷಿತ ಸಮುದಾಯದವರೆಂದು

ಮೇಲಿನ ವ್ಯಾಖ್ಯೆಗಳು ಹಾಗೂ ಕವನಗಳ ಆಧಾರದ ಮೂಲಕ ಒಂದು ನಿರ್ಧಾರಕ್ಕೆ ಬಂದಿರುತ್ತೇನೆ.

ಯಾವುದು ದಲಿತ ಕಾವ್ಯ : ಸಾಮಾನ್ಯವಾಗಿ ಕಾವ್ಯಗಳಲ್ಲಿ ಮಾನವನ ಜೀವನಕ್ಕೆ ಹೊಂದಾಣಿಕೆಯಾಗುವಂತಹ, ಬದುಕಿನ ಅಂಶಗಳನ್ನು ಹೊಂದಿರುವುದರ ಜತೆಗೆ, ಮನುಷ್ಯನ ಕನಸು ಹಾಗೂ ವಾಸ್ತವ ಜೀವನದ ಪರಿಚಯ ಇರಬೇಕೆಂದು ಆಶಿಸುತ್ತೇವೆ. ಕವಿ ಯಾವಾಗ ಓದುಗನ ಮನಸ್ಸನ್ನು ಅವಲಂಬಿಸಿ ಜೀವನ ಸತ್ಯವನ್ನು ವಾಸ್ತವದ ವಸ್ತುವನ್ನು, ತನ್ನ ಕವಿತೆಯಲ್ಲಿ ತುಂಬುವನೋ ಅದೇ ನಿಜವಾದ ಕಾವ್ಯವಾಗುತ್ತದೆ. ಇಂತಹ ಕಾವ್ಯಗಳು ಮನುಷ್ಯನ ಭಾವನೆಗಳನ್ನು ಹೊರಹಾಕುವ ಶಕ್ತಿಯನ್ನು ಹೊಂದಿರುತ್ತವೆ. ಕವಿ ತನ್ನ ಮನಸ್ಸಿನ ಸ್ಥಿತಿಯನ್ನು ತನಗೆ ಸಮಾಧಾನ ಎನಿಸಿದ್ದನ್ನು ಕಾವ್ಯ ರೂಪಕ್ಕೆ ತರುವುದರಿಂದಲೇ ಇದು ವ್ಯಕ್ತಿ ವಿಶಿಷ್ಟವೆನ್ನಿಸಿಕೊಳ್ಳುತ್ತದೆ.

ನವೋದಯ ಸಾಹಿತ್ಯದ ಕಾವ್ಯಗಳಲ್ಲಿ ಕವಿಗಳು ಸುತ್ತಲ ಜಗತ್ತಿನ ಚೆಲುವಿನ ಮುಖಗಳನ್ನು, ಜಗತ್ತಿನ ಸೊಬಗಿನ ವೈವಿಧ್ಯಗಳನ್ನು ಕಂಡು ಬೆರಗಾಗಿ ಕಾವ್ಯ ರಚಿಸಿದರು. ಭಾವಗೀತೆಗಳಿಗೆ ಹೆಚ್ಚು ಒಲವನ್ನು, ಚಾರಿತ್ರಿಕ ಒಲವನ್ನು, ವರ್ತಮಾನವನ್ನು ಭೂತಕಾಲದಲ್ಲಿಟ್ಟು ನೋಡುವ ಒಲವನ್ನು ತೋರಿ, ಸಮಾಜ, ರಾಜಕೀಯ, ದೇಶಾಭಿಮಾನ, ನಿಸರ್ಗವನ್ನು ಕುರಿತು ಬರೆದರು. ಉದಾಹರಣೆಗೆ ಕೆ.ಎಸ್.ನರಸಿಂಹಸ್ವಾಮಿರವರ'ತೆರೆದ ಬಾಗಿಲು' ಕವನದ ಸಾಲುಗಳು ಹೀಗಿವೆ,

ಊರ ಬೀದಿಗಳನ್ನು ಚಂದಮಾಡಿದ್ದಾರೆ,
ದಾರಿಯೆರಡೂ ಕಡೆಗೆ ಸಸಿಯ ನಟ್ಟಿದ್ದಾರೆ,
ವೃತ್ತ ಚೌಕಗಳಲ್ಲಿ ಹೂವ ಬೆಳೆಸಿದ್ದಾರೆ,
ಹಳೆಯ ಬಚ್ಚಲುಗಳಿಗೆ ಹಲ್ಲು ಕಟ್ಟಿದ್ದಾರೆ;
ಗುರುತು ಸಿಕ್ಕದ ಹಾಗೆ ಮಾಡಿಬಿಟ್ಟಿದ್ದಾರೆ
ನೆಲದ ಚರ್ಮವ ಕಿತ್ತು ನೀರ ನಳಿಗೆಯ ಹೂಳಿ
ಕೆಂಪು ಬಟ್ಟೆಯ ಕಟ್ಟಿ ಹೊರಟು ಹೋಗಿದ್ದಾರೆ.
ಬೀದಿ ತಪ್ಪುವುದಿಲ್ಲ ಯಾರಿಗೂ ಸುಲಭ!–
ತಪ್ಪು ಬೀದಿಗೆ, ತಪ್ಪು ಮನೆಗೆ ಬಂದರೇನೋ?

(ಅಕ್ಷರಹೊಸಕಾವ್ಯ, ಲಂಕೇಶ್ ಪಿ.(ಸಂ.), 2011, ಪುಟ 15)

ಇದು ಊರ ಬೀದಿಯ ವರ್ಣನೆ ಕುರಿತದ್ದು. ಒಂದು ಬೀದಿಯನ್ನು ಕಂಡು, ತಮ್ಮ ಭಾವನೆಯನ್ನು ಈ ಸಾಲುಗಳ ಮೂಲಕ ವರ್ಣಿಸಿದ್ದಾರೆ. ಒಂದು ಮನೆಯ ವಿಳಾಸವನ್ನು ಪತ್ತೆ ಮಾಡುವಾಗ, ಮನೆಯ ದಾರಿಯನ್ನು ಸಲೀಸಾಗಿ ಪತ್ತೆ ಹಚ್ಚುವ ಸಾಲುಗಳಂತಿವೆ. ಈ ಕಾಲದ ಕವಿಗಳಿಗೆ ಒಂದು ವಸ್ತುವನ್ನು ನೋಡಿ, ತಮಗೆ ಅನ್ನಿಸಿದ್ದನ್ನು ಹೇಳುವ ಕಾರ್ಯದಲ್ಲಿ ತೊಡಗಿದ್ದರು ಎಂಬುದು ಕಂಡು ಬಂದಿದೆ. ಇದು ಬಾಹ್ಯ ಸೌಂದರ್ಯಕ್ಕೆ ಮಾತ್ರ ಸೀಮಿತವಾಗಿದೆ. ಇಲ್ಲಿ ಒಂದು ಜಾತಿಗೆ ಸಂಬಂಧ ಪಡುವ ಸಾಲುಗಳಿಲ್ಲ. ಪುರಾಣದ ವ್ಯಕ್ತಿಗಳೊಂದಿಗೆ ಸಮೀಕರಿಸಿಕೊಂಡು ಅಂದಿನ–ಇಂದಿನ ಘಟನೆಗಳಿಗೆ ತಳುಕು ಹಾಕಿ ನೋಡುವ ಸಾಹಸ ಪ್ರಿಯತೆಯನ್ನು ಪ್ರಗತಿಶೀಲ ಕಾಲದವರಾದಗೋಪಾಲ ಕೃಷ್ಣ ಅಡಿಗರ'ನನ್ನ ಅವತಾರ' ಕವನದಲ್ಲಿ ಕಾಣಬಹುದು.

ರಾಮನ ಬಳಿ ಇದ್ದೆ ನಾನು: ಕಂಡೆ ಕೋದಂಡದೋರ್ದಂಡ ಬಲ
ನನ್ನ ಕಣ್ಣ ಮುಂದೆಯೇ ಮೊಳೆತು ಬೆಳೆದ ರೀತಿಯ.
ನನ್ನ ಹಾಗೆ ಅವನು ಕೂಡ ಉಣ್ಣುತ್ತಿದ್ದ, ತಿನ್ನುತ್ತಿದ್ದ,
ಚಂದ್ರನನ್ನು ತಾ ಎಂದು ತಾರುಮಾರು ತೊದಲುತ್ತಿದ್ದ:
ಹೀಗೆ ಇವರು ದೇವತ್ವದ ತರಿಸಲೀಟಿ ತುದಿಯನೇರಿ ಅವನ ಮನ
ಮುಗಿಲ ಚುಚ್ಚಿ ಮುಂದುವರಿದ ಆ ಮಹಾ ಪ್ರತೀತಿಯ
ಕಣ್ಣಾರೆ ಕಂಡೆನಯ್ಯ; ಹೊಗಳಲೆನಲು ಆಡಲಿಲ್ಲ ಈ ನನ್ನ ನಾಲಿಗೆ.
ಉಳಿದೆ ನಾನು ಆಗಲೂ ಈಗ ಇಲ್ಲಿ ಕೊಲೆವೊಲು

(ಅಕ್ಷರಹೊಸಕಾವ್ಯ, ಲಂಕೇಶ್ ಪಿ.(ಸಂ.), 2011, ಪುಟ 17)

ಇಲ್ಲಿ ರಾಮನೊಂದಿಗೆ ಕವಿ ಸಮೀಕರಿಸಿಕೊಂಡಿದ್ದಾರೆ. ಪುರಾಣಕ್ಕೆ ಆಧುನಿಕತೆಯ 'ಸ್ಪರ್ಶ' ನೀಡುವ ಪ್ರಯತ್ನದಲ್ಲೇ ಕಾವ್ಯ ಮುಗಿಯುತ್ತದೆ. ಇಲ್ಲಿ ಒಂದು ಜನಾಂಗಕ್ಕೆ ಸಂಬಂಧಿಸಿದಂತೆ ಅಥವಾ ದಲಿತ ಜನಾಂಗಕ್ಕೆ ಸಂಬಂಧಿಸಿದಂತೆ ಯಾವ ಪ್ರಯತ್ನವೂ ನಡೆದಿಲ್ಲ. ಆದ್ದರಿಂದ 'ದಲಿತ ಕಾವ್ಯ'ದ ಸಾಲಿಗೆ ಇದು ನಿಲ್ಲುವುದಿಲ್ಲ.

ನವ್ಯ ಕವಿಗಳು ತನ್ನ ಸುತ್ತಲ ಜಗತ್ತಿನೊಡನೆ ಬಾಂಧವ್ಯವನ್ನೆಲ್ಲ ಕಳಚಿ ಕೊಂಡು, ಏಕಾಂಗಿತನದ ಬದುಕಿನ ದುರ್ಬಲತೆ, ಅಸಹಾಯಕತೆ, ಸಿನಿಕತನ, ವ್ಯಕ್ತಿನೆಲೆಯ ನಡುವಳಿಗಳನ್ನು ಕಾವ್ಯವಾಗಿಸಿದರು.

ಇದರ ಜತೆಗೆ ಭೂತ, ವರ್ತಮಾನ ಭವಿಷ್ಯತ್‌ಗಳ ಸಂಬಂಧ, ಬಾಳಿನ ಅರ್ಥ, ಸಾವಿನ ನೆರಳು ಕೂಡ ನವ್ಯ ಕಾವ್ಯದ ವಸ್ತುವಾಯಿತು ಎಂಬುವುದಕ್ಕೆ ಗೋಪಾಲ ಕೃಷ್ಣ ಅಡಿಗರ 'ಇವಳು' ಪದ್ಯ ಸಾಕ್ಷಿಯಾಗಿದೆ.

ಹೊರಗೆ ಚಿಮ್ಮುತ್ತಿರುವ ಮಾಂಸ ಖಂಡಗಳ
ಬ್ಲೌಸಿನಲಿ ಬಿಗಿದಿಟ್ಟು
ಕಣ್ಣ ಕುಕ್ಕುವ ಬಣ್ಣದ ಸೆರಗ
ಹಾಯಿ ಬಿಚ್ಚಿ
ಹಿತವಾದ ಮಾರುತಕ್ಕನುಗುಣವಾಗಿ
ತೇಲಿ, ತೇಲಿ ಬರುವಳು ಇವಳು
ಹಗುರಾಗಿ

(ಅಕ್ಷರಹೊಸಕಾವ್ಯ, ಲಂಕೇಶ್ ಪಿ.(ಸಂ.), 2011, ಪುಟ 278)

ಇದು ಒಂದು ಹೆಣ್ಣಿನ ದೇಹದ ಬಾಹ್ಯ ವರ್ಣನೆಯಿಂದ ಕೂಡಿದೆ. ಕಾಮಾಸಕ್ತನ ಕಣ್ಣಿಗೆ ಹೆಣ್ಣು ಕಾಣುವ ಬಗೆಯನ್ನು ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ದೇಹದ ಅಂಗಾಂಗಗಳನ್ನು ವರ್ಣಿಸುವ ಸಾಲುಗಳನ್ನು ಇಲ್ಲಿ ಕಾಣಬಹುದು.ಮೇಲಿನ ಮೂರು ಕಾಲ ಘಟ್ಟದ ಸಾಹಿತ್ಯದಲ್ಲಿ 'ದಲಿತ ಪ್ರಜ್ಞೆ', 'ದಲಿತ ಅನುಭವ', 'ಚಳುವಳಿ'ಗಳು, ದಲಿತ ಜನರ ಶೋಷಣೆಯ ಪ್ರತಿಧ್ವನಿಗಳು ಕಾಣಬರುವುದಿಲ್ಲ.

ಆದರೆ ದಲಿತಕಾವ್ಯವು ಸ್ವಂತ ಅನುಭವ, ಅಭಿವ್ಯಕ್ತಿ ವೈಶಿಷ್ಟ್ಯಗಳಿಂದ ಕೂಡಿದ್ದು, ಪ್ರತಿಭಟನೆಯ ವಿವಿಧ ಹಂತಗಳಲ್ಲಿ ಬೆಳೆದು ಬಂದಿರುವುದರಿಂದ "ದಲಿತ ಕಾವ್ಯ ಬರಿಯ ಕಾವ್ಯವಲ್ಲ, ಚಳುವಳಿಯ ಕಾವ್ಯ, ಕಾವ್ಯದ ಅನನ್ಯತೆಯೊಂದಿಗೆ ಪ್ರಧಾನವಾಗುವುದಿಲ್ಲ. ಚಳುವಳಿಯ ಸಾಧ್ಯತೆಗಳು ಮುಖ್ಯವಾಗುತ್ತದೆ"ಬಸವರಾಜ ಸಬರದರವರು ಹೇಳುತ್ತಾರೆ.(ಕನ್ನಡ ದಲಿತ ಸಾಹಿತ್ಯ, ಅರ್ಜುನಗೊಳಸಂಗಿ (ಸಂ.), 2000, ಪುಟ 40) ಇಲ್ಲಿ ದಲಿತ ಕಾವ್ಯದ ಒಳಗುಟ್ಟನ್ನು ಲೇಖಕರು ಗುರುತ್ತಿಸಿದ್ದಾರೆ. ದಲಿತ ಕಾವ್ಯಕ್ಕೆ ಚಳುವಳಿಯೇ ಪ್ರಧಾನ ಎಂಬ ಅಂಶ ಕಂಡು ಬರುತ್ತದೆ.ದಲಿತ ಕವಿಗಳು ಪ್ರತಿಭಟನೆಯ ಹಿನ್ನೆಲೆಯಲ್ಲಿ ಬಂದು ಪ್ರಬುದ್ಧ ಕಾವ್ಯಗಳನ್ನು ರಚಿಸಿರುವುದು ಸತ್ಯ ಸಂಗಾತಿಯಾಗಿದೆ.

ಮೂಡ್ನಾಕೂಡು ಚಿನ್ನಸ್ವಾಮಿಯವರು "ಕಾಲದಂತೆ ಕಾವ್ಯವೂ ನಿಗೂಢ ಅನಂತವನ್ನು ಅಪಾರವನ್ನು ತನ್ನೆಲ್ಲ ವೈವಿದ್ಯಗಳೊಂದಿಗೆ ಅಡಗಿಸಿಟ್ಟುಕೊಳ್ಳಬಲ್ಲ ಕಾವ್ಯವನ್ನು, ಒಳಹೊಕ್ಕು ನೋಡುವುದೇ ಒಂದು

ಚೇತೋಹರಿ ಅನುಭವ ಇನ್ನು ಅದರ ಸೃಷ್ಟಿಕಾಯ, ವಿಸ್ಮಯಕಾರಿಯಾದದ್ದು"(ಬಯಲ ಬೆಳಕು, ಅರ್ಜುನಗೊಳಸಂಗಿ (ಸಂ.), 2007, ಪುಟ 23) ಎಂದು ತಮ್ಮಗಾದ ಕಾವ್ಯ ಲೋಕದ ಅನುಭವವನ್ನು ವಿವರಿಸಿದ್ದಾರೆ. ಕಾವ್ಯದ ಹೊರ ಭಾಗದಿಂದ ವರ್ಣಿಸುವುದಕ್ಕಿಂತ, ಅದರ ಒಳ ಭಾಗದ ವಸ್ತು ವೈವಿಧ್ಯವೇ ಮುಖ್ಯವೆಂಬ ನಿಲುವು ಹೊಂದಿದ್ದಾರೆ.

ದಲಿತ ಕಾವ್ಯಗಳು ಮನುಷ್ಯನ ಭಾವನೆಗಳನ್ನು ಕಲಕುವ, ಹೋರಾಟದ ಹಿನ್ನೆಲೆಯನ್ನು ಹೊಂದಿದ್ದು, ಮುಂದಿನ ದಲಿತ ಜನಾಂಗಕ್ಕೆ ದಾರಿ ದೀಪಗಳಾಗಿವೆ. 'ಅಸ್ಪೃಶ್ಯ'ರ ಹಸಿವು, ಅಬ್ಬರ, ಆವೇಶ, ಸಿಟ್ಟು, ನೋವು, ದೌರ್ಜನ್ಯ, ಆರ್ಥಿಕ ಸ್ಥಿತಿ, ಶೈಕ್ಷಣಿಕ ಸಮಸ್ಯೆ, ಸಾಮಾಜಿಕ, ಶೋಷಣೆಗಳ ಆಗರವೇ ದಲಿತ ಕಾವ್ಯವಾಗಿದೆ.

ದಲಿತ ಕಾವ್ಯಗಳು ಶೋಷಣೆಗೆ ಒಳಗಾದವರ ಬದುಕಿನ ಹಲವು ಮುಖಗಳನ್ನು ತೆರೆದಿಟ್ಟು, ಕವಿತೆಗೆ ಅಂತಃಶಕ್ತಿಯ ಜೀವಂತಿಕೆ ತಂದು ಕೊಡುತ್ತವೆ. ಇದರ ಜತೆಗೆ ಬದುಕಿನ ಅನೇಕ ವೈರುಧ್ಯಗಳನ್ನು ಕವಿಯ ಮನಸ್ಸು ತನ್ನ ಕಾವ್ಯಗಳಲ್ಲಿ ದಾಖಲಿಸುತ್ತದೆ. ಇದಕ್ಕೆ ಪೂರಕವಾಗಿ 'ರಮ್ಯ ಕವಿತೆ ಮತ್ತು ನಾನು' ಎಂಬ ಕವನದ ಸಾಲುಗಳು ಉದಾಹರಣೆಯಾಗಿದೆ.

ಎಳೆದೊಯ್ಯುವೆ ಹೊಲಗೇರಿಗೆ ನಿನ್ನ
ಮುಟ್ಟು ಬಾ ಮಾದಿಗರನ್ನ
ಕೊಚ್ಚೆ ಕೊಳಕು ನನ್ನಿಂದಾಗದು
ಯಾವ ಪಾಪಕ್ಕೆ ಹೆಂಡದ ದುರ್ವಾಸನೆ
ಸುಟ್ಟ ಬಾಡಿನ ಗಂಧ ಎಂದು ಹಳಿಯದಿರು
ಹೇತಲ್ಲೆ ಕೂತುಣ್ಣುವವರ ಕಥೆ ಹೇಳಲು
ಕೊರಳಾಗು ಬಾ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 31)

'ದಲಿತ' ಸಮುದಾಯದ ಪ್ರತಿಧ್ವನಿ ಹೊಂದಿರುವ ಸಾಲುಗಳಿವು. ಕವಿ ಒಂದು 'ಜಾತಿ' ಜನರ ಸ್ಥಿತಿಯನ್ನು 'ವ್ಯವಸ್ಥೆ'ಯೊಂದಿಗೆ ವಿವರಿಸುತ್ತಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಒಳಾರ್ಥದಲ್ಲಿ ದಲಿತರು ಎಷ್ಟು ಕೆಳಮಟ್ಟದಲ್ಲಿ ಜೀವಿಸಲು ಸಾಧ್ಯವೋ ಅದಕ್ಕೂ ಒಂದು ಹೆಜ್ಜೆ ಮುಂದೆ ಇದ್ದಾರೆ ಎಂಬ ಅರ್ಥವಂತಿಕೆಯ ಸಾಲುಗಳು ಇಲ್ಲಿವೆ. ಇದೇ ದಲಿತ ಕಾವ್ಯದ ಅಂತಃಶಕ್ತಿ.

ದಲಿತ ಕವಿಗಳು ಅನುಭವವನ್ನೇ ಕಾವ್ಯದ ವಸ್ತುವಾಗಿಸಿಕೊಂಡು, ಊರೊಳಗೆ ದಲಿತರ ಮೇಲೆ ನಡೆದ ಶೋಷಣೆಗಳ ನೆಲೆಯಲ್ಲಿ ನಿಂತು ಕಾವ್ಯ ರಚಿಸಿದ್ದಾರೆ. ಇದನ್ನು 'ಕಪ್ಪು ಕಾಡಿನ ಹಾಡು' ಕವನದಲ್ಲಿ ಕಾಣಬಹುದು.

ಸಂಚಾರಕಾಯಿತು ಸಂಚಕಾರ
ತೆರೆದರೂ ಮುಚ್ಚಿರುವ ಗುಡಿ ಹೋಟೆಲು
ಇದ್ದರೂ ಸಿಗಲಿಲ್ಲ ಕೊಳದ ನೀರು
ಅಪ್ಪ ಅವ್ವನ ಒಡನಾಟದಲ್ಲಿ
ಧಣಿಯ ಕೊಟ್ಟಿಗೆಯಲ್ಲಿ ಹಬ್ಬದೂಟ
ಹೊಲೆತನದ ಬೆಂಕಿಯಲ್ಲಿ
ಸುಟ್ಟು ಹೋದವು ಎದೆಯ ಹೂವು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 134 )

'ದಲಿತ'ರ ಊರೊಳಗಿನ 'ನೈಜ' ಚಿತ್ರಣ ಕೊಡುವ ಸಾಲುಗಳಿವು. 'ಸವರ್ಣೀ'ಯರ 'ಜೀತ'ದ ಕೂಸದ ದಲಿತರ ನರಕದ ಬಾಳಿನ ಅನಾವರಣವನ್ನು ಇಲ್ಲಿ ಕಾಣಬಹುದು. ದಲಿತ ಕಾವ್ಯದ 'ಜೀವಾಳ'ವೇ ಅನುಭವ. ದಲಿತರು 'ಸ್ಪೃಶ್ಯ'ರಿಂದ ಉಂಟಾದ ನಿರಂತರ ಸಂಕಷ್ಟಗಳನ್ನು ಭೀತ್ತರಿಸಿ, ಪ್ರತಿಭಟಿಸುವ ಅಂಶ ಹೊಂದಿರುವುದೇ ದಲಿತ ಕಾವ್ಯವಾಗಿದೆ.ಕ್ರೂರ ಜಾತಿ ವ್ಯವಸ್ಥೆಯೇ ನಮ್ಮ ಅಸಮಾನತೆಗೆ ಕಾರಣವೆಂದು ಬಗೆದ ದಲಿತ ಕವಿಗಳು, ಅಂತಹ ಶೋಷಿತ ವ್ಯವಸ್ಥೆಯ ವಿರುದ್ಧ ಕಾವ್ಯದ ಮೂಲಕ ಚಳುವಳಿ ಮಾಡುತ್ತಾರೆ. ಶೋಷಿತ ವ್ಯವಸ್ಥೆಯ ವಿರುದ್ಧ ಬಂಡೆದ್ದು, ಶತಮಾನಗಳಿಂದ ಜಾತಿ ಸಂಕೋಲೆಯಲ್ಲಿ ಬಂಧನದ ಸಂಕಟಗಳಲ್ಲಿ ಇದ್ದವರ ಬಗ್ಗೆ ಎಚ್. ಗೋವಿಂದಯ್ಯನವರು 'ಕಣ್ಣೀರ ಮಣ್ಣಲ್ಲಿ' ಎಂಬ ಕವನದ ಮೂಲಕ ಕವಿ ಹೀಗೆ ನುಡಿಯುತ್ತಾರೆ.

ಕೊತ ಕೊತ ಕುದಿದು ಕರ್ರಗಾದವರು
ಬರಿ ಹೆಸರಿಗೆ ಬಸುರಾದವರು ಇವರು
ನನ್ನವರು ಅವರಿವರ ಕಾಲಲ್ಲಿ ವದ್ದು ವದ್ದು
ಮಾಡಿದ್ದಕ್ಕೆ ಹೊಲೆ ಮಾದಿಗರಾದವರು

(ಕನ್ನಡ ಸಾಹಿತ್ಯ ಚಳುವಳಿ, ಅರ್ಜುನಗೊಳಸಂಗಿ (ಸಂ.), 2003ಪುಟ 44)

ಕವಿ 'ಜಾತಿ' ವ್ಯವಸ್ಥೆಯ ದಬ್ಬಾಳಿಕೆ, 'ಅಸ್ಪೃಶ್ಯತೆ'ಯ ಸೋಂಕಿನಲ್ಲಿ ನಲುಗಿ ಕರುಕಲಾದ ತನ್ನವರ ಸ್ಥಿತಿಯ ಸಿಟ್ಟನ್ನು ನವಿರಾಗಿ ಪ್ರತಿಭಟಿಸುತ್ತಿದ್ದಾರೆ.

'ದಲಿತ'ರ ಶೋಷಣೆಯನ್ನು ತೆರೆದ ಕಣ್ಣಿನಿಂದ ಕಂಡ ಕವಿ ತಮ್ಮ ಅನುಭವದ ಕಾವನ್ನು ಕಾವ್ಯವಾಗಿಸಿದ್ದಾರೆ.

ಒಟ್ಟಿನಲ್ಲಿ 'ದಲಿತ ಕಾವ್ಯ' ಬರೆದ ಕವಿ 'ದಲಿತ' ಜಾತಿಯಲ್ಲೇ ಹುಟ್ಟಿ, 'ಜಾತಿ'ಯಿಂದಾದ ಶೋಷಣೆಯ ಪೂರ್ಣ ಅನುಭವವಿದ್ದಾಗಲೇ ಇಂಥ ಕಾವ್ಯದ ಉಗಮಕ್ಕೆ ನಾಂದಿಯಾಗುತ್ತದೆ. ದಲಿತರು ಹಲವಾರು ಶತಮಾನಗಳಿಂದ ಮೂಕರಾಗಿಯೇ ದುಡಿದು, ಪ್ರಥಮ ಬಾರಿಗೆ ತಮಗೂ ಮಾತು ಬರುವುದೆಂದು ಮೌನ ಮುರಿದು, ತಮ್ಮ ನಿಜ ಜೀವನದ ಅನುಭವಗಳನ್ನು ಹೊಸ ಚೌಕಟ್ಟಿನಲ್ಲಿ, ಕಾವ್ಯದ ಮೂಲಕ ದಾಖಲಿಸಿದ್ದಾರೆ. ಅನುಭವಗಳನ್ನು ದಾಖಲಿಸುವ ಜೊತೆಗೆ ಚಳುವಳಿಯ ಅಬ್ಬರ, ಅಂತರಂಗದ ಸಂಕಟಗಳನ್ನು ವಸ್ತುವಾಗಿಸಿ, ಅಭಿವ್ಯಕ್ತಿಸಿದ್ದಾರೆ. ದಲಿತ ಕಾವ್ಯದ ಮತ್ತೊಂದು ವಿಶಿಷ್ಟತೆ ಎಂದರೆ 'ಜಾತಿ' ವ್ಯವಸ್ಥೆಯ ಕರಾಳ ಮುಖ, ಸಾಮಾಜಿಕ ಕಳಕಳಿ, ಮನುಷ್ಯನ ಅಂತಃಕರಣಗಳಿಗೆ ಪ್ರಾಮುಖ್ಯತೆ ನೀಡುವುದಾಗಿದೆ.

ದಲಿತ ಕಾವ್ಯಗಳಲ್ಲಿ ನಾವು ಗಮನಿಸಬಹುದಾದ ಮುಖ್ಯ ಅಂಶವೆಂದರೆ ಇದು ಎಂದೂ ಮನರಂಜನೆಯ ಕಾವ್ಯವಾಗಿರದೆ, ಇದರಲ್ಲಿ ನೋವು, ಹತಾಶೆ, ಸೋಲು, ಅವಮಾನ, ಸಿಟ್ಟು, ಪ್ರತಿಭಟನೆ, ದಲಿತರ ಭಾವನೆಗಳಿಂದ ತುಳುಕಾಡಿ, ತನ್ನವರಿಗಾದ ಸ್ವಂತ ಅನುಭವಗಳನ್ನು ಕಾವ್ಯ ರೂಪಕ್ಕೆ ತಂದಿರುವುದು. ದಲಿತರಲ್ಲಿ ಇಂತಹ ಕಾವ್ಯಗಳು ಹುಟ್ಟಲು ಮೇಲ್ವರ್ಗದವರು ಒಂದು ರೀತಿಯಲ್ಲಿ ಕಾರಣ ಕರ್ತರಾದರು. ಮೇಲ್ವರ್ಗದವರು ದಲಿತರಿಗೆ ಹಿಂಸೆ, ದೌರ್ಜನ್ಯ, ಅನ್ಯಾಯ, ಅವಮಾನ, ಶೋಷಣೆ ಮಾಡದಿದ್ದರೇ, ಅಕ್ಷರಸ್ಥ ದಲಿತರಿಗೆ ಇವುಗಳ ಅನುಭವವಾಗದಿದ್ದರೇ, ದಲಿತ ಕಾವ್ಯವು ಸಾಧಾರಣವಾಗುತ್ತಿತ್ತು. ತಮ್ಮ ನೋವಿನ ಅರಿವಾಗದೆ, ತಮ್ಮ ಹಕ್ಕಿನ ಅರಿವಿಲ್ಲದೇ, ಜೀವನ ಪೂರ್ತಿ 'ಜೀತ' ಮಾಡಿಕೊಂಡೆ ಇರಬೇಕಾದ ಪರಿಸ್ಥಿತಿ ಎದುರಾಗುತ್ತಿತ್ತು.

ದಲಿತ ಸಾಹಿತ್ಯಕ್ಕಿಂತ ಹಿಂದಿನ ಸಾಹಿತ್ಯ ಘಟ್ಟಗಳಾದ ನವೋದಯ, ನವ್ಯ, ಪ್ರಗತಿಶೀಲರ ಕಾಲಗಳಲ್ಲಿ ಕಾವ್ಯಗಳು ರಚನೆಯಾಗಿದ್ದರೂ ದಲಿತ ಕವಿಗಳು ರಚಿಸಿದಂತಹ, ಪ್ರತಿಭಟನೆಗೆ ಪೂರಕವಾಗುವಂತಹ ಕಾವ್ಯಗಳ ಕೃಷಿಯಾಗಿಲ್ಲವೆಂದು ಸ್ಪಷ್ಟಪಟ್ಟಿದೆ.

ದಲಿತ ಜನಾಂಗದ ಸಾಮಾಜಿಕ ಬದುಕಿನ ದುರಂತದ ಸರಮಾಲೆಯನ್ನು ಸ್ವಂತ ಅನುಭವಗಳ ಮೂಲಕ ಜನರಿಗೆ ತೆರೆದ ಪುಸ್ತಕದಂತೆ ರಚಿಸಿರುವುದೇ ನಿಜವಾದ ದಲಿತ ಕಾವ್ಯವಾಗಿದೆ.

ಇನ್ನು ದಲಿತರ ಬಗ್ಗೆ ದಲಿತೇತರರು ಬರೆದ ಕಾವ್ಯಗಳ ಬಗ್ಗೆ ಹೇಳುವುದಾದರೆ, ಇದನ್ನು 'ದಲಿತ ಕಾವ್ಯ' ಎನ್ನುವ ಬದಲಾಗಿ, 'ದಲಿತ ಸಂವೇದನೆ' ಹೊಂದಿರುವ ಕಾವ್ಯವೆಂದು ಪರಿಗಣಿಸಬಹುದು. ಸಾಹಿತ್ಯದ ದೃಷ್ಟಿಕೋನದಲ್ಲಿ 'ಸಂವೇದನೆ' ಎಂದರೆ 'ಅರಿವು', 'ತಿಳುವಳಿಕೆ', 'ಪ್ರತಿಕ್ರಿಯೆ' ಎಂಬ ಅರ್ಥ ಬರುವುದುಂಟು. ಅಂದರೆ ದಲಿತೇತರರಿಗೆ ದಲಿತರ ನೋವು, ಸಂಕಟ, ಉಳ್ಳವರಿಂದಾಗುತ್ತಿದ್ದ ತೊಂದರೆಗಳ ಬಗ್ಗೆ ಜ್ಞಾನ-ಅರಿವು-ತಿಳುವಳಿಕೆ ಎಲ್ಲವೂ ಇದ್ದವು. ಜತೆಗೆ ಜಾತಿ ವ್ಯವಸ್ಥೆಯ ಕರಾಳ ಮುಖಗಳನ್ನು ಕುರಿತು ಅನೇಕ ದಲಿತೇತರ ಕವಿಗಳು ಕಾವ್ಯ ರಚಿಸಿದ್ದರೂ ದಲಿತರ ಅಂತರಂಗದ ಸಂಕಟಗಳನ್ನು ಹೇಳುವಲ್ಲಿ ವಿಫಲರಾಗಿದ್ದಾರೆ.

ದಲಿತೇತರರು ದಲಿತರ ಮೇಲಿನ ಕಾಳಜಿಗಾಗಿ ಬರೆದಿರುವುದರಿಂದ ಇದನ್ನು ದಲಿತೇತರ 'ಪ್ರಜ್ಞೆ'ಯಂತಲೂ ತಿಳಿಯಬಹುದು. ಇವರ ಕಾವ್ಯಗಳಲ್ಲಿ ದಲಿತರ ಸಂಕಷ್ಟದ ಅನುಭವವಿರುವುದಿಲ್ಲ. ದಲಿತರ ವೇದನೆಯು ಇವರ ವೇದನೆಗಿಂತ ಭಿನ್ನವಾಗಿದ್ದು, ದಲಿತರ ಜತೆ ತಳುಕು ಹಾಕುವುದು ಕಷ್ಟ ಸಾಧ್ಯವಾಗಿದೆ. ಹೇಗೆಂದರೆ 'ಒಬ್ಬ ವ್ಯಕ್ತಿಗೆ ತನ್ನ ಕಣ್ಣನ್ನು ಒಂದು ಸೂಜಿಯಿಂದ ಚುಚ್ಚಿ ಕೊಂಡಾಗ ಆದ ನೋವನ್ನು ಅವರ ಎದುರಿಗೆ ಇದ್ದವನು ಅದನ್ನು ನೋಡಿ ಕನಿಕರದಿಂದ ಸಮಾಧಾನ ಅಥವಾ ಆ ನೋವನ್ನು ಹೋಗಿಸಲು ಬೇರೆ ರೀತಿಯ ಸಾಹಸಗಳನ್ನು ಮಾಡಬಹುದು. ಆದರೆ ಆ ವ್ಯಕ್ತಿ ಪಡುತ್ತಿರುವ ನೋವನ್ನು, ಅವನ ಸಂಕಟವನ್ನು ಪಡೆಯಲು ಎಂದಿಗೂ ಸಾಧ್ಯವಿರುವುದಿಲ್ಲ'. ಆದ್ದರಿಂದ ದಲಿತೇತರರು ದಲಿತರ ಕಷ್ಟಗಳನ್ನು ಕಂಡು ಮರುಕ ಉಂಟಾಗಿ ಬರೆದಿರುವುದರಿಂದ ಇಂಥದ್ದು ದಲಿತ ಸಂವೇದನಾಶೀಲ ಕಾವ್ಯವಾಗಬಹುದು.

ರಹಮತ್ ತರೀಕೆರೆಯವರು ಒಟ್ಟಾರೆ 'ದಲಿತ ಸಾಹಿತ್ಯ' ಯಾವುದು ಎಂಬುದರ ಬಗ್ಗೆ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ "ದಲಿತರ ಬಗೆಗೆ ಇತರರುಬರೆದದ್ದು ಅಥವಾ ದಲಿತರೇ ಸಾರ್ವಜನಿಕ ವಿಷಯಗಳ ಬಗ್ಗೆ ಬರೆದದ್ದು ದಲಿತ ಸಾಹಿತ್ಯ ಅಲ್ಲ ದಲಿತರಾದವರು ತಮ್ಮ ರಕ್ತ ಮಾಂಸಗಳ ಜೀವಂತ ಅನುಭವ ಅನಿಸಿಕೆಗಳನ್ನು ಹಿಡಿದಿಟ್ಟಿರುವುದು ಮಾತ್ರ ದಲಿತ

ಸಾಹಿತ್ಯ ಸಹಜವಾಗಿ ಇದರ ಧೋರಣೆ ಪ್ರತಿಭಟನೆಯದು"(ಕಥಾ ಕಥನ, ಎಲ್.ಹನುಮಂತಯ್ಯ, 2010, ಪುಟ 11 ) ಎಂದಿದ್ದಾರೆ.

ಇವರ ಹೇಳಿಕೆಯನ್ನು ವಿಸ್ತರಿಸುವುದಾದರೆ ದಲಿತೇತರರು ಬರೆದ 'ದಲಿತ ಕಾವ್ಯ'ಗಳಲ್ಲಿ ಅಥವಾ ದಲಿತ ಸಂವೇದನಾ ಕಾವ್ಯಗಳಲ್ಲಿ ದಲಿತರ ರಕ್ತ ಮಾಂಸಗಳ ಜೀವಂತ ಅನುಭವ ಕಾಣಸಿಗುವುದಿಲ್ಲ ಹಾಗೂ ದಲಿತೇತರ ಕಾವ್ಯಗಳಲ್ಲಿ ಪ್ರಗತಿಪರ ಆಶಯಗಳನ್ನು ಮಾತ್ರ ಕಾಣಬಹುದು. ಒಟ್ಟಿನಲ್ಲಿ ದಲಿತೇತರರ ದಲಿತ ಸಂವೇದನಾ ಕಾವ್ಯಗಳಲ್ಲಿ ಪ್ರತಿಭಟನೆಯ ಅಬ್ಬರವಾಗಲಿ, ಅಂತರಂಗದ ಸಂಕಟಗಳಾಗಲಿ ವ್ಯಕ್ತವಾಗಿಲ್ಲ. ಬದಲಿಗೆ ದಲಿತರ ಹೊರ ಪ್ರಪಂಚದ ಚಿತ್ರಣವನ್ನು ಕನಿಕರ ಭಾವದಿಂದ ಸಾಮಾನ್ಯವಾಗಿಸಿದ್ದಾರೆ.

ಇನ್ನು ದಲಿತರು ಬರೆದ ಕಾವ್ಯವೆಲ್ಲಾ 'ದಲಿತ ಕಾವ್ಯ'ವಾಗುತ್ತದೆಂಬುವುದು ಸುಳ್ಳು. ದಲಿತ ಕವಿ ಪ್ರಕೃತಿಯನ್ನೋ, ಪುರಾಣವನ್ನೋ, ಪ್ರೀತಿಯನ್ನೋ ಕುರಿತು ಬರೆದರೆ ಅದು ದಲಿತ ಕಾವ್ಯದ ಸಾಲಿಗೆ ನಿಲ್ಲುವುದಿಲ್ಲ. ಇದಕ್ಕೆ ಒಂದು ಉದಾಹರಣಾ ಕಾವ್ಯವೆಂದರೆ 'ಸುಟ್ಟಾವು ಬೆಳ್ಳಿ ಕಿರಣ'.

ಆ ಬೆಟ್ಟದಲ್ಲಿ ಬೆಳದಿಂಗಳಲ್ಲಿ
ಸುಳಿದಾಡ ಬೇಡ ಗೆಳತಿ
ಚೆಲುವಾದ ನಿನ್ನ ಮಲ್ಲಿಗೆಯ ಮಯ್ಯ
ಸುಟ್ಟಾವು ಬೆಳ್ಳಿ ಕಿರಣ
ಇಳಿಜಾರಿನಲ್ಲಿ ಆ ಕಣಿವೆಯಲ್ಲಿ
ನೀ ಇಳಿಯ ಬೇಡ ಗೆಳತಿ
ತತ್ತರಿಸುವಂತೆ ಕಾಲಲ್ಲಿ ಕಮಲ
ಮುತ್ತುವವು ಮೊಲದ ಹಿಂಡು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 123)

ಈ ಸಾಲಿನ ಕರ್ತೃ ಅಪ್ಪಟ ದಲಿತ ಕವಿ.ಕಾವ್ಯದ ಭಾವನೆ ಪ್ರೇಮಗೀತೆಯನ್ನು ಬಿಂಬಿಸುವಂಥದ್ದು.ಆದರೆ ಇಲ್ಲಿ ಯಾವುದೇ ರೀತಿಯ 'ದಲಿತ ಪ್ರಜ್ಞೆ', 'ದಲಿತ ಸಂವೇದನೆ',ಪ್ರತಿಭಟನೆಯ ಧ್ವನಿ, ಪ್ರಾಮಾಣಿಕ ಅನಿಸಿಕೆಗಳು, ದಲಿತ ಪರ ಧೋರಣೆಗಳನ್ನು ಕಾಣಲಾಗದು. ಆದ್ದರಿಂದ ಇದನ್ನು ದಲಿತ ಕವಿಯೇ ಬರೆದರು 'ದಲಿತ ಕಾವ್ಯ'ವಾಗುವುದಿಲ್ಲ. ಒಟ್ಟಿನಲ್ಲಿ ದಲಿತ ಕಾವ್ಯವೆಂದರೆ ದಲಿತರ ಎಲ್ಲಾ ಬಗೆಯ ಶೋಷಣೆಯ

ಪ್ರತಿಧ್ವನಿಗಳಾಗಿ ಮೂಡಿ ಬಂದಿರ ಬೇಕು. ಇಲ್ಲವಾದರೆ ಅದು ದಲಿತರೇ ಬರೆದರೂ, ದಲಿತ ಕಾವ್ಯವಾಗುವುದಿಲ್ಲ.

ಭಾಷಿಕ ನೆಲೆ : ಭಾಷೆ ಸಂವಹನ ಮಾಧ್ಯಮಗಳಲ್ಲಿ ಒಂದು. ನಮ್ಮ ಸುತ್ತ ಮುತ್ತಲಿನವರೊಡನೆ ವ್ಯವಹರಿಸುವುದಕ್ಕೆ ಹಾಗೂ ವಿಚಾರ ವಿನಿಮಯ ಮಾಡುವುದಕ್ಕೆ ಭಾಷೆ ಒಂದು ಅಮೂಲ್ಯ ಸಾಧನವಾಗಿದ್ದು, ಭಾಷೆ ಬಿಟ್ಟು ಸಮಾಜ, ಸಮಾಜ ಬಿಟ್ಟು ಭಾಷೆಯಿಲ್ಲವಾಗಿದೆ. ಭಾಷೆ ಮನುಷ್ಯನ ಭಾವನೆಯನ್ನು ಹೊರ ಹಾಕುವುದರ ಜತೆಗೆ ಜೀವನವನ್ನು ನಿರ್ವಹಿಸುವ ಸಾಧನವಾಗಿದೆ. ಹೀಗೆ ಭಾಷೆಯಿಂದ ಹಲವಾರು ಪ್ರಯೋಜನಗಳನ್ನು ಗಮನಿಸಬಹುದು.ಭಾಷೆ ಎಂಬುದು ಚಲನಾಶೀಲವಾದ್ದರಿಂದ ಪ್ರಪಂಚದಲ್ಲಿ ಪ್ರತಿಯೊಂದು ವ್ಯವಹಾರಕ್ಕೂ ಮೂಲ ಸಾಧನ ಭಾಷೆ. ಭಾಷೆ ಮತ್ತು ಪ್ರಪಂಚ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಹಾಗೂ "ಮನುಷ್ಯನ ಸರ್ವತೋಮುಖ ಅಭಿವೃದ್ಧಿಯ ಮಾಧ್ಯಮ ಭಾಷೆ. ಯಾವುದೇ ಜೀವಂತ ಭಾಷೆ ಕಾಲ, ದೇಶ, ವ್ಯಕ್ತಿ ಮತ್ತು ಪ್ರದೇಶಕ್ಕನುಗುಣವಾಗಿ ಬದಲಾಗುತ್ತಲೇ ಬೆಳೆಯುತ್ತಾ ಬಂದಿದೆ"(ದಲಿತರು, ಭಾಷೆ ಮತ್ತು ಸಮಾಜ, ಪಿ.ಮಹಾದೇವಯ್ಯ(ಸಂ.), 2006 ಪುಟ 216) ಎಲ್.ಮಂಜುಳಾಕ್ಷಿರವರ ಅಭಿಪ್ರಾಯ. ಅಂದರೆ ಒಂದು ಭಾಷೆ ಕಾಲಕ್ಕೆ ತಕ್ಕಂತೆ ದೇಶಕ್ಕೆ ತಕ್ಕಂತೆ ವ್ಯಕ್ತಿಗಳಿಗೆ ತಕ್ಕಂತೆ ಬದಲಾಗುತ್ತಾ, ಜತೆಗೆ ಬೆಳೆಯುತ್ತಾ ಸಾಗುತ್ತದೆ.ಸಂಘ ಜೀವಿಯಾದ ಮಾನವನಿಗೆ ಭಾಷೆ ಒಂದು ಸಂವಹನ ಮಾಧ್ಯಮವಾಗಿದ್ದು, ಮನುಷ್ಯ ತಾವಾಡುವ ಭಾಷೆಯಿಂದಲೂ ಜಾತಿಯನ್ನು ಗುರುತಿಸಿಕೊಳ್ಳುತ್ತಾನೆ ಎಂಬುದಕ್ಕೆ ಕೆ.ವಿ. ನಾರಾಯಣ್‌ರವರು ಸೂಚಿಸುವಒಂದು ಉದಾಹರಣೆ ಎಂದರೇ "10ನೇ ಶತಮಾನದ ಕನ್ನಡ ಕವಿ ಪಂಪ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ದ್ರೋಣನ ಬಾಯಿಂದ ಒಂದು ಮಾತನ್ನು ಆಡಿಸುತ್ತಾನೆ ಕುಲಮಂ ನಾಲಗೆ ತುಬ್ಬುವ ವೊಲ್' (ನಾಲಿಗೆ ಕುಲವ ಹೊರ ಹಾಕುವ ಹಾಗೆ) ನಾಲಿಗೆ ಕುಲವನ್ನು ಹೊರ ಹಾಕುತ್ತದೆ ಎನ್ನುವುದು ಆ ಮಾತಿನ ಸತ್ಯವಲ್ಲ. ಮಾತಿನ ಮೂಲಕ ಕುಲವನ್ನು ನಾವು ಗುರುತಿಸುತ್ತೇವೆ ಎನ್ನುವುದು ಸತ್ಯ"(ದಲಿತರು, ಭಾಷೆ ಮತ್ತು ಸಮಾಜ, ಮಹಾದೇವಯ್ಯ ಪಿ.(ಸಂ.), 2006 ಪುಟ 13)ಮನುಷ್ಯನ ಭಾಷಾ ವೈಕರಿಯಿಂದ 'ಜಾತಿ'ಯನ್ನು ಪತ್ತೆ ಹಚ್ಚಬಹುದು.ಈ ಅಧ್ಯಾಯದ ಉದ್ದೇಶ ಭಾಷೆಯ ಹುಟ್ಟು, ಬೆಳವಣಿಯ ಚರ್ಚೆಯಲ್ಲ, ಬದಲಿಗೆ ದಲಿತರ ಜೀವನ ಭಾಷೆ ಹಾಗೂ ದಲಿತ ಕಾವ್ಯಗಳಲ್ಲಿ ಬಳಸಿದ ಭಾಷೆಯ ಬಗ್ಗೆ ಚರ್ಚಿಸುವುದಾಗಿದೆ.

ದಲಿತರಾಡುವ ಭಾಷೆಗೂ, ಅವರ ಕಾವ್ಯದಲ್ಲಿ ಬಳಸಿರುವ ಭಾಷೆಗೂ ಯಾವ ವ್ಯತ್ಯಾಸವಿಲ್ಲದಿದ್ದರೂ, ದಲಿತ ಕಾವ್ಯದ ಭಾಷೆ ಮಾತ್ರ ಇತರರಿಗೆ ಸ್ವಲ್ಪ ಮುಜುಗರವನ್ನು ಉಂಟು ಮಾಡುವಂತಿದೆ. ತಾವಾಡುವ ಭಾಷೆಯನ್ನೇ ಕಾವ್ಯಕ್ಕೆ ಬಳಸಿದ್ದರಿಂದ ಇತರರಿಗೆ ದಲಿತರ ಭಾಷಾ ವೈಖರಿ ಹಿಡಿಸದಿರಬಹುದು. ಆದರೆ ಬರಗೂರು ರಾಮಚಂದ್ರಪ್ಪನವರು ಹೇಳಿರುವಂತೆ ದಲಿತರ ಭಾಷೆ ಹಸಿವಿನ ಭಾಷೆಯಾಗಿದೆ ಎನ್ನಬಹುದು. ಆದರೆ ಮೊಗಳ್ಳಿ ಗಣೇಶ್‌ರವರು "ಸಂಘರ್ಷದ ಅಭಿವ್ಯಕ್ತಿಯಿಂದ ದಲಿತರ ಭಾಷೆಯು ಒರಟಾಗಿದ್ದರೂ ಅವರ ಸಂವೇದನೆಯು ಅಪ್ರಮಾಣಿಕವಾದದ್ದಲ್ಲ. ಅಂತಃಕರಣವಿರುವ ಭಾಷೆಯೇ ಯಾವ ಕಾಲದಲ್ಲೂ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬಲ್ಲದು" ( ದಲಿತರು, ಭಾಷೆ ಮತ್ತು ಸಮಾಜ, ಮಹಾದೇವಯ್ಯ ಪಿ. (ಸಂ.), 2006 ಪುಟ ) ಎಂದು ಅಭಿಪ್ರಾಯ ಪಟ್ಟಿರುತ್ತಾರೆ.ಭಾಷಾ ಪ್ರಭೇದಗಳು ಒಂದು ಜನಾಂಗದ ಸಾಮಾಜಿಕ ನೆಲೆಯ ಹೀನ ಮತ್ತು ಅಸಹಾಯಕ ಸ್ಥಿತಿಯನ್ನು ತಿಳುವಳಿಕೆಯ ನೆಲೆಯನ್ನು ಸಾದರಪಡಿಸುತ್ತವೆ. ಉದಾಹರಣೆಗೆ 'ಒಂದು ಪದ' ಎಂಬ ಪದ್ಯದ ಸಾಲುಗಳು ಹೀಗಿವೆ.

ಇಕ್ರಲಾ ವದೀರ್ಲಾ
ಈ ನನ್ ಮಕ್ಕಳ ಚರ್ಮ ಎಬ್ರಲಾ
ದೇವ್ರು ಒಬ್ನೆ ಅಂತಾರೆ
ಓಣಿಗೊಂದೊಂದ್ ತರಾ ಗುಡಿ ಕಟ್ಸವ್ರೆ
ಎಲ್ಲಾರು ದೇವ್ರ ಮಕ್ಳು ಅಂತಾರೆ
ಹೊಲೇರ್ನ ಕಂಡ್ರೆ ಹಾವ್ ಕಂಡಂಗಾಡ್ತಾರೆ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 56)

ಸಿದ್ಧಲಿಂಗಯ್ಯನವರ ಈ ಸಾಲುಗಳಲ್ಲಿ ಸ್ವಾಭಿಮಾನದ ದನಿ, ಯಜಮಾನ ಸಂಸ್ಕೃತಿಯನ್ನು ವಿರೋಧಿಸುವ ಭಾಷಾ ಧೈರ್ಯ, ಹಠ, ತನ್ನ ಜನರ ಹೀನದುರಂತಕ್ಕೆ ಕಾರಣವಾದ ವ್ಯವಸ್ಥೆಯ ವಿರುದ್ಧ ಇದ್ದ ಸಿಟ್ಟು, ಈ ವ್ಯವಸ್ಥೆಯನ್ನೇ ಹಾಳು ಮಾಡುವ ಉತ್ಸಾಹವನ್ನು ಕವಿ ವ್ಯಕ್ತಪಡಿಸಿದ್ದಾರೆ. ಇಲ್ಲಿ ತನ್ನವರನ್ನು ಎಚ್ಚರಗೊಳಿಸುತ್ತ, ತಮ್ಮ ಅಸ್ತಿತ್ವವನ್ನು ಖಾತ್ರಿ ಮಾಡಿಕೊಳ್ಳುವುದನ್ನು ಕಾಣಬಹುದು.ದಲಿತರು ತಮ್ಮ ಇತಿಹಾಸದ ಉದ್ದಕ್ಕೂ ಕೀಳು ಜನ, ಹೀನ, ಅಸ್ಪೃಶ್ಯ ಎಂಬ ಅನರ್ಥ ಅವಹೇಳನಕ್ಕೆ ಬಲಿಯಾಗಿ, ಅಸಮಾದಾನದಿಂದ ಕುದಿದ ಜನಾಂಗವು ಧೈರ್ಯ ಮಾಡಿ ಸವರ್ಣೀಯರ ಮುಖಕ್ಕೆ ಹೊಡದಂತೆ ಮಾತನಾಡುವ ಪ್ರಯತ್ನ

ಮಾಡಿರುವುದು ಸಾಹಿತ್ಯ ಲೋಕದಲ್ಲೇ ಒಂದು ಅದ್ಭುತ ಅಲೆಯನ್ನುಂಟು ಮಾಡಿದೆ. ಇಂತಹ ಅಲೆಯನ್ನು ಕವಿ 'ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು' ಎಂಬ ಕವನದಲ್ಲಿ ಎಬ್ಬಿಸಿದ್ದಾರೆ.

ಹುನ್ನಾರದ ಹುಳವೇ, ವೈದಿಕ ಕೊಳವೇ
ಹೊನ್ನ ಶೂಲಕ್ಕೇರಿಸುವ ವೀರಶೈವ ಸ್ಥಾವರವೇ
ಉಳಿದಿದ್ದು ಶೂದ್ರ ತ್ರಿಶೂಲವೇ, ತಿವಿದಿದ್ದು ಗೌಡ,
ಉಳಿದವರು ಗಾಣವೆಳಿಸಿದ್ದು ಗೌಣವೇ? ಉಳಿದ
ಉಪ್ಪಾರ ಕಮ್ಮಾರ ಕುಲವೆಂಟು ಜನವೇ
ಉಚ್ಚೆ ಹೇಲು ಬಾಚಿದ್ದು ಬಾಗಿದ್ದು
ನೆಲವೆ, ಹಾಡು ಆಖೈರಿಗೂ ಮುಂಚೆ

(ಸುಬ್ಬು ಹೊಲೆಯರ್, ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು, 2003 ಪುಟ 19)

ಇಲ್ಲಿನ ಕವನದ ಭಾಷೆಯು ಸಿಟ್ಟು, ದುಃಖವನ್ನು ದಟ್ಟವಾಗಿ ಹರಡಿದ್ದು, ಯಜಮಾನನ ದಬ್ಬಾಳಿಕೆಯ ಜಯಮಾನವನ್ನು, ಸಂಸ್ಕೃತಿಯ ಅತಿಕ್ರಮಣವನ್ನು, ದೌರ್ಜನ್ಯವನ್ನು ಹಾಗೂ ಹೀನ ಸಾಮಾಜಿಕ ಸ್ಥಿತಿಯನ್ನು ನವಿರಾಗಿ ಪ್ರತಿನಿಧಿಸುತ್ತಿದೆ.

ದಲಿತರ ಭಾಷೆಯು ಪ್ರತಿಭಟನೆಯ ಭಾಷೆಯಾಗಿದೆ. ಈ ರೀತಿಯ ಪ್ರತಿಭಟನೆಯ ಭಾಷೆಯನ್ನು ಬಳಕೆ ಮಾಡಿದ್ದರಿಂದಲೇ ಇವರ ಬದುಕು ಒಂದು ಉತ್ತಮ ಹಂತಕ್ಕೆ ಬರುವಲ್ಲಿ ಸ್ವಲ್ಪವಾದರೂ ಅನುಕೂಲವಾಯಿತು. ದಲಿತ ಕಾವ್ಯದ ಭಾಷೆಯಲ್ಲಿ ಪ್ರತಿಭಟನೆ ಅಂಶ ಅಗಾಧವಿರುವ ಕಾರಣ, ತಮ್ಮನ್ನು ನಿರ್ಲಕ್ಷ್ಯ,ಶೋಷಣೆ ಮಾಡುವವರಿಗೆ ಶಾಪ ಹಾಕುವ ಹಾಗೆ ಸಿಟ್ಟು, ಆಕ್ರೋಶಗಳನ್ನು 'ಮೀರ ಸಾಧಕ' ಎಂಬ ಕವನದ ಸಾಲುಗಳಲ್ಲಿ ಕಾಣಬಹುದು.

ಪಡೆದು ಹೆಂಡ-ಸಾರಾಯಿ ಗುತ್ತಿಗೆದಾರರ
ಜಾಹೀರಾತುಗಳ
ಉನ್ನತ ಹುದ್ದೆಗೆ ಹೊಂಚು ಹಾಕುತ
ಸುಳ್ಳು ಜಾತಿ ಪ್ರಮಾಣ ಪತ್ರಗಳ
ಹೊಡೆದು ಹಣ ಆಸ್ತಿ ಚಂದದಾರರ
ಆಸೆಯ ಕನಸುಗಳ
ದೇಶ-ವಿದೇಶಗಳಲ್ಲಿ ಮಾರಿ ಪಂಚಮರ

ಅಸ್ಥಿ ಪಂಜರಗಳ
ಈಚಲ ದೊರೆಗಳಿಗೆ ಅಡವಿಟ್ಟು ಬಡವರ
ಮಾನಮರ್ಯಾದೆಗಳ

(ಮುನಿವೆಂಕಟಪ್ಪ ವಿ., ಸ್ವಾಭಿಮಾನದ ಬೀಡಿಗೆ, 1991 ಪುಟ 36)

ದಲಿತರ ಭಾಷೆ ಪ್ರತಿಭಟನೆಯಾಗಿದ್ದರೂ, ಸಾಮಾನ್ಯ ಓದುಗನಿಗೂ ತಿಳಿದಿರುವಂತೆ ಸ್ಪಷ್ಟವಾಗಿದೆ. ಕವಿಯು ಮೇಲಿನ ಸಾಲುಗಳಲ್ಲಿ ಕೆನೆಗಟ್ಟುವ ವ್ಯಂಗ್ಯ ಲೇವಡಿತನಗಳು, ವಿಷಾದ ಮತ್ತು ದುರಂತಗಳನ್ನು ಭಾಷೆಯ ಮೂಲಕ ಚೆನ್ನಾಗಿ ಶೋಧಿಸಿದ್ದಾರೆ.

ದಲಿತ ಕವಿಗಳು ಗುಡಿಸಲು ಭಾಷಾ ಬಳಕೆಯಿಂದಲೇ ಯಜಮಾನಿಕೆಯ ಪ್ರಾಬಲ್ಯ ನಡೆಸಿದವರಿಗೆ ತಿರುಗೇಟು ಕೊಡುವ ದಿಟ್ಟ ನಿಲುವುಗಳನ್ನು ತಮ್ಮ ಕಾವ್ಯಗಳಲ್ಲಿ ತರುತ್ತಾರೆ. ಇದರಿಂದ ಆ ಕಾವ್ಯಗಳು ಓದುಗರಿಗೆ ಸೂಕ್ಷ್ಮವಾಗಿ ದಲಿತರ ಭಾಷಾ ಸುಳಿವುಗಳನ್ನು ನೀಡುತ್ತವೆ. ಇಂತಹ ಸುಳಿವು 'ಬೆವರು ಹನಿಯಾದಾಗ' ಎಂಬ ಕವನದಲ್ಲಿ ಮೈದೋರಿದೆ.

ನನ್ನ ಜನರ ಮೈ ಬೆವರು
ಹನಿಯಾಗಿ ಹರಿದಾಗ
ಭೂಮಿಗೇ ಬಂತೋ ಯೌವನ
ಉಡಿಯ ತುಂಬ ತೆನೆಯ ಸರ
ಮುಡಿಯೊಳಗೆ ಮೊಲ್ಲೆ ಮಾಲೆ
ಮೊಗ್ಗು ಮಿಡಿ ಸಂತೆ ನೆರೆದವೋ
ಮುಗಿಲ ಚುಕ್ಕೆ ಮುದದಿಂದ
ನೆಲಕೆಇಳಿದವೋ

(ಲಲಿತಾ ನಾಯಕ್ ಬಿ.ಟಿ., ಒಡಲ ಬೇಗೆ, ಪುಟ 17)

ಮೇಲಿನ ಕವನದ ಸಾಲುಗಳು ಪರಿಸರದ ವರ್ಣನೆಯಂತೆ ಮೇಲ್ನೋಟಕ್ಕೆ ಕಂಡು ಬಂದರೂ ಕವಯಿತ್ರಿಯು ಬೆವರಿಲ್ಲದೆ ಗಳಿಕೆ ಮಾಡುವ ಮಂದಿಗೆ ವಾಚ್ಯವಾಗಿ ತರಾಟೆಗೆ ತೆಗೆದುಕೊಳ್ಳದಿದ್ದರೂ ಪರೋಕ್ಷವಾಗಿ ತಮ್ಮ ಇಂಗಿತವನ್ನು ಸೌಮ್ಯವಾದ ಭಾಷಾ ಬಳಕೆಯಲ್ಲಿ ಎಚ್ಚರಿಸಿದ್ದಾರೆ. ದಲಿತರ ಮಾತು ಮತ್ತು ಮನಸ್ಸು ದಲಿತ ಕಾವ್ಯಗಳಲ್ಲಿ ಒಂದಾಗಿ ಮನಸ್ಸಿನ ಒಳಗೆ ಏನಿದೆಯೋ ಅದೇ ಮಾತಾಗಿ ಹೊರ ಬಂದಿದೆ. ಆದರೆ ದಲಿತ ಕಾವ್ಯಗಳು ಬರುವುದಕ್ಕೆ ಮುಂಚೆ ಇದ್ದ

ನವೋದಯ, ಪ್ರಗತಿಶೀಲ ಸಾಹಿತ್ಯಗಳಲ್ಲಿ ನಿಖರವಲ್ಲದ ಮಾತುಗಳ ವ್ಯಾಪ್ತಿ, ಅತಿಭಾವುಕತೆ, ಆವೇಶ, ಉತ್ಪ್ರೇಕ್ಷೆ, ಪುನರಾವೃತ್ತಿ ಭಾಷೆಗಳನ್ನು ಗಮನಿಸಿದರೆ, ನವ್ಯ ಸಾಹಿತ್ಯವು ಇತರರ ಮೇಲೆ ಪರಿಣಾಮ ಬೀರುವಂತಹ ಭಾಷೆಯನ್ನು ಬಳಸದೆ, ಕಾವ್ಯ ಪ್ರಕಾರದ ಸಂಪ್ರದಾಯ, ಲಕ್ಷಣಗಳಿಗೆ ಗೌರವ ಕೊಡದೆ, ಕನಸು, ಭ್ರಮೆ, ಭ್ರಾಂತಿಗಳು ಜೀವನದ ಭಾಗವೆಂದು, ಇದಕ್ಕೆ ಸಂಬಂಧಪಟ್ಟ ಭಾಷೆ ಬಳಸಿ ಕಾವ್ಯಕ್ಕೆ ಬಣ್ಣ ತುಂಬಿರುತ್ತಾರೆ. ಇಂತಹ ಕಾವ್ಯಗಳಲ್ಲಿ ಬಳಸಿದ ಭಾಷೆಗಳನ್ನು ಓದಿದಾಗ ಪ್ರತಿಯೊಬ್ಬ ಓದುಗನು ಶಾಂತ ರೀತಿಯಲ್ಲೇ ಓದಿಕೊಂಡು ಹೋಗುವಂತೆ ಇರುತ್ತಿದ್ದವು. ಆದರೆ ದಲಿತ ಕಾವ್ಯಗಳು ಮೂಡಿ ಬಂದ ನಂತರ ಓದುಗನಲ್ಲಿ ಭಾಷೆಯ ಇನ್ನೊಂದು ಮುಖ ಕಾವ್ಯದಲ್ಲಿ ಅನಾವರಣವಾಯಿತು. ದಲಿತ ಕಾವ್ಯ ರಚನೆಯಾಗುವುದಕ್ಕಿಂತ ಹಿಂದಿನ ಕಾವ್ಯದ ಭಾಷೆಯು ಶಾಂತಿ, ನಯ, ಸುಂದರವಾಗಿ ಇದ್ದಂತಹವು ಆದರೆ ದಲಿತ ಕಾವ್ಯದ ಭಾಷೆಯನ್ನು ಗಮನಿಸಿದಾಗ ಇದಕ್ಕೆ ವಿರುದ್ಧವಾದ ಪರಿಯನ್ನು ಕಾಣಬಹುದು. ದಲಿತರ ಸಾಮಾಜಿಕ ಜೀವನ ಎಷ್ಟು ದುರ್ಬರವಾಗಿತ್ತೋ ಅಷ್ಟೇ ಒರಟಾದ ಜೀವನಾಂಶಗಳು ಕಾವ್ಯದ ಭಾಷೆಗಳ ಮೂಲಕ ರಚನೆಗೊಂಡವು.

ತಾತ್ವಿಕ ನಿಲುವುಗಳು : ದಲಿತ ಎನ್ನುವುದು ಒಂದು ಜನಾಂಗ, ಸಮುದಾಯವಾಗಿದೆಯೇ ಹೊರತು 'ಅಸ್ಪೃಶ್ಯ'ರಾಗಲ್ಲ ದಲಿತ ಲೇಖಕರು ಸಮಾಜದಲ್ಲಿ ಮನುಷ್ಯ, ಮನುಷ್ಯನಲ್ಲಿ ಸಮಾಜ ಇರುವುದನ್ನು ಗ್ರಹಿಸಿಕೊಂಡು ಎಲ್ಲರೂ ಜತೆಯಾಗಿ ಬಾಳುವುದು ಅನಿವಾರ್ಯವೆಂದು ತಿಳಿದು, ತಮ್ಮ ಜನಾಂಗಕ್ಕೆ ಒಂದು 'ಅಥೆಂಟಿಸಿಟಿ' ಇದೆ ಎನ್ನುತ್ತಾರೆ. ಇವರ ಈ ನಿರ್ಧಾರಕ್ಕೆ ಮೂಲ ಕಾರಣ ಪುರುಷರೆಂದರೆ ಡಾ.ಬಿ.ಆರ್.ಅಂಬೇಡ್ಕರ್. ಇವರು ದೇಶದ ದಲಿತರಿಗೆ ಮಾತಾಗಿ ಬಂದು ನರ ನಾಡಿಗಳಲ್ಲಿ ಸ್ವಾಭಿಮಾನದ ಸಂಕೇತವಾಗಿ ಧುಮುಕಿ, ಶಿಕ್ಷಣ–ಸಂಘಟನೆ–ಹೋರಾಟದಿಂದ ದಲಿತರ ಉದ್ಧಾರವೆಂದು ಕರೆ ಕೊಟ್ಟರು.

ತಮ್ಮ ಜನತೆಗೆ ಕತ್ತಲೆಯಿಂದ ಬಿಡಿಸಿಕೊಂಡು ಬೆಳಕಿನ ಕಡೆಗೆ ಸಾಗುವಂಥ ಮಾರ್ಗ ತೋರಿಸಿದ್ದು ಇವರ ಮೊದಲ ಚಳುವಳಿಯಾಗಿತ್ತು. ಭೂಮಿಯಲ್ಲಿ ಜೀವಿಸುವ ಪ್ರತಿಯೊಬ್ಬರೂ ಮನುಷ್ಯರೇ ಎಂದು ಸಾರಲು ಮಹಾಡ್ ಕೆರೆಯ ನೀರು ಕುಡಿದು, ದೇವಸ್ಥಾನಕ್ಕೆ ಪ್ರವೇಶ ಮಾಡಿದ ಘಟನೆಗಳ ಹಿಂದೆ ತಾನು ಅನುಭವಿಸಿದ ಸಂಕಷ್ಟದ ಜೀವನ, ತಮ್ಮ ಸಮುದಾಯದ ಸಮಸ್ಯೆಗಳು, ಇವರಿಗೆ ಸವಾಲುಗಳಾಗಿ ಕಂಡಿತು.

ಈ ವಿಷಯವನ್ನು ರಚನಾತ್ಮಕವಾಗಿ ಅಂಬೇಡ್ಕರ್‌ರವರು ನಿಭಾಯಿಸಿದ್ದರಿಂದ ನಮ್ಮ ದಲಿತ ಸಾಹಿತಿಗಳಿಗೂ ಒಂದು ದೃಢ ನಿಲುವು ತಾಳಲು ಸಾಧ್ಯವಾಯಿತು.ದಲಿತರ ಸಮಸ್ಯೆ ಸಾಮಾಜಿಕ ವ್ಯವಸ್ಥೆಗೆ ಸಂಬಂಧಿಸಿದ್ದರಿಂದ ಆ ವ್ಯವಸ್ಥೆಯನ್ನು ಪರಿವರ್ತನೆ ಮಾಡುವ ನಿಲುವಿನ ಕಡೆ ಹೆಜ್ಜೆ ಇಟ್ಟರು ಅಂಬೇಡ್ಕರ್‌ರವರ ಸಾಮಾಜಿಕ ಕ್ರಾಂತಿಯ ವಾರಸುದಾರರಾಗಿ, ಅಸಮಾನತೆಯನ್ನು ಸುಟ್ಟು ಹಾಕುವ, ಅವಮಾನವನ್ನು ಮೆಟ್ಟಿ ನಿಲ್ಲುವ, ನವ ಸಮಾಜದ ಶಿಲ್ಪಿಯಂತೆ ದಲಿತ ಸಾಹಿತ್ಯ ಒಂದು ನಿಲುವಿಗೆ ಬಂತು. ಈ ಸಾಮಾಜಿಕ ಮನುಷ್ಯ ಜೀವನದಲ್ಲಿ ದಲಿತರಿಗೆ ನೆಮ್ಮದಿ, ನೆಲೆ ಇಲ್ಲ.

ದಲಿತರನ್ನು ಇತರ ಜಾತಿಯವರು ಪಶುವಿಗಿಂತ ಕಡೆಯಾಗಿ ಕಂಡು, ಭಯ ಕಂಪಿತರಾಗುವಂತಹ ವಾತಾವರಣ ಇರುವುದರಿಂದ ದಲಿತರಲ್ಲಿ ಆತ್ಮ ಸ್ಥೈರ್ಯ ತುಂಬುವ ನಿಲುವಿಗೆ ದಲಿತ ಸಾಹಿತ್ಯ ಬೀಜಾಂಕುರ ಮಾಡಿತು. ಅರವಿಂದ ಮಾಲಗತ್ತಿಯವರು "ದಲಿತ ಸಾಹಿತ್ಯ ಕೃತಿಗಳು ವಿಮರ್ಶಕರಿಗೆ ದಲಿತರ ಬದುಕಿನ ಸಾಂಸ್ಕೃತಿಕ ದಾಖಲೆಗಳಾಗಿ, ಸಮಾಜ ಪರಿವರ್ತನೆಯ ಆಯುಧಗಳಾಗಿ, ಅನುಭವದ ತಾಜಾತನ ಅಥವಾ ಅಸಲಿತನದಿಂದ ಕೂಡಿದ ಕೃತಿಗಳಾಗಿ ಕಾಣಿಸಿಕೊಂಡಿದೆ" (ದಲಿತಜ್ಞ , ಅರ್ಜುನಗೊಳಸಂಗಿ (ಸಂ.) , 2000, ಪುಟ 17) ಎಂದು ದಲಿತ ಸಾಹಿತ್ಯ ಕೃತಿಗಳ ನಿಲುವನ್ನು ಸ್ಪಷ್ಟಡಿಸಿದ್ದಾರೆ.



ಸಹಸ್ರಾರು ವರ್ಷಗಳಿಂದಲೂ ಸಮಾಜದಲ್ಲಿ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸವಲತ್ತುಗಳಿಂದ ಅರೆ ತೃಪ್ತರಾಗಿ ಸಂಕಟ, ದುಗುಡ, ದುಮ್ಮಾನಗಳನ್ನು ಹಾಸುಂಡ ದಲಿತರ ಶೋಷಿತ ಜೀವನದ ತೀವ್ರತೆಯನ್ನು ಕಂಡ ದಲಿತ ಸಾಹಿತಿಗಳು ಸ್ವಾಭಿಮಾನ, ಸ್ವಾವಲಂಬನೆ, ಸಹಬಾಳ್ವೆಯನ್ನು ಸ್ವಸಾಮರ್ಥ್ಯದಿಂದ ಸಾಧಿಸಿ ಅನುಭವಿಸಬೇಕೆಂಬ ನಿಲುವಿಗೆ ಬಂದು, ದಲಿತರಲ್ಲಿ ಆತ್ಮಸ್ಥೈರ್ಯ ತುಂಬ ಬೇಕೆಂದು ಕವಿ 'ಸ್ವಾಭಿಮಾನದ ಬೀಡಿಗೆ' ಕವನದಲ್ಲಿ ಈ ರೀತಿ ಅಭಿವ್ಯಕ್ತಿಸಿದ್ದಾರೆ.

ಅಳಿಸೋಣ ಜಗದ ಹಸಿವನು
ನೀಗಿಸೋಣ ಜನರ ದಾಹವನು
ಕಟ್ಟೋಣ ಜ್ಞಾನದ ಗುಡಿಯನು
ಚೆಲ್ಲೋಣ ಜನಕೆ ಬೆಳಕನು

(ಮುನಿವೆಂಕಟಪ್ಪ ವಿ., ಸ್ವಾಭಿಮಾನದ ಬೀಡಿಗೆ, 1996, ಪುಟ 14)

ಇಲ್ಲಿನ ಸಾಲುಗಳಲ್ಲಿ ದಲಿತರು ಪ್ರವರ್ಧಮಾನಕ್ಕೆ ಬಂದು, ಸ್ವಾಭಿಮಾನದ ಜೀವನ ನಡೆಸುವಂತಾಗಬೇಕೆಂಬ ಕವಿಯ ಮನದಾಸೆಯನ್ನು ಕಾಣಬಹುದಾಗಿದೆ. ಅಲ್ಲದೆ ಇದು ಕವಿಯ ಸ್ವಂತ ಅನುಭವದ ನಿಲುವು ಎಂಬುದನ್ನು ತಿಳಿಯಬಹುದಾಗಿದೆ.

ಅಂಬೇಡ್ಕರ್‌ರವರಿಂದ ಪ್ರೇರಣೆ ಪಡೆದ ದಲಿತ ಸಾಹಿತ್ಯಕ್ಕೆ ಹೋರಾಟ, ಅನ್ವೇಷಣೆಗಳೆರಡು ಹೊಸತಾಗಿರಲಿಲ್ಲ. ನಮ್ಮ ಜನರಲ್ಲೂ ಹೊಸತನ ತರಬೇಕು, ಜಾತಿ ತಾರತಮ್ಯದಿಂದ ಹೊರ ಬರುವ ಅವಿಷ್ಕಾರವಾಗಬೇಕೆಂಬ ನಿಲುವಿಗೆ ಬದ್ಧರಾದ ಕವಿ 'ಹಣತೆ' ಪದ್ಯದಲ್ಲಿ ದಲಿತರಿಗೆ ಭರವಸೆ ತುಂಬಿ ಕೊಡುತ್ತ

ಮುಗಿಲೇಳುವ ಜಾತಿ ಉರಿಯ ನಂದಿಸಲು
ಸೌಹಾರ್ದ ಸಮಗೀತೆ ಹಾಡುವ
ಮನಮನದಲಿ ಜಾತಿ ಬೀಜ ತೆಗೆಯಲು
ಸವಿಯಾದ ಮಧುರ ಪ್ರೇಮ ತುಂಬುವ

(ಮುನಿವೆಂಕಟಪ್ಪ ವಿ., ಕಾಡು ಕಣಿವೆಯ ಹಕ್ಕಿ, 1999, ಪುಟ 92)

'ಹಣತೆ' ಎಂಬುದು ಬೆಳಕನ್ನು ಸೂಚಿಸುವ ವಸ್ತು. ಕವಿಯ ಪ್ರಕಾರ ಬರೀ ಮನೆ ಬೆಳಗಿದರೆ ಸಾಲದು. ಮನ–ಮನಗಳನ್ನು ಬೆಳಗಿ, ಮತಾಂಧಕಾರವನ್ನು ತೊಲಗಿಸುವ ನಿಟ್ಟಿನಲ್ಲಿ ಇರಬೇಕೆಂದು ಪ್ರಯತ್ನಿಸಿದ್ದಾರೆ.

ಸಿಟ್ಟು, ಕೋಪ ಕ್ರೌರ್ಯದಿಂದ ಏನನ್ನೂ ಸಾಧಿಸಲಾಗುವುದಿಲ್ಲ. ಆದರೆ ಪ್ರೀತಿ, ವಿಶ್ವಾಸದಿಂದ ಇಡೀ ಜಗತ್ತನ್ನೇ ಗೆಲ್ಲಬಹುದೆಂಬುದು ಕವಿಯ ನಿರ್ಣಯವಾಗಿದೆ.ಆಧುನೀಕರಣದಿಂದ ದಲಿತರ ಬಿಡುಗಡೆ ಸಾಧ್ಯವೆಂಬ ಅಂಬೇಡ್ಕರ್‌ರವರ ಚಿಂತನೆಗಳನ್ನು ಆಧಾರವಾಗಿಟ್ಟುಕೊಂಡ ದಲಿತ ಕಾವ್ಯವು ಕೃತಕವಾದುದ್ದಲ್ಲ. ಅನುಭವ ಜನ್ಯ ಕಾವ್ಯವಾಗಿದ್ದು, ವರ್ಣ ವ್ಯವಸ್ಥೆ ನಿರ್ಮಿಸಿರುವ ಜಾತಿ, ಧರ್ಮ, ದೇವರು, ಸಂಸ್ಕೃತಿ, ಸಾಂಸ್ಕೃತಿಕತೆಯ ಕರಾಳ ಸ್ವರೂಪವನ್ನು ಅನಾವರಣಗೊಳಿಸುವ ಕಡೆ ಕಾವ್ಯದ ವೈಶಿಷ್ಟ್ಯ ಹರಿಯಿತು.

ದಲಿತ ಕಾವ್ಯಗಳ ಸೃಷ್ಟಿಯು, ದಲಿತ ಎನ್ನುವುದು ಒಂದು ಪಂಥವಾಗಿದ್ದು, ಮಾರ್ಗದ ಪ್ರತಿಪಾದನೆಯಾಗಿದೆ ಎಂಬುದನ್ನು ಸಾಬೀತು ಪಡಿಸಿ ಇದು 'ಅಸ್ಪೃಶ್ಯ' ಜಾತಿಯ ಚಿಂತನೆಯಲ್ಲ 'ಅಸ್ಪೃಶ್ಯ' ಸಮುದಾಯದ ಚಿಂತನಾ ಕ್ರಮವೆಂದು ಸಾರುತ್ತದೆ.

ದಲಿತ ಪ್ರಜ್ಞೆ: ದಲಿತ ಪ್ರಜ್ಞೆ ಎಂಬುದು ವ್ಯಕ್ತಿಗೆ ಸಂಬಂಧಿಸಿದ್ದಲ್ಲ. ಒಂದು ಸಮುದಾಯಕ್ಕೆ ಸಂಬಂಧ ಪಟ್ಟಿರುವುದು. ಹಾಗಾಗಿ ಇದರ ಕ್ರಿಯಾಶೀಲತೆಯನ್ನು ಸಾಹಿತ್ಯದ ಉದ್ದಕ್ಕೂ ಕಾಣುತ್ತೇವೆ. ತನ್ನ ಸಮುದಾಯದವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದೇ 'ದಲಿತ ಪ್ರಜ್ಞೆ'ಯ ಆಶಯಗಳಲ್ಲೊಂದು ಸಮುದಾಯದ ಬಗ್ಗೆ ಸ್ವಾಭಿಮಾನ, ಆತ್ಮವಿಶ್ವಾಸ, ತೆಗೆದುಕೊಳ್ಳುವುದು, ಸಾಮಾಜಿಕ ವ್ಯವಸ್ಥೆಯಲ್ಲಿ ದಲಿತರಿಗೆ ಸ್ವಾಭಿಮಾನ ದೊರಕಿಸುವುದು, ಮನುಷ್ಯರಾಗಿ ಬದುಕಲು ಆದ್ಯತೆ ನೀಡುವುದು ದಲಿತ ಸಾಹಿತ್ಯದ ಪ್ರಜ್ಞೆಯಾಗಿದೆ. ದಲಿತ ಸಾಹಿತ್ಯ ಸೇಡನ್ನು ಸಾಧಿಸುವುದಿಲ್ಲ. ಮಾನವನ ಒಲವನ್ನು ಸಾರುವ ಸಾಹಿತ್ಯ. ಹೊಸ ಇತಿಹಾಸ ಸೃಷ್ಟಿಕರಿಸುವುದಷ್ಟೇ ಇದರ ಪ್ರಜ್ಞೆಯಾಗಿದೆ. ದಲಿತ ಪ್ರಜ್ಞೆಯನ್ನು ಕುರಿತು ಅರವಿಂದ ಮಾಲಗತ್ತಿಯವರು "ಒಬ್ಬ ದಲಿತ-ದಲಿತ ಸಾಹಿತ್ಯ ಸೃಷ್ಟಿಗೆ ತೊಡಗಿದಾಗ ಅವನು ಕೇವಲ ದಲಿತನಾಗಿದ್ದರೆ ಸಾಲದು. ಆತನಿಗೆ ದಲಿತ ಪ್ರಜ್ಞೆ ಎನ್ನುವುದು ಇರಬೇಕು. ದಲಿತ ಸಾಹಿತಿ ಕೇವಲ ದಲಿತ ಸಾಹಿತ್ಯವನ್ನು ಮಾತ್ರ ಸೃಷ್ಟಿಸಬಲ್ಲ ಎನ್ನುವುದು ತಪ್ಪು. ಆತ ಸಾರ್ವತ್ರಿಕ ಸಮಸ್ಯೆಗಳಿಗೂ ಸ್ಪಂದಿಸುತ್ತಾನೆ, ಬರೆಯುತ್ತಾನೆ, ಬಂಡೇಳುತ್ತಾನೆ" (ದಲಿತಜ್ಞ , ಅರ್ಜುನಗೊಳಸಂಗಿ (ಸಂ.), 2000, ಪುಟ 165) ಎಂದು ಅಭಿಪ್ರಾಯ ಪಡುತ್ತಾರೆ. ಒಂದು ದಶಕಕ್ಕಿಂತ ಹೆಚ್ಚಾಗಿ ಬೆಳೆದ ದಲಿತ ಸಾಹಿತ್ಯದ ಮೌಲ್ಯವನ್ನು ತೆರೆದಿಟ್ಟಿದ್ದಾರೆ.

ದಲಿತ ಸಾಹಿತಿಗಳು ತಮ್ಮ ಸಮುದಾಯದ ಸಮಸ್ಯೆಗಳಿಗೆ ಸ್ಪಂದಿಸುವ ಜತೆಗೆ, ಉಳ್ಳವರಲ್ಲೂ ಅರಿವನ್ನು ಮೂಡಿಸುವ ಪ್ರಯತ್ನದಲ್ಲಿರ ಬೇಕು. ತನ್ನ 'ಜಾತಿ'ಯ ಏಳಿಗೆಗೆ ಶ್ರಮಿಸುವುದು ಸ್ವಾರ್ಥವಾಗುವುದು. ಇತರ 'ಜಾತಿ'ಯ ಸಮಸ್ಯೆಗಳಿಗೆ ಸ್ಪಂದಿಸುವ ಪ್ರವೃತ್ತಿ ಬೆಳೆಸಿಕೊಳ್ಳಬೇಕು. ದಲಿತ ಪ್ರಜ್ಞೆಯ ವಿಚಾರವಾಗಿ ಕವಯತ್ರಿ 'ಯುಗಾದಿಗೊಂದು ವಿನಂತಿ'ಯಲ್ಲಿ ಹೀಗೆ ಬರೆಯುತ್ತಾರೆ.

ಈ ನೆಲದ ಮಕ್ಕಳ ಸಾಮರಸ್ಯಕೆ
ಅಸ್ತ್ರವೊಂದನು ಹಿಡಿದು ಬಾ
ಪರಧರ್ಮ ಸಹಿಸುವ
ಕೂಡಿ ಬಾಳುವ
ಚಿಂತನೆಯ ಕೆಲಸವನು ಹೊತ್ತು ತಾ

ನಿನ್ನಾಗಮನಕೆ ಹೊಸ ಅರ್ಥ ನೀಡುವ
ಶಪಥವೊಂದನು ತೊಟ್ಟು ಬಾ
(ಲಲಿತಾ ನಾಯಕ್ ಬಿ.ಟಿ., ಒಡಲ ಬೇಗೆ, ಪುಟ 28)

ಇಲ್ಲಿ ಯುಗಾದಿ ಸಂಪ್ರದಾಯದ ಹಬ್ಬವಾಗಿ ಕವಯತ್ರಿಗೆ ಕಂಡು ಬಂದಿಲ್ಲ. ಮಾನವೀಯತೆ ಬದುಕಿನ ಒಂದು ಪಾತ್ರವಾಗಿ, ನತದೃಷ್ಟ ಜನರ ತೀವ್ರ ಸಂವೇದನೆಯಾಗಿ ಈ ಕವಿತೆ ಮೂಡಿ, ಸಾಮಾಜಿಕವಾಗಿರುವ 'ಜಾತಿ' ಅನಿಷ್ಟಗಳನ್ನು ಕುರಿತು ಕಾಳಜಿ ವಹಿಸಿದ್ದಾರೆ. 'ಯುಗಾದಿ' ಕೆಲವರಿಗೆ ತಿಂದು ತೆಗುವ ಹಬ್ಬವಾದರೆ, ಇಲ್ಲಿನ 'ಯುಗಾದಿ' ಮನುಷ್ಯನನ್ನು ಮನುಷ್ಯನ್ನಾಗಿ ಕಾಣುವ ಹಬ್ಬವಾಗ ಬೇಕು, ಹಳೆ ಅನಿಷ್ಟಗಳು ಅಳಿಯ ಬೇಕೆಂಬ ಚಿಂತನೆ ಕವಯತ್ರಿಯಲ್ಲಿ ಮೂಡಿದೆ.

ಒಟ್ಟಿನಲ್ಲಿ ದಲಿತ ಪ್ರಜ್ಞೆ ಎಂಬುದು ದಲಿತ ಪರ ಚಿಂತನೆ ಹಾಗೂ ಕಾಳಜಿಯಾಗಿದೆ. ದಲಿತ ಸಾಹಿತ್ಯದ ಮುಖ್ಯ ಆಶಯವೆಂದರೆ ದಲಿತ ಸಮುದಾಯವನ್ನು ಸಾಮಾಜಿಕ ನ್ಯಾಯ, ಸಮಾನತೆ ಹಾಗೂ ಸಮಾಜದ ಮುಖ್ಯವಾಹಿನಿಗೆ ತರುವುದಾಗಿದೆ. ದಲಿತ ಸಾಹಿತ್ಯವು ಯಾವ ವ್ಯಕ್ತಿ, ಸಾಹಿತ್ಯ ಅಥವಾ ಧರ್ಮದ ವಿರುದ್ಧ ಅಲ್ಲ ಸಮಾನತೆ, ಸೋದರತ್ವವನ್ನು ಸ್ಥಾಪಿಸುವುದೇ ಇದರ ಮೂಲ ಆಶಯವಾಗಿರುವುದಲ್ಲದೆ ಮಾನವೀಯ ಮೌಲ್ಯಗಳನ್ನು ಮಾತ್ರ ಪ್ರತಿಪಾದಿಸುವ ಸಾಹಿತ್ಯವಾಗಿದೆ.

# ಅಧ್ಯಾಯ-4
# ಕನ್ನಡದಲ್ಲಿ ಪ್ರತಿಭಟನಾ ಸಾಹಿತ್ಯದ ಇತಿಹಾಸ

ಪ್ರತಿಭಟನೆ ಎಂದರೆ "ಸಾಮಾಜಿಕ ಅನ್ಯಾಯದ ವಿರುದ್ಧ ದೌರ್ಜನ್ಯವನ್ನು ಅನುಭವಿಸಿದ ಅಥವಾ ದೌರ್ಜನ್ಯವನ್ನು ಗಮನಿಸಿದ ವ್ಯಕ್ತಿ ಇಲ್ಲವೆ ವ್ಯಕ್ತಿ ಸಮೂಹ ವ್ಯಕ್ತಪಡಿಸಿದ ನಿರಪೇಕ್ಷ ಪ್ರತಿಕ್ರಿಯೆಯೇ ಪ್ರತಿಭಟನೆ"(ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಶಿವರುದ್ರಪ್ಪ ಜಿ.ಎಸ್. (ಸಂ.), 1989, ಪುಟ 19) ಎಂದು ಎಂ.ಎಂ ಕಲಬುರ್ಗಿರವರು ಹೇಳುತ್ತಾರೆ. ದೌರ್ಜನ್ಯ ಅಥವಾ ಶೋಷಣೆ ನಡೆದಾಗ ಅದರ ವಿರುದ್ಧ ನೀಡುವ ಪ್ರತಿಕ್ರಿಯೆಯೇ ಪ್ರತಿಭಟನೆಯಾಗುತ್ತದೆ. ಸಾಹಿತ್ಯದ ದೃಷ್ಟಿಯಲ್ಲಿ ಪ್ರತಿಭಟನೆಯ ಸ್ವರೂಪವನ್ನು ನೋಡುವುದಾದರೆ "ಸಂಪ್ರದಾಯ ಮತ್ತು ಪ್ರತಿಭಟನೆಗಳ ನಿರಂತರ ಮತ್ತು ಅನಿವಾರ್ಯ ಪ್ರಯೋಗದಿಂದಲೇ ಸಾಹಿತ್ಯ, ತನ್ನ ಜೀವನವನ್ನು, ಜೀವಂತತೆಯನ್ನು ಪುನಃ ಪುನಹ ಪಡೆದುಕೊಳ್ಳುತ್ತದೆ ಎಂಬುದು ಬದುಕು ಮತ್ತು ಸಾಹಿತ್ಯಗಳ ಸಂದರ್ಭದಲ್ಲಿ ಪೂರ್ಣ ಸತ್ಯ"(ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಶಿವರುದ್ರಪ್ಪ ಜಿ.ಎಸ್. (ಸಂ.), 1989, ಪುಟ 01) ಎಂಬುದು ಚದುರಂಗರ ಅಭಿಮತವಾಗಿದೆ. ಸಮಾಜ ಮುಖಿಯಾಗಿ ಹುಟ್ಟಿಕೊಂಡ ಸಾಹಿತ್ಯದಲ್ಲಿ ಅತೃಪ್ತಿ ಎಲ್ಲೇ ಉಂಟಾದರೂ ಅದರ ವಿರುದ್ಧ ದನಿ ಎತ್ತುವುದೇ ಪ್ರತಿಭಟನೆಯಾಗುತ್ತದೆ.

ಕನ್ನಡ ಸಾಹಿತ್ಯಕ್ಕೆ ಸುದೀರ್ಘವಾದ ಇತಿಹಾಸವಿದೆ. ಈ ಕಾಲಾವಧಿಯಲ್ಲಿ ಹಲವಾರು ಕವಿ ಪುಂಗವರು ಸಾಹಿತ್ಯ ಕೃಷಿ ಮಾಡಿ, ಅನೇಕ ಕೃತಿಗಳನ್ನು ರಚಿಸಿದ್ದಾರೆ. 10ನೇ ಶತಮಾನದಿಂದ ಇಲ್ಲಿಯವರೆಗೂ ಪ್ರಸಿದ್ಧವಾದ ಕೃತಿಗಳನ್ನು ಈ ಪ್ರಬಂಧಕ್ಕೆ ಬಳಸಿಕೊಳ್ಳಲಾಗಿದೆ. ಪ್ರತಿಯೊಂದು ಶತಮಾನದಲ್ಲೂ ಪ್ರಸಿದ್ಧಿ ಪಡೆದಿದ್ದ, ಯುಗ ಪ್ರವರ್ತಕ ಕವಿಗಳ ಕೃತಿಗಳನ್ನು ಮಾತ್ರ ಪರಿಗಣನೆಗೆ ಒಳಪಡಿಸಿಕೊಂಡು ಆ ಕಾಲದಲ್ಲಿ ಕಂಡು ಬಂದ 'ಜಾತಿ' ಶೋಷಣೆ, ಅಸಮಾನತೆ, ಅಸ್ಪೃಶ್ಯತೆಯ ಕಡೆ ಬೆಳಕು ಚಲ್ಲುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಾಯಕ್ಕೆ ಬಳಸಿಕೊಂಡ ಕೃತಿಕಾರರಲ್ಲಿ ಕೆಲವು ಕಡೆ ಸ್ವಂತ ಅನುಭವಗಳು ಅಥವಾ ತಮ್ಮ ಸುತ್ತ-ಮುತ್ತ ನಡೆದ, ತಮಗೆ ಗೋಚರಿಸಿದ ಘಟನೆಗಳನ್ನು ಕೃತಿ ರೂಪದಲ್ಲಿ ತಂದಿರುವುದು ಹಾಗೂ ಇವು ಸಾಹಿತ್ಯ ಪ್ರಪಂಚದಲ್ಲೇ 'ಜಾತಿ'ವಿಷಯವಾಗಿ

ಚರ್ಚೆಗೊಂಡಿರುವುದರಿಂದ ಮತ್ತು ಈ ಕೃತಿಗಳು ಸಮಾಜದ ಬದಲಾವಣೆಯಲ್ಲಿ ಪ್ರಮುಖ ಪಾತ್ರ ವಹಿಸಿರುವುದರಿಂದ ನವೋದಯ ಪೂರ್ವದ ಕೆಲವು ಕನ್ನಡ ಕವಿ ಕೃತಿಗಳನ್ನು ಅವಲೋಕಿಸಲಾಗಿದೆ.

ಕನ್ನಡದಲ್ಲಿ ಸಾಹಿತ್ಯ ಹುಟ್ಟಿಕೊಂಡಾಗಿನಿಂದಲೂ ಪ್ರತಿಭಟನೆ ಎಂಬುದು ಆರಂಭವಾಯಿತು. ಕನ್ನಡದ ಆದಿಕವಿ ಪಂಪ, ಬಸವಣ್ಣ, ಕನಕದಾಸ, ಕುಮಾರವ್ಯಾಸ, ಸರ್ವಜ್ಞ, ಕುವೆಂಪು ಹಾಗೂ ಶಿವರಾಮ ಕಾರಂತರ ಕಾಲದ ಕೆಲವು ಕೃತಿ ಅಥವಾ ಭಾಗಗಳಲ್ಲಿ ದಲಿತರ ಮೇಲೆ ನಡೆದ ಶೋಷಣೆಯನ್ನು, ಶೋಷಣೆಯ ವಿರುದ್ಧ ಪ್ರತಿಭಟನೆಯ ಸ್ವರೂಪವನ್ನು ಹಾಗೂ ದಲಿತರ ಮೇಲೆ ಶೋಷಣೆ ಎಂಬುದು ಪುರಾಣದಿಂದ ಹಿಡಿದು ಈಗಿನ ಶತಮಾನದವರೆಗೂ ನಿರಂತರವಾಗಿದೆ ಎಂಬುದನ್ನು ಗುರುತಿಸಿಕೊಳ್ಳುವುದು ದಲಿತ ಕಾವ್ಯದ ಅಧ್ಯಯನದ ಸಂದರ್ಭದಲ್ಲಿ ಅಗತ್ಯವಾದುದು.

ಪಂಪನ ಪೂರ್ವಿಕರು ಮೂಲತಹ: 'ವೈದಿಕರು'. ಮಂತ್ರ ಸಿದ್ಧಿ ಮಾಡಿಕೊಂಡು ಪ್ರಸಿದ್ಧಿ ಪಡೆದಿದ್ದರು. ಮುತ್ತಜ್ಜ ಮಾಧವ ಸೋಮಯಜಿ ಈ ವೃತ್ತಿಯಲ್ಲಿ ಅಪಕೀರ್ತಿಗೊಂಡಿದ್ದು, ಪಂಪನಿಗೆ ಬೇಸರ ತರಿಸಿದೆ. ಇದರಿಂದ ವೈದಿಕ ಧರ್ಮವನ್ನು ಬಿಟ್ಟು, 'ಜೈನ' ಧರ್ಮಕ್ಕೆ ಸೇರಿಕೊಳ್ಳುತ್ತಾನೆ. ಇವನು ಜೈನ ಧರ್ಮವೇ ನಿರ್ಮಲವಾದ ಧರ್ಮವೆಂದು ಭಾವಿಸಿಕೊಂಡಿರುತ್ತಾನೆ. ಈ ಎರಡು ಧರ್ಮಗಳ ಸಾರವನ್ನು ಕಂಡ ಇವನಿಗೆ ಯಾವುದೂ ಹೆಚ್ಚಲ್ಲ, ಯಾವುದೂ ಕಡಿಮೆಯಲ್ಲ. ಇದನ್ನು 'ಜಾತಿ'ಯ ವಿಚಾರದಲ್ಲೂ ತಿಳಿಸಬೇಕೆಂಬ ಉದ್ದೇಶದಿಂದ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಕರ್ಣನ ಜಾತಿ ನಿಂದನೆಯ ಪ್ರಸಂಗವನ್ನು ಬಳಸಿಕೊಂಡಿದ್ದಾನೆ. ಕರ್ಣ ಇಲ್ಲಿ 'ಜಾತಿ' ಶೋಷಣೆಗೆ ಒಳಗಾಗಲು, ಇವನು ಕ್ಷತ್ರಿಯ ಕುಲದಲ್ಲಿ ಹುಟ್ಟಿದರೂ ಒಳ ಗುಟ್ಟು ಕೆಲವರಿಗೆ ಮಾತ್ರ ತಿಳಿದಿರುತ್ತದೆ. ಆದರೆ ಮೇಲು ನೋಟಕ್ಕೆ ಇವನು 'ಶೂದ್ರ'ನಾಗಿಯೇ ಉಳಿದು ಬಿಡುತ್ತಾನೆ. ಆದ ಕಾರಣ ಕರ್ಣನನ್ನೇ 'ಜಾತಿ' ವಿಷಯದಲ್ಲಿ ವಿಶೇಷವಾಗಿ ಆಯ್ಕೆ ಮಾಡಿಕೊಂಡಿರುತ್ತಾನೆ. ಪಂಪನ ಕರ್ಣನ ಪಾತ್ರ ಕಂಡವರಿಗೆ ಶೋಷಣೆ ಎಂಬುದು ಇಂತಹ ವೀರನನ್ನು ಬಿಟ್ಟಿಲ್ಲವೆಂಬುದನ್ನು ಹಾಗೂ 'ಜಾತಿ' ಎಂಬ ವಿಷಯ ಪ್ರಸ್ತಾಪಿಸಿದಾಗಲೆಲ್ಲ 'ಕರ್ಣ'ನಿಗೆ ಹಿನ್ನಡೆಯಾದದ್ದನ್ನು ಕಾಣುತ್ತೇವೆ.

ಒಟ್ಟು ಭಾರತದಲ್ಲಿ ಕರ್ಣನಿಗೆ ನಾಲ್ಕು ಜನರಿಂದ 'ಜಾತಿ' ಶೋಷಣೆ ನಡೆದಿದ್ದರೂ, ಪಂಪನ ಭಾರತದಲ್ಲಿ ದ್ರೋಣಚಾರ್ಯರು ಮಾಡುವ 'ಜಾತಿ' ನಿಂದನೆ ಬಹಳ ಪರಿಣಾಮಕಾರಿ ಹಾಗೂ ಚರ್ಚೆಗೆ ಗ್ರಾಸವಾದುದು. ಕರ್ಣನ ಕುಲದ ಬಗ್ಗೆ ಮಾತನಾಡುವವರು ತಾವು ಯಾವ ಕುಲದವರು ಎಂದು ತಿಳಿಯದೆ, ಕರ್ಣನ ಕುಲದ ಬಗ್ಗೆ ಮಾತನಾಡುತ್ತಾ, ಕರ್ಣನನ್ನು ಹೀಯಾಳಿಸುತ್ತ ಕಾಲ ಕಳೆದು, ಕರ್ಣನ ಸಾಮರ್ಥ್ಯವನ್ನು ಅರಿಯದವರಾದರು. ಕರ್ಣ ಅರ್ಜುನನ್ನು ಮೀರಿಸುವ ಶಕ್ತಿ ಹೊಂದಿದ್ದ ಎನ್ನುವುದಕ್ಕೆ ಹಸ್ತಿನಾಪುರದಲ್ಲಿ ಅರಸು ಮಕ್ಕಳಿಗೆ ತೋರಿದ ಬಿಲ್ಲು ವಿದ್ಯೆಯೇ ಉತ್ತಮ ಸಾಕ್ಷಿ. ಬಿಲ್ಲು ವಿದ್ಯೆಯಲ್ಲಿ ಎಲ್ಲರೂ ಉಬ್ಬೇರಿಸುವ ಪ್ರದರ್ಶನ ತೋರಿದ ಕರ್ಣ ಅತ್ಯುತ್ತಮ ಬಿಲ್ಲುಗಾರನಾದರೂ ಕುಲದ ವಿಷಯ ಬಂದಾಗ ಕರ್ಣನ ಬಲ ಅಲ್ಲಿ ಕಳೆಗುಂದುವುದು. ಕರ್ಣನ ಪರಾಕ್ರಮವನ್ನು ತಿಳಿದಿದ್ದ ದುರ್ಯೋಧನನೂ ಕುರುಕ್ಷೇತ್ರ ಯುದ್ಧದ ಸಂದರ್ಭದಲ್ಲಿ ಶಕುನಿಯ ಕುತಂತ್ರದಿಂದಲೋ ಅಥವಾ ಹಿರಿಯರು ಎಂಬ ಉದ್ದೇಶದಿಂದಲೋ ಭೀಷ್ಮನಿಗೆ ಪಟ್ಟ ಕಟ್ಟಿದಾಗ, ಕರ್ಣನು ದುರ್ಯೋಧನನ ನಿರ್ಧಾರಕ್ಕೆ ವಿರೋಧವಾಗಿ

ಕಟ್ಟಿದ ಪಟ್ಟಮೆ ಸರವಿಗೆ
ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಿಂಗೆಣೆ ಕ॥
ಣ್ಗೆಟ್ಟ ಮುದುಪಂಗೆ ಪಗೆವರ।
ನಿಟ್ಟೆಲ್ವಂ ಮುರಿವೊಡೆನಗೆ ಪಟ್ಟಂಗಟ್ಟಾ

(ಪಂಪ ಭಾರತಂ ಎಂಬ ವಿಕ್ರಮಾರ್ಜುನ ವಿಜಯಂ– ಪುಟ್ಟಪ್ಪ ಕೆ.ವಿ. (ಪ್ರಸಂ,) 1992, ಪುಟ 251)

ಎಂದು ಪ್ರತಿಭಟಿಸುತ್ತಾನೆ. ಕಣ್ಣು ಕಾಣದ ಮುದುಕನಿಗೆ ಪಟ್ಟ ಕಟ್ಟುವ ಬದಲು ಶತ್ರು ಸೈನ್ಯದ ಬಲವನ್ನು ಮುರಿಯಲು ನನಗೆ ಪಟ್ಟಗಟ್ಟು ಎಂದಾಗ ಸಭಾ ಮಧ್ಯದಲ್ಲಿದ್ದ ದ್ರೋಣರು ಭೀಷ್ಮರ ಪರವಾಗಿ.

ಕುಲಜರನುದ್ಧತರಂ ಭುಜ
ಬಲಯುತರಂ ಹಿತರನೀ ಸಭಾ ಮಧ್ಯದೊಳ॥
ಗ್ಗಲಿಸಿದ ಮದದಿಂ ನಾಲಗೆ।
ಕುಲಮಂ ತುಬ್ಬುವವೊಲುರದೆ ನೀಂ ಕೆಡೆ ನುಡಿವೈ

(ಪಂಪ ಭಾರತಂ ಎಂಬ ವಿಕ್ರಮಾರ್ಜುನ ವಿಜಯಂ– ಪುಟ್ಟಪ್ಪ ಕೆ.ವಿ. (ಪ್ರಸಂ,) 1992, ಪುಟ 251)

ಅಂದರೆ ಕರ್ಣನು ಕುರುವಂಶದ ಅಜ್ಜನಿಗೆ ಮರ್ಯಾದೆ ಕೊಡದೆ ಮುದುಕ ಎಂದು ನಿಂದಿಸಿದ್ದನ್ನು ಕೇಳಿ, ಕೇರಳಿದ ದ್ರೋಣರು ಹೀನ ಕುಲದವನಾದ ನೀನು ಕೊಬ್ಬಿನಿಂದ ಮಾತನಾಡುವೆಯಾ ಎಂದು ಜಾತಿ ನಿಂದನೆ ಮಾಡುತ್ತಾರೆ.

ಇಲ್ಲಿ ದ್ರೋಣರಿಗೆ ಕರ್ಣನ ಬಗ್ಗೆ ಅಸಮಾಧಾನವಾಗಿ, ಜವಾಬು ಕೊಡಲು ಯಾವ ದಾರಿಯು ಇಲ್ಲದೇ ಜಾತಿಯನ್ನು ಎತ್ತಿಕೊಂಡಿದ್ದು ಒಂದು ರೀತಿಯ ಮುಜುಗರದ ವಿಷಯ. ಇದಕ್ಕೆ ಮೂಲವೆಂದರೆ ಕರ್ಣನು ಹೀನಕುಲದಲ್ಲಿ ಹುಟ್ಟಿರುವುದು.ಪಟ್ಟ ಕಟ್ಟುವ ವಿಷಯ ಬಂದಾಗ ಕರ್ಣನ ಉದ್ದೇಶವೇ ಬೇರೆಯಾಗಿತ್ತಾದರೂ ದ್ರೋಣರ ನಡವಳಿಕೆಯಿಂದ ಕಂಗಾಲಾದ ಕರ್ಣ ಇವರಿಗೆ ತಕ್ಕುದಾದ ಉತ್ತರವನ್ನು ನೀಡುತ್ತಾನೆ. ಕುಲ–ಕುಲವೆಂದು ಒದ್ದಾಡುವ ಹಿರಿಯರ ವರ್ತನೆ ಕಂಡು ಕರ್ಣ ಇಡೀ ಮನುಕುಲವೇ ಆಶ್ಚರ್ಯ ಪಡುವಂತೆ ಮಾತನಾಡಿ ದ್ರೋಣರ ಬಾಯಿಯನ್ನು ಮುಚ್ಚಿಸುತ್ತಾನೆ.

> ಕುಲಮನೆ ಮುನ್ನ ಮುಗ್ಗಡಿಪರೇಂಗಳ ನಿಮ್ಮ ಕುಲಂಗಳಾಂತು ಮಾ।
> ರ್ಮಲೆವನನಟ್ಟಿ ತಿಂಬವೆ ಕುಲಂ ಕುಲಮಲ್ತು ಚಲಂ ಕುಲಂಗುಣಂ॥
> ಕುಲಮಭಿಮಾನಮೊಂದೆ ಕುಲಮಣ್ಣ್ಮ ಕುಲಂ ಬಗೆವಾಗಳೀಗಳೀ]।
> ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟು ಮಾಡುಗುಂ॥

(ಪಂಪ ಭಾರತಂ ಎಂಬ ವಿಕ್ರಮಾರ್ಜುನ ವಿಜಯಂ– ಪುಟ್ಟಪ್ಪ ಕೆ.ವಿ. (ಪ್ರ.ಸಂ,) 1992, ಪುಟ 252)

ಕುಲ–ಕುಲವೆಂದು ಒದ್ದಾಡುವ ನೀವು, ನಿಮ್ಮ ಕುಲದ ಮರ್ಮವನ್ನು ತಿಳಿದಿದ್ದೀರಾ ಎಂದು ಪ್ರಶ್ನಿಸಿ, ಕುಲದಲ್ಲಿ ಏನೂ ಇಲ್ಲ, ಛಲವೇ ನಿಜವಾದ ಕುಲ, ಗುಣವೇ ಕುಲ, ಅಭಿಮಾನ ಎಂಬುದೇ ಕುಲ ಎಂದು ಹೇಳಿ ನಿಮ್ಮ ಕುಲದ ಅರಿವು ನಿಮಗೆ ಇದೆಯೇ ಎನ್ನುತ್ತ ಕುಲವೆಂದರೇನೆಂಬುದನ್ನು ದ್ರೋಣನ ಮುಖಕ್ಕೆ ಹೊಡೆದಂತೆ ಹೇಳುತ್ತಾ ಪ್ರತಿಭಟಿಸುತ್ತಾನೆ.

ಪಂಪನ ಕರ್ಣನಿಗೆ ದ್ರೋಣರಿಂದ ಮಾತ್ರ ಜಾತಿ ಶೋಷಣೆಯಾಗದೆ, ಭೀಷ್ಮ ಸಾಯುವವರೆಗೂ ಕರ್ಣ ಯುದ್ಧ ಭೂಮಿಗೆ ಬಾರದಿರುವುದು, ಅಶ್ವತ್ಥಾಮನು ಕರ್ಣ ಯುದ್ಧದಲ್ಲಿ ಅಸುನೀಗುವವರೆಗೂ ಬಿಲ್ಲು ಹಿಡಿಯುವುದಿಲ್ಲವೆಂದು ಶಪಥ ಮಾಡಿದ್ದು ಹಾಗೂ ಮನಸ್ಸಿಲ್ಲದಿದ್ದರೂ ಶಲ್ಯ ಕರ್ಣನಿಗೆ ಸಾರಥಿಯಾದದ್ದು ಸವರ್ಣೀಯರ ದಬ್ಬಾಳಿಕೆಯನ್ನು ಕರ್ಣಅನುಭವಿಸಿದ ಜಾತಿ ಶೋಷಣೆಯ ಚಿತ್ರಣವನ್ನು ಬಿಂಬಿಸುತ್ತದೆ.ಮಹಾಭಾರತವು ಸಹೋದರರ ಕಲಹವಾಗಿದ್ದು,

ತುಂಡು ಭೂಮಿಗೆ ಇಡೀ ಕುರುಕುಲವೇ ಮಣ್ಣು ಪಾಲಾದ ನಿದರ್ಶನವನ್ನು ಮೇಲು ನೋಟಕ್ಕೆ ಕಾಣಬಹುದು. ಆದರೆ ಎಲ್ಲೋ ಒಂದು ಕಡೆ 'ಜಾತಿ' ಎಂಬ ಸೋಂಕು ಮಹಾಭಾರತದ ಹಿರಿಯರಿಗೆ ತಾಗಿ, ಆರದ ಗಾಯದಂತೆ ಕಾಡಿದ್ದು, ಇದಕ್ಕೆ ಬಲಿಪಶುವಾದ ವ್ಯಕ್ತಿ ಕರ್ಣ. ದುರ್ಯೋಧನನ ಆಪ್ತ ಸ್ನೇಹಿತನಾದರೂ 'ಜಾತಿ' ವಿಷಯದಲ್ಲಿ ದುರ್ಯೋಧನನೂ ಅವನ ಪಾಲಿಗೆ ಅಸಹಾಯಕನಾದನು. ಇಲ್ಲಿ ಕರ್ಣ ತನ್ನ ಬಲ, ಪರಾಕ್ರಮದಲ್ಲಿ ಶತ್ರು ಸೈನ್ಯವನ್ನು ಎದುರಿಸುವವನಾಗಿದ್ದರೂ, 'ಜಾತಿ'ಯ ವಿಷಯ ಬಂದಾಗ ಆತನಲ್ಲಿದ್ದ ಶೌರ್ಯ ಮೂಲೆಗುಂಪಾಗುತ್ತಿತ್ತು. ಒಟ್ಟಿನಲ್ಲಿ ಪಂಪನ ಭಾರತವನ್ನು ಗಮನಿಸಿದಾಗ 'ಜಾತಿ' ಶೋಷಣೆಗೆ ಕವಿ ಮನಸ್ಸು ಪ್ರತಿಭಟಿಸುತ್ತಾ ಬಂದಿರುವುದು ತಿಳಿಯುತ್ತದೆ.

12ನೇ ಶತಮಾನದಲ್ಲಿ ಸಾಮಾಜಿಕ ಪ್ರಜ್ಞೆ ಹೆಚ್ಚು ಸೂಕ್ಷ್ಮಗೊಂಡಿದ್ದು, ಹಲವಾರು ಶರಣರು ಅಸಮಾನತೆಯ ವಿರುದ್ಧ ಹೋರಾಡಿದ್ದಾರೆ. ವಚನ ಸಾಹಿತ್ಯವು 12ನೇ ಶತಮಾನದಲ್ಲಿದ್ದ 'ವ್ಯವಸ್ಥೆ'ಯನ್ನು ಪ್ರತಿಭಟಿಸಿದೆ. ಆಗಿನ ಸಮಯದಲ್ಲಿದ್ದ ವರ್ಣ ವ್ಯವಸ್ಥೆ ವೇದ, ಶಾಸ್ತ್ರ, ಪುರಾಣ, ಸ್ಥಾವರ ಪೂಜೆ, ಇತ್ಯಾದಿಗಳನ್ನು ತಿರಸ್ಕಾರ ಮಾಡಲು ಪ್ರತಿಭಟಿಸಲಾಗಿದೆ. ಇದಕ್ಕೆ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಇವರಷ್ಟೇ ಅಲ್ಲದೆ ಸಮಾಜದ ಎಲ್ಲಾ ಜಾತಿಯ ಜನರು ಜೊತೆಯಾಗಿ ನಿಂತರು. "ಸಾಮಾಜಿಕ ಶೋಷಣೆಯನ್ನು ವಚನಕಾರರು ಧಾರ್ಮಿಕ ತಳಹದಿಯಿಂದಲೇ ವಿರೋಧಿಸಿದ್ದರಿಂದ ಶೋಷಣೆ ಮತ್ತು ಧರ್ಮಗಳ ಸೂಕ್ಷ್ಮ ಸಂಬಂಧವನ್ನು ಗುರುತಿಸಲಿಲ್ಲ."(ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಶಿವರುದ್ರಪ್ಪ ಜಿ.ಎಸ್. (ಸಂ), 1989, ಪುಟ 321) ಎಂಬಬರಗೂರು ರಾಮಚಂದ್ರಪ್ಪನವರ ಅಭಿಪ್ರಾಯ ನಿಜವೆನ್ನಿಸಿದರೂ ವಚನಕಾರರು ಸಾಮಾಜಿಕ ಅಸಮಾನತೆ, ಶೋಷಣೆಗಳನ್ನು ಧಾರ್ಮಿಕ ನೆಲೆಗಟ್ಟಿನಲ್ಲೇ ವಿರೋಧಿಸಿದರು. ಇಂತಹ ಸಮಯದಲ್ಲಿ ಬಸವಣ್ಣವರು ಸಾಮಾಜಿಕ ಸಮಸ್ಯೆಯಾದ ಜಾತಿ ವ್ಯವಸ್ಥೆಯನ್ನು ತಮ್ಮ ವಚನದಲ್ಲಿ ಹೀಗೆ ಪ್ರತಿಭಟಿಸುತ್ತಾರೆ.

ಉತ್ತಮ ಮಧ್ಯಮ ಕನಿಷ್ಟವೆಂದು ಬಂದ
ಜಂಗಮನೆಂದನಾದಡೆ। ನೊಂದೆನಯ್ಯಾ
ಬೆಂದನಯ್ಯಾ, ಎನ್ನ ಕಿಚ್ಚು, ಎನ್ನ ಸುಟ್ಟರು

ಸುಖಿ ಜಂಗಮ, ಸಾಮಾನ್ಯ ಜಂಗಮ ಉಂಟೆ
ಕೂಡಲ ಸಂಗಮ ದೇವಾ

(ಒಂದು ಕೊಡ ಹಾಲಿನ ಸಮರ, ಮೂಡ್ನಾಕೂಡು ಚಿನ್ನಸ್ವಾಮಿ, 2008, ಪುಟ 41)

ಎನ್ನುತ್ತಾರೆ. ಈ ಸಾಲುಗಳ ಅರ್ಥದಲ್ಲಿ ಬೆಂಕಿಗೆ ಬಡವ, ಶ್ರೀಮಂತ, ಉತ್ತಮ, ಅಧಮ ಎಂಬ ಭೇದವಿರುವುದಿಲ್ಲ. ಆದರೆ ಮನುಷ್ಯರಾದ ನಾವು ಜಾತಿಯನ್ನು ಸೃಷ್ಟಿ ಮಾಡಿಕೊಂಡು, ಉತ್ತಮ, ಮಧ್ಯಮ, ಕನಿಷ್ಟವೆಂದು ಭೇದತೋರುವುದನ್ನು ಕಂಡು ನೊಂದು, ಬೆಂದಿದ್ದಾರೆ ಎಂಬ ಅರ್ಥವನ್ನು ನೋಡಬಹುದು.

ಬಸವಣ್ಣನವರ ಪ್ರಕಾರ ಜಾತಿಯು ಮನುಷ್ಯ, ಮನುಷ್ಯರನ್ನು ದ್ವೇಷಕ್ಕೆ ಏರಿಸುವ ಶೂಲ. ಇವರು ವಚನ ಸಾಹಿತ್ಯದಲ್ಲಿ ಜಾತಿಯತೆಯನ್ನು ಅಳಿಸುವ ಕಾರ್ಯವನ್ನು ಮಾಡಲು ಮುಂದಾಗಿದ್ದಾರೆ. ಇವರ ಹೋರಾಟ ಇಷ್ಟಕ್ಕೆ ನಿಲ್ಲದೆ "ಜಾತಿವಿಡಿದು ಸೂತಕವನ್ನರಸುವೆ, ಜ್ಯೋತಿ ಹಿಡಿದು ಕತ್ತಲೆಯನ್ನರಸುವೆ, ಇದೇಕೋ ಮರಳು ಮಾನವಾ"(ಒಂದು ಕೊಡ ಹಾಲಿನ ಸಮರ, ಮೂಡ್ನಾಕೂಡು ಚಿನ್ನಸ್ವಾಮಿ, 2008, ಪುಟ 41) ಎಂದು ಜಾತಿ ತಾರತಮ್ಯ ಮಾಡುವ ಜನಾಂಗಕ್ಕೆ ಪ್ರಶ್ನಿಸುವ ಮೂಲಕ ಪ್ರತಿಭಟಿಸುತ್ತಿದ್ದಾರೆ. ಅಂದರೆ ಜಾತಿಯ ಹೆಸರೇಳಿ ವ್ರತ, ಆಚರಣೆ, ಸೂತ್ರ ಎಂದು ನಿಬಂಧನೆಗಳನ್ನು ನಿಮ್ಮ ಮನಸ್ಸಿನಲ್ಲಿ ಸೃಷ್ಟಿಸಿಕೊಂಡ, ನೀವು ಮರುಳರು ಎಂದು ಜಾತಿವಾದಿಗಳನ್ನು ಜರಿದಿದ್ದಾರೆ.

ಬಸವಣ್ಣನವರೇ ತಾನು ಉತ್ತಮ ಕುಲ ಎಂದು ಹೇಳಿಕೊಳ್ಳಲು ಕಷ್ಟವಾಗುತ್ತದೆಂದು ಅಂದಿನ ಉತ್ತಮ ಜಾತಿಯನ್ನು ಪ್ರತಿಭಟಿಸುತ್ತಿದ್ದರು. ಬಸವಣ್ಣನವರು ತಮ್ಮನ್ನು

ಹರನು ಮೂಲಿಗನಾಗಿ, ಪುರಾತರೊಳಗಾಗಿ,
ಬಳಿಬಳಿಯಲು ಬಂದ ಮಾದಾರನ ಮಗ ನಾನಯ್ಯಾ
ಕಳೆದ ಹೊಲೆಯನೆಮ್ಮಯ್ಯ : ಜಾತಿಸೂತಕ.
ಮಾದಾರನ ಮಗ ನಾನಯ್ಯಾ,
ಪನ್ನಗಭೂಷಣ ಕೂಡಸಂಗಯ್ಯಾ,
ಚನ್ನಯ್ಯನೆನ್ನಮುತ್ತಯ್ಯನಜ್ಜನಪ್ಪನಯ್ಯಾ

(ಬಸವೇಶ್ವರ ವಚನದೀಪಿಕೆ, ತಿಪ್ಪೇರುದ್ರಸ್ವಾಮಿ ಎಚ್., 2013, ಪುಟ 210)

'ಜಾತಿ' ಸೂತಕವನ್ನು ಕಳೆಯುವ ಸಾಲುಗಳಿವೆ. ತಮ್ಮನ್ನು 'ಹೀನ' ಕುಲದವರೊಂದಿಗೆ ಸೇರಿಸಿಕೊಂಡು, ಅಂದು ನೆಲೆಯುರಿದ್ದ 'ಜಾತಿ'ಯತೆಯನ್ನು ಪ್ರತಿಭಟಿಸುತ್ತಿದ್ದಾರೆ. 'ಜಾತಿ' ಹೀನ ಎಂದು ಹೀಯಾಳಿಸುವವರಿಗೆ, ಉತ್ತಮ, ಮಧ್ಯಮ, ಕನಿಷ್ಟ ಎಂದು ತಾರತಮ್ಯ ಮಾಡುವವರಿಗೆ ಮೇಲಿನ ಪದ್ಯವು ತಕ್ಕ ಉತ್ತರವನ್ನು ನೀಡುತ್ತದೆ. ಅಂದರೇ ಬಸವಣ್ಣನ ಕಾಲದಲ್ಲಿ 'ಜಾತಿ' ಶೋಷಣೆ ಇತ್ತು. ಇದನ್ನು ಇವರು ವಿರೋಧಿಸುತ್ತಿದ್ದರು ಎಂಬ ಅಂಶ ಬೆಳಕಿಗೆ ಬರುತ್ತದೆ. ಇನ್ನೂ ಮುಂದೆ ಹೋಗಿ

ಸೆಟ್ಟಿಯೆಂಬೆನೆ ಸಿರಿಯಾಳನ?
ಮಡಿವಾಳನೆಂಬೆನೆ ಮಾಚಯ್ಯನ?
ಡೋಹರನೆಂಬೆನೆ ಚನ್ನಯ್ಯನ?
ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯಾ
(ಬಸವೇಶ್ವರ ವಚನದೀಪಿಕೆ, ತಿಪ್ಪೇರುದ್ರಸ್ವಾಮಿ ಎಚ್., 2013, ಪುಟ 209)

ಶಿವನ ಆರಾಧಕನಾಗಿ ನಾನು 'ಜಾತಿ' ಆಧಾರವನ್ನು ಇತರರನ್ನು ಕರೆದರೇ,ಶಿವ ಮೆಚ್ಚವನೆ. ನಾನು ಬ್ರಾಹ್ಮಣನೆಂದು ಹೇಳಿ ಇತರರನ್ನು 'ಹೀನ' ಮಟ್ಟದಲ್ಲಿ ನೋಡಿದರೆ ಕೂಡಲಸಂಗಯ್ಯ ನಗುವನು ಎಂದು ತನ್ನ ಜಾತಿಯನ್ನೇ ಪ್ರತಿಭಟಿಸುತ್ತಿದ್ದಾರೆ.

ಬಸವಣ್ಣನವರ ಹೇಳಿಕೆಗಳನ್ನು ಗಮನಿಸಿದಾಗ ಇವರು ಜಾತಿ ತಾರತಮ್ಯವನ್ನು ಕಿತ್ತು ಹಾಕಬೇಕೆಂಬ ಹಂಬಲದಿಂದ ಧಾರ್ಮಿಕತೆಯ ಹಾದಿ ಹಿಡಿದು, ಸಾಮಾಜಿಕ ಬದಲಾವಣೆಯನ್ನು ತರಲು ಮುಂದಾದರು ಎಂಬುದು ತಿಳಿದುಬರುತ್ತದೆ. "ಜನರಿಗಾಗಿ ಧರ್ಮವಿರುತ್ತದೆಯೇ ಹೊರತು ಧರ್ಮಕ್ಕಾಗಿ ಜನರಿರುವುದಿಲ್ಲ"(ಒಂದು ಕೊಡ ಹಾಲಿನ ಸಮರ, ಮೂಡ್ನಾಕೂಡು ಚಿನ್ನಸ್ವಾಮಿ, 2008, ಪುಟ 41) ಎಂಬುದು ಬಸವಣ್ಣನವರ ನಂಬಿಕೆಯಾಗಿತ್ತು.

ಅವರ ಕಾಲದಲ್ಲೂ ದಲಿತರು ಶೋಷಣೆ, ಅವಮಾನ, ಅಸಮಾನತೆಯನ್ನು ಎದುರಿಸಿ, ಆತ್ಮ ಗೌರವಕ್ಕೆ ಧಕ್ಕೆಯಾಗಿ, ಇತರ ಜಾತಿಗಳಿಂದ ತಿರಸ್ಕೃತವಾಗಿ ಪಶು ಪ್ರಾಣಿಗಳಿಗಿಂತ ಹೀನಾಯವಾಗಿ ಜೀವನ ಸಾಗಿಸಿದ್ದಾರೆ. ಸಮಾಜದಲ್ಲಿನ ಕ್ರೂರತ್ವದ ನಡುವೆ ದಲಿತರ ಬದುಕನ್ನು ಬದಲಾವಣೆ ಮಾಡುವಲ್ಲಿ ಬಸವಣ್ಣನವರು ವಿಫಲತೆ ಕಂಡಿದ್ದರೂ, ಇವರ ಕಾಲದಲ್ಲಿ ಮನುಷ್ಯನನ್ನು ಮನುಷ್ಯನನ್ನಾಗಿ ಕಾಣುವ ಪ್ರಯತ್ನ ಮಾಡಿರುತ್ತಾರೆ.

ಆದ್ದರಿಂದಲೇ ವಚನ ಸಾಹಿತ್ಯದ ಕಾಲಾವಧಿಯಲ್ಲಿ ಬರುವಪ್ರತಿಯೊಂದು ಜಾತಿಯವರಿಗೂ ಸಾಹಿತ್ಯ ರಚಿಸಲು ಅವಕಾಶ ಮಾಡಿಕೊಟ್ಟು ಜಾತಿಯ ವಿರುದ್ಧ ಒಂದು ಕ್ರಾಂತಿಯ ಅಲೆ ಎಬ್ಬಿಸಿದರು.

ಕನಕದಾಸರು ದಾಸ ಸಾಹಿತ್ಯದ ಕ್ರಾಂತಿ ಕವಿ. ಮೂಲತಃ ಕುರುಬ ಜನಾಂಗದವರಾಗಿ, ವಿಜಯನಗರ ಸಾಮ್ರಾಜ್ಯದಲ್ಲಿ ಮಾಂಡಲಿಕರಾಗಿದ್ದರು. ಇವರು ಉತ್ತಮ ವ್ಯವಹಾರ ಕುಶಲರು ಹಾಗೂ ಕಾವ್ಯಭ್ಯಾಸದಿಂದ ಜ್ಞಾನಿಯಾಗಿದ್ದರೂ ಇತರ ಜಾತಿಯವರು ಕನಕದಾಸರನ್ನು ಕೀಳುಜಾತಿಯವನೆಂದು ಜರಿದು.

ಸಹಾನುಭೂತಿ, ಕನಿಕರವನ್ನು ತೋರದೆ, ಕುರುಬ ಎಂದು ಜಾತಿಯ ಹೆಸರಿಡಿದು, ಬೈದು, ಅಣಕಿಸಿದರ ಪರಿಣಾಮ ತಮ್ಮ ಸಾಧನೆಯ ಹಾದಿಯಲ್ಲಿ ಹೆಚ್ಚು ಕಷ್ಟ ನೋವುಗಳನ್ನು ಅನುಭವಿಸಬೇಕಾಗಿ ಬಂತು. ಇಂತಹ ತೊಂದರೆಗಳನ್ನು ಎದುರಿಸಿದ ಕನಕದಾಸರು ಹೀನ ಕುಲದವರ ಕಷ್ಟ, ಕಾರ್ಪಣ್ಯವನ್ನು ತಮ್ಮ ಕೃತಿ 'ರಾಮಧಾನ್ಯ ಚರಿತೆ'ಯಲ್ಲಿ ಹಿಡಿದಿಟ್ಟದ್ದಾರೆ. ಕನಕದಾಸರು ಮೂಲತಹ 'ಕುರುಬ'ರಾಗಿದ್ದರೂ, ಇದೇ ಕಾಲದಲ್ಲಿ ಇವರಿಗೆ ಎದುರಾದ 'ಜಾತಿ' ಸಮಸ್ಯೆಯನ್ನು ವಿವರಿಸುವ ಕೃತಿಗಳು ಮೂಡಿ ಬಂದಿವೆ. ಇವರ ಹೆಸರಾಂತ ಕೃತಿಯಾದ 'ರಾಮಧಾನ್ಯ ಚರಿತೆಯು 'ಜಾತಿ' ವ್ಯವಸ್ಥೆಯ ಕಟ್ಟು ಪಾಡಿರುವ ಕೃತಿಯಾಗಿದ್ದು, ತಮಗೆ 'ವ್ಯವಸ್ಥೆ'ಯಿಂದಾದ 'ಜಾತಿ' ಶೋಷಣೆಯನ್ನು 'ರಾಗಿ' ಮತ್ತು 'ಭತ್ತ'ದ ಸಂಘರ್ಷದೊಂದಿಗೆ ಭಿತ್ತರಿಸಿದ್ದಾರೆ. ಇದೊಂದು 'ಶೂದ್ರ' ಪ್ರಜ್ಞೆ ಇರುವ ಕೃತಿಯಾಗಿದ್ದರೂ, 'ದಲಿತ' ಸಂವೇದನೆಯ ಅಂಶಗಳನ್ನು ಕಾಣಬಹುದಾಗಿದೆ.

ಇಲ್ಲಿನ 'ರಾಗಿ-ಭತ್ತ'ಗಳು ಮೇಲ್ನೋಟದ ಉದಾಹರಣೆಗಳು. ಆದರೆ ಆ ಕಾಲದಲ್ಲಿ ಎದ್ದ ಆರ್ಥಿಕ, ಸಾಮಾಜಿಕ, ಅಸಮಾನತೆ, ಕೆಳ, ಮೇಲು ಜಾತಿಗಳ ತಾರತಮ್ಯದಿಂದ ಹೀನ ಜನರು ಹಲವಾರು ಶತಮಾನಗಳಿಂದಲೂ ನೋವು, ಸಂಕಟ, ಅಪಮಾನಗಳನ್ನು ಅನುಭವಿಸುತ್ತಿರುವುದನ್ನು ಹಾಗೂ ಕನಕ ದಾಸರು ತಮ್ಮ ಸ್ವತ: ಅನುಭವದ ಹಲವು ಜಲ್ವಂತ ಸಮಸ್ಯೆಗಳು ಇಲ್ಲಿ ದಾಖಲಿಸಿರುವುದು ಕಂಡು ಬರುತ್ತದೆ. ರಾಮ ಗೌತಮ ಮುನಿಯ ಆಶ್ರಮಕ್ಕೆ ಬಂದು, ಅಲ್ಲಿ ಹಲವು ಬಗೆಯ ಭಕ್ಷ್ಯಗಳನ್ನು ಸೇವಿಸಿ, ಇದರಲ್ಲಿ ಉತ್ತಮ ಧಾನ್ಯ ಯಾವುದೆಂದು ಗೌತಮರನ್ನು ಕೇಳಿದಾಗ 'ಗೌತಮರು ಒಂದೇ

ಮಾತಿನಲ್ಲಿ ರಾಗಿಯೇ ಶ್ರೇಷ್ಠ' ಎಂದಾಗ, ಭತ್ತದ ವಾದದೊಂದಿಗೆ ಕಥೆ ಆರಂಭವಾಗುತ್ತದೆ.

ಎಲ್ಲ ಧರ್ಮದ ಸಾರವನು ನೀವ್
ಬಲ್ಲಿರರಿಯದೆಯೆಲ್ಲರನು ನೀ
ವಿಲ್ಲಿ ನುಡಿವ ಯುಪೇಕ್ಷೆ ಯುಂಟೇ ಸಾಕದಂತಿರಲಿ
ನೆಲ್ಲು ನಾನಿರೆ ಗೋಧಿ ಮೊದಲಾ
ದೆಲ್ಲ ಧಾನ್ಯಗಳಿರಲುಯಿದರಲಿ
ಬಲ್ಲಿದನು ನರೆದಲೆಗ ನೆಂಬುದಿದಾವ ಮತವೆಂದ

(ರಾಮಧಾನ್ಯ ಚರಿತ್ರೆ, ಜವರೇಗೌಡ ದೇ. (ಸಂ.), 2005, ಪುಟ 33)

ಇದು ಗೌತಮನ ಹಾಗೂ ರಾಗಿಯ ವಿರುದ್ಧವಾಗಿ 'ಭತ್ತ' ಮಾತನಾಡುತ್ತದೆ. ಇಲ್ಲಿ 'ಭತ್ತ' ರಾಗಿಯನ್ನು ನೇರವಾಗಿ ಶೋಷಿಸುತ್ತಿರುವುದು ಕಂಡು ಬರುತ್ತದೆ. ಭತ್ತದ ದೃಷ್ಟಿಯಲ್ಲಿ 'ರಾಗಿ' ಎಂಬುದು 'ಅಯೋಗ್ಯ'ವಾದ ವಸ್ತುವಿನಂತೆ. ಮುಂದುವರೆದ ಭತ್ತವು

ಏನೆಲವೊ ನರೆದಲೆಗ ನೀನು ಸ
ಮಾನನೇ ಯೆನಗಿಲ್ಲಿ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ
ಜಾನಕೀಪತಿಯನಿಹದಲಿಕುಲ
ಹೀನ ನೀನು ಪ್ರತಿಷ್ಠ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಭಂಗಿಸಿದ

(ರಾಮಧಾನ್ಯ ಚರಿತ್ರೆ, ಜವರೇಗೌಡ ದೇ. (ಸಂ.), 2005, ಪುಟ 33)

ಇಲ್ಲಿ 'ಜಾತಿ' ಶೋಷಣೆ ಮಾಡಿರುವ ಅಂಶಗಳು ಕಂಡು ಬರುತ್ತವೆ. ಇಲ್ಲಿನ ಸಾಲುಗಳಲ್ಲಿ 'ರಾಗಿ' ಹೀನ ಜಾತಿ ಎಂಬುದು ಸಾಬೀತಾಗಿದೆ. ಅಂದರೆ ಅಂದಿನ ಕಾಲದಲ್ಲಿ 'ಹೀನ' ಜಾತಿಯವರು ಉತ್ತಮರ 'ಸಮ' ನಿಲ್ಲುವ ಯೋಗ್ಯತೆಯನ್ನು ಕಳೆದುಕೊಂಡಿದ್ದರು ಎಂಬ ಅಂಶಗಳು ಇಲ್ಲಿ ಕಂಡು ಬರುತ್ತದೆ. ಅಂದರೆ ದಲಿತರು ಉತ್ತಮರ ಸಹವಾಸಕ್ಕೆ 'ಅಯೋಗ್ಯ'ರಾಗಿದ್ದರು. ಮೇಲಿನ ಹೀಯಾಳಿಕೆಗೆ ರಾಗಿಯು ಭತ್ತದ ವರ್ತನೆಯನ್ನು ತಿಳಿಸುತ್ತ

ಸತ್ಯಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ

ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗೆ
ಪಥ್ಯ ನೀನಹೆ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕವೆಂದ
(ರಾಮಧಾನ್ಯ ಚರಿತ್ರೆ, ಜವರೇಗೌಡ ದೇ. (ಸಂ.), 2005, ಪುಟ 35)

ಇದು ಭತ್ತವನ್ನು ಅಂದರೆ ಉತ್ತಮ ಕುಲದವರನ್ನು ಪ್ರತಿಭಟಿಸುವ ಸಾಲುಗಳಾಗಿವೆ. ಸಮಾನತೆಗಾಗಿ ಹಂಬಲಿಸುವವರು 'ದರ್ಪ' ಮಾಡುವವರ ವಿರುದ್ಧ ಸಿಡಿದೇಳುವ ಸಹಜ ಪ್ರತಿಕ್ರಿಯೆಯನ್ನು ಮೇಲಿನ ಸಾಲುಗಳಲ್ಲಿ ಕಂಡು ಬರುತ್ತದೆ. ಇನ್ನಷ್ಟು ಮುಂದುವರಿದ ರಾಗಿ ಸಮಾನತೆಯನ್ನು ಸಾರುವ ಸಾಲುಗಳನ್ನು ಭತ್ತಕ್ಕೆ ಹೀಗೆ ಒಡ್ಡುತ್ತದೆ.

ಬಲ್ಲಿದರು ಬರೆ ಬಡವರಲಿ ನಿ
ನ್ನಲ್ಲಿಯುಂಟುವುಪೇಕ್ಷೆ ನಮ್ಮಲಿ
ಸಲ್ಲಿದೀ ಪರಿ ಪಕ್ಷಪಾತವದಿಲ್ಲ ಭಾವಿಸಲು
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲ ಕುಟಿಲಾತ್ಮ ಹೋಗೆಂದ
(ರಾಮಧಾನ್ಯ ಚರಿತ್ರೆ, ಜವರೇಗೌಡ ದೇ. (ಸಂ.), 2005, ಪುಟ 36)

ಇದು ಸಮಾನತೆಗೆ ಎಡೆ ಕೊಡುವ ಸಾಲುಗಳು. ಎಲ್ಲಾ ವರ್ಗದ ಮನುಷ್ಯರು ಒಂದೇ. ನನಗೆ ಮೇಲು, ಕೀಳು ಎಂಬ ಬೇಧ,ಭಾವವಿಲ್ಲ ಎಂಬ ಅಂಶವನ್ನು ರಾಗಿ ಭತ್ತಕ್ಕೆ ಹೇಳುತ್ತ, ಅಂದಿನ 'ಜಾತಿ' ತಾರತಮ್ಯವನ್ನು ಪ್ರತಿಭಟಿಸುತ್ತಿದೆ. ಒಟ್ಟಿನಲ್ಲಿ ಈ ಕೃತಿಯು ಮೇಲು ನೋಟಕ್ಕೆ ವರ್ಣ ತಾರತಮ್ಯವನ್ನು ಸಾರಿದರು. ರಾಗಿಯ ಮೂಲಕ ವರ್ಣ ಪ್ರಧಾನವಲ್ಲ, ಮನುಷ್ಯನ 'ಭಾವ'ವೇ ಪ್ರಧಾನವೆಂದು ಹಾಗೂ 'ಜಾತಿ' ಬಿಟ್ಟರೇ ಆರೋಗ್ಯವಂತ ಸಮಾಜ ನಿರ್ಮಾಣ ಸಾಧ್ಯವೆಂದು ಸಾರಿದ್ದಾರೆ. ಈ ಮೇಲಿನ ಲೇಖನದಲ್ಲಿ ಮೊದಲು ಭತ್ತ ರಾಗಿಯನ್ನು ನಿಂದಿಸುವ ಚಿತ್ರಣ, ನಂತರ ರಾಗಿ ಭತ್ತವನ್ನು ಪ್ರತಿಭಟಿಸುವ ಅಂಶಗಳಿವೆ. ಬ್ರಾಹ್ಮಣ, ಶೂದ್ರರ ನಡುವಿನ ಹೋರಾಟದ ರೂಪಕ ಇದಾಗಿದೆ. 'ದಲಿತ' ಎಂಬ ಪದವು ಬಹಳ ಹಿಂದಿನ ಕಾಲಗಳಿಂದಲೂ ಇದ್ದು, ಇವರನ್ನು ಉತ್ತಮ ವರ್ಗದವರು ಬಹಳ ಹೀನವಾಗಿ, ಕಾಲ ಕಸದಂತೆ ತಿಳಿದು, ಪ್ರಾಣಿಗಳಿಗಿಂತ ಕಡೆಯಾಗಿ ಕಂಡರು ಎಂಬುದು ಸ್ಪಷ್ಟವಾಗುವುದರ ಜೊತೆಗೆಕನಕದಾಸರಿಗೂ

ದಲಿತರ ಬವಣೆ ಅರ್ಥವಾಗಿ ಜಾತಿ ವ್ಯವಸ್ಥೆಯ ವಿರುದ್ಧ ಕೀಳು ಜಾತಿಯವರ ಪ್ರತಿನಿಧಿಯಾಗಿ ನರೆದಲೆಗದ ಮೂಲಕ ಪ್ರತಿಭಟನೆಯ ಖಡ್ಗವನ್ನು ಝುಳಪಿಸಿದ್ದಾರೆ.ಕನಕದಾಸರು ತಮ್ಮ ಕೃತಿಯಲ್ಲಿ ರಾಗಿಯನ್ನು ಹೀನ ಕುಲವಾಗಿಸಿ, ನೆಲ್ಲನ್ನು ಉತ್ತಮ ಕುಲವಾಗಿಸಿಕೊಂಡು, ಹೀನ ಕುಲದವರ ಮೇಲಾದ ಶೋಷಣೆಯನ್ನು ಸ್ಪಷ್ಟ ಪಡಿಸಿದ್ದಾರೆ. ರಾಗಿಯು ಉತ್ತಮ ವರ್ಗವಾದ ನೆಲ್ಲಿನ ಮುಂದೆ ಗೆಲುವು ಪಡೆಯಲು ಹರ ಸಾಹಸವನ್ನೇ ಮಾಡಬೇಕಾಗುತ್ತದೆ.

ಇದು ಸವರ್ಣೀಯರ ವ್ಯವಸ್ಥೆಗೆ ಶೂದ್ರನಾದವನು ನೀಡಿದ ಉತ್ತರವೂ ಆಗಿದೆ. ಉತ್ತಮ ಕುಲದ ಸ್ಥಾನದಲ್ಲಿ ನಿಂತ ನೆಲ್ಲು ದಲಿತರನ್ನು ಕುರಿತು ಹೀಯಾಳಿಸುವಂತೆ ರಾಗಿಯನ್ನು ಹೀಯಾಳಿಸುತ್ತದೆ. ಅಂದರೆ ಬ್ರಾಹ್ಮಣರ ಉಪನಯನಕ್ಕೆ, ದೇವರ ವ್ರತದ ಭೋಜನಕ್ಕೆ, ಮಂತ್ರಾಕ್ಷತೆಗೆ, ದೇವರ ಪ್ರಸಾದಕ್ಕೆ, ಹೊಸ ಮನೆಯ ಪುಣ್ಯಾರ್ಚನೆಗೆ, ಮಧು ಮಕ್ಕಳಿಗೆ, ಗಂಧಾಕ್ಷತೆಗೆ, ನನ್ನನ್ನು ಬಿಟ್ಟರೆ ಗತಿಯಿಲ್ಲವೆಂದು ಮನ ಬಂದಂತೆ ರಾಗಿಯನ್ನು ನಿರ್ಧಾಕ್ಷಿಣ್ಯವಾಗಿ ನಿಂದಿಸುತ್ತದೆ.

ಕೆಳ ಕುಲದ ಪ್ರತಿನಿಧಿಯಾದ ರಾಗಿಯು ನೆಲ್ಲಿನ ಉದ್ಧಟತನಕ್ಕೆ ಪ್ರತಿ ಉತ್ತರವನ್ನು ನೀಡುತ್ತಾ, 'ಹೆಣದ ಬಾಯಿಗೆ ತುತ್ತು ನೀನಹೆ' ಎಂದು ಪ್ರತಿಭಟಿಸುತ್ತದೆ. ಅಂದರೆ ಬಡವರ ಪಾಲಿಗೆ ನೀನು ದುಬಾರಿಯಾಗಿ, ಅವರತ್ತ ನೋಡದೆ, ಬಾಣಂತಿಯರಿಗೆ ವಿಷವಾಗಿ, ಸತ್ತವರ ಬಾಯಿಗೆ ತುತ್ತಾಗಿರುವ ನೀನು ಸತ್ಯ ಹೀನನು ಎಂದು ಜರಿಯುತ್ತದೆ. ಉತ್ತಮ ಕುಲದವರು ತಮ್ಮ ಸಂಬಂಧಗಳನ್ನು ಬರೀ ಉತ್ತಮ ಕುಲದವರೊಂದಿಗೆ ಬೆಸೆದುಕೊಂಡು, ಮಾನವೀಯತೆಯನ್ನು ಮರೆತು, ಬಡವರನ್ನು ಕಂಡರೆ ಸಿಡುಕುವ ಸಂದರ್ಭಗಳು ಇಲ್ಲಿ ವ್ಯಕ್ತವಾಗಿದೆ.ಅನ್ನ ಎನ್ನುವುದು ಬಡವರ ಪಾಲಿಗೆ ಮರಿಚಿಕೆಯಾಗಿದ್ದು, ಬರೀ ಶ್ರೀಮಂತರ ವಸ್ತುವಾಗಿರುವುದರ ಬಗ್ಗೆ ರಾಗಿಯು ಭತ್ತವನ್ನು ಹೀನ ಎಂದು ಪ್ರತಿಭಟಿಸಿ, ಕಟು ಸತ್ಯವನ್ನು ದಿಟ್ಟತನದ, ಉತ್ಸಾಹದಿಂದ ರಾಗಿಯು ನೆಲ್ಲಿಗೆ ಪ್ರತ್ಯುತ್ತರವನ್ನು ನೀಡುತ್ತದೆ. ಅಂದರೆ ಕ್ಷಾಮಗಾಲದಲ್ಲಿ, ಬರಗಾಲದಲ್ಲಿ ಆಹಾರವಿಲ್ಲದ ಪ್ರಾಣಿ, ಪಕ್ಷಿ, ಮನುಷ್ಯರಿಗೆ ನಾನು ಆಹಾರವಾಗಿ, ಬಡವ–ಶ್ರೀಮಂತರನೆನ್ನದೆ ಎಲ್ಲರನ್ನು ಏಕರೀತಿಯಲ್ಲಿ ರಕ್ಷಿಸುವೆ ಎಂಬ ಮಾನವೀಯತೆಯ ಕರ್ತವ್ಯಗಳನ್ನು ಹೇಳುವುದರ ಜತೆಗೆ ಮೇಲ್ವರ್ಗದವರ ಅಧರ್ಮದ ಕೃತ್ಯವನ್ನು ಪ್ರತಿಭಟಿಸುತ್ತದೆ.

ಒಟ್ಟಾರೆಯಾಗಿ ಕನಕದಾಸರು ತಮ್ಮ ಕಾಲದಲ್ಲಿ ಸಮಾಜದ ಉತ್ತಮ ಜನರಿಂದ, ಹೀನ ಕುಲದವರು ಅನುಭವಿಸಿದ ಕಷ್ಟಗಳನ್ನು, ಬಾಧೆಗಳನ್ನು, ತಮ್ಮ ಕೃತಿ 'ರಾಮಧಾನ್ಯ ಚರಿತ'ದ ಮೂಲಕ ಹೊರ ತಂದು, ಸಾಮಾಜಿಕ ಜಗತ್ತಿನ ವಿಡಂಬನೆಯನ್ನು ಮಾಡಿದ್ದಾರೆ.

ಕುಮಾರವ್ಯಾಸ ಭಾರತದಲ್ಲಿ ಬರುವ ಎಲ್ಲಾ ಪಾತ್ರಗಳು ತನ್ನದೇ ಆದ ತೇಜಸ್ಸನ್ನು ಹೊಂದಿದ್ದು, ಇದರಲ್ಲಿ 'ಕರ್ಣ' ಎಂದಾಕ್ಷಣ ನೆನಪಾಗುವುದು ಮಹಾಭಾರತದ ಯುದ್ಧದಲ್ಲಿ ದುರ್ಯೋಧನನ ಬಲಗೈ ಬಂಟನಾಗಿ ವೀರಾವೇಷಾದಿಂದ ಹೋರಾಡಿದ ಧೀಮಂತ ವ್ಯಕ್ತಿಯೆಂಬುದು. ಅರ್ಜುನನಿಗಿಂತ ಪರಾಕ್ರಮಿ ಉದಾರಿಯಾಗಿ ಮೆರದವನಿಗೆ ಪ್ರತಿಯೊಂದು ಹೆಜ್ಜೆಯಲ್ಲೂ ಅಪಮಾನ, ಅನ್ಯಾಯವಾಗುತ್ತಿದ್ದರೂ ಅದನ್ನೆಲ್ಲ ಸಹಿಸಿಕೊಂಡು ತಾಳ್ಮೆಯಿಂದ ಜೀವನ ನಡೆಸುವ ಧೈರ್ಯ ಕರ್ಣನಿಗಿತ್ತು. ಆದ್ದರಿಂದಲೇ ಮಹಾಭಾರತದ ಯಾವುದೇ ವ್ಯಕ್ತಿಯನ್ನು ಕರ್ಣನಿಗೆ ಹೋಲಿಕೆ ಮಾಡುವುದು ಕಷ್ಟ ಸಾಧ್ಯ.

ಗದುಗಿನ ಭಾರತದಲ್ಲಿ ಕರ್ಣನನ್ನು ಜಾತಿ ಶೋಷಣೆಗೆ ಒಳಪಡಿಸಿದ ಮೊದಲ ವ್ಯಕ್ತಿ ಪರಶುರಾಮ. ಬಿಲ್ಲು ವಿದ್ಯೆ ಕಲಿಯುವ ಉತ್ಕಟೇಚ್ಛೆಯಿಂದ ಪರಶುರಾಮರಲ್ಲಿ 'ಕ್ಷತ್ರಿಯ' ಎಂದು ಸುಳ್ಳು ಹೇಳಿ ವಿದ್ಯೆ ಕಲಿಯುತ್ತಾನೆ. ಇದನ್ನು ತಿಳಿದ ಪರಶುರಾಮರು ಕರ್ಣನಿಗೆ ಶಾಪ ಕೊಡುತ್ತಾರೆ. ಇದಕ್ಕೆ ಮೂಲ ಕಾರಣ ಕರ್ಣನು ಹೀನಕುಲದವನಾಗಿದ್ದು ಪರಶುರಾಮರು ಬ್ರಾಹ್ಮಣ ಕ್ಷತ್ರೀಯರಿಗೆ ಪ್ರಿಯರಾಗಿ ಹೀನ ಕುಲದವರಿಗೆ ಪರಮ ವೈರಿಯಾಗಿರುತ್ತಾರೆ.ಪರಶುರಾಮರ ಶಾಪ ಅಥವಾ ಶಿಕ್ಷೆಗೆ ಒಳಗಾದ ಕರ್ಣನಿಗೆ ತಾನು ಹೀನಕುಲದವನು ಎಂದು ತಿಳಿದಿದ್ದರೂ, ಕ್ಷತ್ರಿಯ ಎಂದು ಸುಳ್ಳು ಹೇಳುವ ಮನಸ್ಸು ಮಾಡಲು ಕಾರಣ ಅವನಲ್ಲಿದ್ದ ಬಿಲ್ವಿದ್ಯೆಯ ದಾಹ. ಅಂದರೆ ಪ್ರತಿಭಾನ್ವಿತರಿಗೆ 'ಜಾತಿ' ಎಂಬುದು ಒಂದು ಶಾಪವಾಗಿತ್ತು ಎಂಬ ಅಂಶವು ಪರಶುರಾಮ ಮತ್ತು ಕರ್ಣನ ಸಂಬಂಧದಿಂದ ಸ್ಪಷ್ಟವಾಗಿದೆ.ಕರ್ಣನ ಜನ್ಮ ವೃತ್ತಾಂತವು ಕೃಷ್ಣನ ಕುಟಿಲೋಪಾಯದಿಂದ ಬಯಲಾಯಿತು ಎನ್ನುವುದಕ್ಕೆ ಕರ್ಣನೆ

ಭೇದದಲ್ಲಿ ಹೊಕ್ಕಿರಿದನೋ ಮಧು
ಸೂದನನು ತಾನಕಟನುತ ಘನ ಚಿಂ
ತೋದಧಿಯಲದ್ದವೊಲು ಮೌನದೊಳಿದ್ದನಾ ಕರ್ಣ

(ಕರ್ಣಾಟ ಭಾರತ ಕಥಾ ಮಂಜರಿ, ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ), 1988 ಪುಟ 342)

ಎನ್ನುತ್ತಾನೆ. ಕೃಷ್ಣ, ಕರ್ಣನ ಪರಾಕ್ರಮಕ್ಕೆ ಹೆದರಿ, ಇವನ ಬಳಿ ಬಂದು ಸಂಧಿ ಮಾಡಿಕೊಳ್ಳುವ ಸಲುವಾಗಿ ನೀನು ಸೂತ ಕುಲದವನಲ್ಲ, ಸೂರ್ಯ ಪುತ್ರ. ನೀನು ಕುಲದಲ್ಲಿ ಕ್ಷತ್ರಿಯ, ಕುಂತಿ ನಿನ್ನ ತಾಯಿ, ಪಾಂಡವರು ನಿನ್ನ ಸಹೋದರರು ಎಂಬ ರಹಸ್ಯವನ್ನು ಬಯಲು ಮಾಡಿದಾಗ ಕರ್ಣನು, ಕೃಷ್ಣ ನನ್ನ ಕುಲದ ರಹಸ್ಯವನ್ನು ಹೇಳಿ ನನ್ನಲ್ಲಿದ್ದ ರೋಷದ ಬೆಂಕಿಯನ್ನು ನಂದಿಸಿದ ಎಂದು ಮರುಗುತ್ತಾನೆ.

ಕರ್ಣನಿಗೆ 'ಜಾತಿ' ಶೋಷಣೆ ನೀಡುವಲ್ಲಿ 'ಕೃಷ್ಣ'ನ ಪಾತ್ರವು ಪ್ರಧಾನವಾಗಿರುತ್ತದೆ. ಪಾಂಡವರನ್ನು ಗೆಲ್ಲಿಸಲು, ಅವರಿಗೆ ಇನ್ನಷ್ಟು ಬಲ ತುಂಬುವ ಸಲುವಾಗಿ ಕೃಷ್ಣನ ಕುತಂತ್ರ ಬುದ್ಧಿ ಕರ್ಣನಿಗೆ ಶೋಷಣೆಯನ್ನು ಒದಗಿಸುತ್ತದೆ. ಆದರೆ ಕರ್ಣ ಈ ಎಲ್ಲಾ ಶೋಷಣೆಗಳಿಗೂ ತನ್ನ ಮನಸ್ಸಿನಲ್ಲೇ ದೃಢ ನಿರ್ಧಾರ ತೆಗೆದುಕೊಳ್ಳುವ ಮೂಲಕವೇ ಪ್ರತಿಭಟನೆ ಮಾಡುತ್ತಾನೆ. ಕರ್ಣನನ್ನು ತನ್ನತ್ತ ಸೆಳೆಯಲು ಕೃಷ್ಣ

ಶೌರಿಯದಲಿದಿರಲ್ಲ ಕುಲದಲಿ
ಸೂರಿಯನ ಮಗನೊಡನೆ ಹುಟ್ಟಿದ
ವೀರರೈವರು ಪಾಂಡುತನಯರು ನಿನ್ನ ವೈಭವಕೆ
ಆರು ಸರಿಯೈ ಕರ್ಣ ನಡೆ ನಡೆ
ಧಾರುಣೀಪತಿಯಾಗು ನೀನಿರೆ
ವೈರಿವಿತ್ತಂಡಕ್ಕೆಬಳಿಕಿಲ್ಲೇಂದನಸುರಾರಿ

(ಕರ್ಣಾಟ ಭಾರತ ಕಥಾ ಮಂಜರಿ, ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ), 1988 ಪುಟ 342) ಕರ್ಣನಲ್ಲಿದ 'ಚಲ'ವನ್ನೇ ಕುಗ್ಗಿಸುವ ಮಾತುಗಳಿವು. ತಾನೊಬ್ಬ 'ಸೂತ' ಕುಲದವನೆಂದು ತಿಳಿದವನಿಗೆ ಕೃಷ್ಣ ತನ್ನ ಕುಟಿಲೋಪಾಯದಿಂದ ಕುಲದ ಮಾತನಾಡಿ ಪಾಂಡವರ ಬಗ್ಗೆ ಸೋದರತ್ವ ಬೆಳೆಯುವಂತೆ ಮಾಡುತ್ತಾನೆ. ಒಂದು ಕಡೆ ನಾನು 'ಸೂತ' ಕುಲದವನ್ನಲ್ಲ ಎಂದು ಸಂತೋಷವಾದರೆ, ಇನ್ನೊಂದು ಕಡೆ ನನ್ನ ಪ್ರಾಣ ಸ್ನೇಹಿತನಿಗೆ ಯುದ್ಧದಲ್ಲಿ ಹಿನ್ನಡೆಯಾಗುತ್ತದೆಂದು ಮಮಲ ಮರಗುತ್ತಾನೆ.

ಕಾದಿ ಕೊಲುವೊಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯಲಿ ಹೋಗಲಿಲ್ಲ
ಭೇದದಲ್ಲಿ ಹೊಕ್ಕಿರಿದನೋ ಮಧು

ಸೂದನನು ತಾನಕಟೆನುತ ಘನ ಚಿಂ
ತೋದಧಿಯಲದ್ದವೊಲುಮೌನದೊಳಿದ್ದನಾಕರ್ಣ

(ಕರ್ಣಾಟ ಭಾರತ ಕಥಾ ಮಂಜರಿ, ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ), 1988 ಪುಟ 342) ಕೃಷ್ಣನು ಬಂದು ಕರ್ಣನ ಜನ್ಮ ವೃತ್ತಾಂತವನ್ನು ಹೇಳಿದ ಮೇಲೆ ಕರ್ಣನಲ್ಲಿ ಅಶಾಂತಿಯ ಅಲೆ ಎದ್ದು, ಚಿಂತಿಸುತ್ತ ಒಂದು ರೀತಿಯ ಧರ್ಮ ಸಂಕಟದಲ್ಲಿ ಬಂಧಿತನಾಗುತ್ತಾನೆ.

ಕರ್ಣನು ಕೃಷ್ಣನ ಮೂಲಕ ತನ್ನ ಜನ್ಮ ವೃತ್ತಾಂತ ತಿಳಿದಾಗ ಇವನಲ್ಲಿ ದ್ವಂದ್ವ ಉಂಟಾಗುತ್ತದೆ. ಪಾಂಡವರು ನನ್ನ ಸಹೋದರರು. ಯುದ್ಧದಲ್ಲಿ ಅವರನ್ನು ಕೊಲ್ಲದೆ ಬಿಡುವುದೋ ಅಥವಾ ಕೌರವನಿಗೆ ಜಯ ತರುವ ಉದ್ದೇಶದಿಂದ ಸಹೋದರರು ಎನ್ನದೆ ತಲೆ ಕಡಿಯುವುದೋ ತಿಳಿಯದಾಗಿ ಮಾನಸಿಕ ಒತ್ತಾಡಕ್ಕೆ ಸಿಲುಕುತ್ತಾನೆ. ನನಗೂ ಸೋದರರಿದ್ದಾರೆ. ನಾನು ಶೂದ್ರನಲ್ಲ ಎಂಬ ಸಂತೋಷ ಒಂದು ಕಡೆಯಾದರೆ ಇನ್ನೊಂದು ಕಡೆಗೆ ತನಗೆ ಆಶ್ರಯದಾತನಾದ ಕೌರವನಿಗೆ ದ್ರೋಹ ಬಗೆಯ ಬೇಕಲ್ಲ ಎಂಬ ಸಂಕಟ ಮನದಲ್ಲಿ ಮೂಡುತ್ತದೆ. ಇಲ್ಲಿ ಕೃಷ್ಣನೂ ಕರ್ಣನನ್ನು 'ಜಾತಿ' ಎಂಬ ಬಂಧನದಲ್ಲಿ ಕಟ್ಟಿಹಾಕಿ ತಮಾಷೆ ನೋಡುತ್ತಿರುತ್ತಾನೆ.

ಇಂದ್ರ ಮತ್ತು ಕೃಷ್ಣರಲ್ಲದೇ ಕೃಪ ಮತ್ತು ಅಶ್ವತ್ಥಾಮರು ಕೂಡ ಕರ್ಣನ ಕುಲವನ್ನು ನಿಂದಿಸಿ ಹೀನ ಕುಲದವನು, ಕ್ಷತ್ರಿಯ ಜಾತಿಗೆ ಸೇರಿಲ್ಲವಾದ್ದರಿಂದ ಕ್ಷತ್ರಿಯರ ಜೊತೆ ಯುದ್ಧ ಮಾಡಲು ಯೋಗ್ಯನಲ್ಲ ಎಂದು ಅಣಕಿಸಿದ್ದು ಉಂಟು. ಕರ್ಣನು 'ಸೂತ' ಕುಲದವನಾಗಿದ್ದು, ಈ ಕುಲದವರು ಎಲ್ಲಿಯೂ ಸಲ್ಲದವರೆಂಬ ಅಭಿಪ್ರಾಯವನ್ನು ಹೊಂದಿದ್ದ ಇವರು, ಒಬ್ಬ ಸೂತ ಕುಲದವನಿಗೆ ಮಾಡಿದ 'ಜಾತಿ' ಶೋಷಣೆಯನ್ನು ಇಲ್ಲಿ ಸ್ಮರಿಸಬಹುದು.ಕೃಷ್ಣನು ಕರ್ಣನಿಗೆ ಸಿಂಹಾಸನದ ಆಸೆಯನ್ನು ತೋರಿಸಿ, ನಿನ್ನದು ಸೂತ ಕುಲವಲ್ಲ, ಕ್ಷತ್ರಿಯ ಕುಲ, ಪಾಂಡವರ ಜೊತೆ ಸೇರಿದರೆ ನಿನಗೆ ರಾಜನಾಗುವ ಅವಕಾಶ ಉಂಟು ಎಂದು ಆಸೆಯನ್ನು ಹುಟ್ಟಿಸುತ್ತಾನೆ. ಅಂದರೆ ಕರ್ಣ ಸೂತ ಕುಲದವನ್ನಾಗಿದ್ದರೂ ಒಬ್ಬ ರಾಜನಲ್ಲಿರುವ ಎಲ್ಲಾ ಅಂಶಗಳು ಇವನಲ್ಲಿ ಇತ್ತು ಎಂಬ ವಿಷಯ ವಿಷ್ಣುವಿನ ಅವತಾರಿ ಕೃಷ್ಣನಿಗೆ ತಿಳಿದಿದ್ದರೂ ಕರ್ಣನನ್ನು ರಾಜನನ್ನಾಗಿ ಮಾಡಲು ಸಾಧ್ಯವಾಗಲಿಲ್ಲ. ಒಟ್ಟಿನಲ್ಲಿ ಗದುಗಿನ ಭಾರತದ ಮೂಲಕ ದಲಿತನಾಗಿ ಹುಟ್ಟಿದವನಿಗೆ ಎಂತಹ ಸಂದರ್ಭ ಬಂದರೂ ಸಹ ಉತ್ತಮವಾದ ಅವಕಾಶಗಳು ಸಿಗುವುದಿಲ್ಲ ಎಂಬುದು ಕರ್ಣನಿಂದ ಸ್ಪಷ್ಟವಾಗಿದೆ.

ಸರ್ವಜ್ಞನ ವಚನಗಳು ಇಡೀ ದಕ್ಷಿಣ ಭಾರತದ ಶರಣ ಪರಂಪರೆಯಲ್ಲೇ ಉತ್ತಮವಾದ ಘಟ್ಟ. ಇವನ ಸಾಹಿತ್ಯವು ನಿತ್ಯ ಹರಿದ್ವರ್ಣದಂತೆ ಎಲ್ಲಾ ಕಾಲಕ್ಕೂ ಉಪಯೋಗವಾಗುವ ಸಾಹಿತ್ಯವಾಗಿದೆ. ಇವನ ಕಾಲದಲ್ಲೂ ಜಾತಿ ವ್ಯವಸ್ಥೆ ಇದ್ದು, ಅಲ್ಲಿಯೂ ಕೂಡ ಕೆಳ ಕುಲದವರ ಶೋಷಣೆ ನಡೆದಿದ್ದು,ದಲಿತರಿಗೆ ಉತ್ತಮವಾದ ಸಾಮಾಜಿಕ ಜೀವನ ಇರಲಿಲ್ಲ. ಇವರ ವಚನಗಳ ಮೂಲಕಪ್ರಪಂಚದಲ್ಲಿ ಹೊಲೆಯರು ಯಾರು ಎಂಬುದನ್ನು ಕೆಳಗಿನ ಸಾಲುಗಳಲ್ಲಿ ವ್ಯಕ್ತ ಪಡಿಸಿದ್ದಾರೆ.

ಸತ್ತವನು ತಿಂಬಾತ । ಎತ್ತಣದ ಹೊಲೆಯವನು।
ಒತ್ತಿ ಜೀವವನು ಕೊರೆ ಕೊರೆದು ತಿಂಬಾತ ತಾ।
ನುತ್ತಮದ ಹೊಲೆಯ

(ಸರ್ವಜ್ಞ ವಚನ ಸಂಪದ, ಮಾಗಡಿ ರಂಗನರಸಿಂಹಯ್ಯ (ಸಂ.), 2007, ಪುಟ 12) ಎಂದು ಹೇಳುತ್ತಾನೆ.ಯಾರು ತನ್ನ ಜೀವ ಉಳಿಸಿಕೊಳ್ಳುಲು ಸತ್ತವರ ದೇಹದ ಮಾಂಸವನ್ನು ತಿನ್ನುವರೋ ಅವರು ಹೊಲೆಯರಲ್ಲ. ಬದಲಾಗಿ ಬೇರೆಯವರ ಜೀವವನ್ನು ಹಿಂಡಿ, ತೊಂದರೆ ಮಾಡುವವರು ನಿಜವಾದ ಹೊಲೆಯ ಎಂದಿದ್ದಾರೆ. ಈ ವಚನದ ಸಾಲುಗಳಲ್ಲಿ ಹೊಲೆಯರು ಸತ್ತವರ ದೇಹವನ್ನು ತಿನ್ನುವವರು ಎಂದು ಹೇಳಾಗಿದ್ದು, ಜೊತೆಗೆ ಮೇಲ್ವರ್ಗದವರು ಹೊಲೆಯರನ್ನು ಶೋಷಣೆ ಮಾಡುತ್ತಿದ್ದರು ಎಂಬುದು ಸ್ಪಷ್ಟವಾಗಿದೆ. ಅಂದರೆ ಹೊಲೆಯರು ತಮ್ಮ ಹಸಿವನ್ನು ನೀಗಿಸಿಕೊಳ್ಳಲು ಎಂತಹ ಕೆಲಸವನ್ನು ಮಾಡಲು ಸಿದ್ಧರಾಗಿದ್ದರೂ ಹಾಗೂ ಮೇಲ್ವರ್ಗದವರು ಹೊಲೆಯರಿಗೆ ಹೆಣ ತಿನ್ನಿಸುವ ಮಟ್ಟದಲ್ಲಿ ಶೋಷಣೆ ಮಾಡಿದ್ದು ಸ್ಪಷ್ಟವಾಗಿದೆ.ಇನ್ನೊಂದು ಹಂತದಲ್ಲಿ ಸರ್ವಜ್ಞ ಹಣವಿದ್ದವರು ಮಾತ್ರ ಉತ್ತಮರು ಇಲ್ಲದವರು ನಾಯಿಗೆ ಸಮಾನ ಎಂದು ಹೇಳುವುದಕ್ಕೆ ಈ ಕೆಳಗಿನ ವಚನವನ್ನು ಉದಾರಹಣೆ ಕೊಡಬಹುದು.

ಧನಕನಕ ಉಳ್ಳವನ। ದಿನಕರನಂತಕ್ಕು
ಧನಕನಕ ಹೋದ ಮರುದಿನವೇ ಹಾಳೂರ।
ಶುನಕನಂತಕ್ಕು

(ಸರ್ವಜ್ಞ ವಚನ ಸಂಪದ, ಮಾಗಡಿ ರಂಗನರಸಿಂಹಯ್ಯ (ಸಂ.), 2007, ಪುಟ 12)

ಎಂದಿದ್ದಾರೆ. ಅಂದರೆ ಮನುಷ್ಯನಲ್ಲಿ ಹಣ, ಸಂಪತ್ತು, ಚಿನ್ನ ಇತ್ಯಾದಿ ಇರುವವರೆಗೂ ಸೂರ್ಯನಂತೆ ಸದಾ ಹಸನ್ಮುಖಿಯಾಗಿ ನಗುನಗುತ್ತಾ ಇರುತ್ತಾನೆ.

ಆದರೆ ಅವನಲ್ಲಿರುವ ಸಂಪತ್ತೆಲ್ಲವೂ ಮುಗಿದು ಬರಿಗೈಯಾದ ಕೂಡಲೇ ಬೀದಿ ಬದಿಯ ನಾಯಿಯಂತಾಗುತ್ತಾನೆ ಎಂಬ ಅಂಶಗಳು ವ್ಯಕ್ತವಾಗಿವೆ. (ಮನುಷ್ಯ ಶ್ರೀಮಂತ ತನದಿಂದ ಜೀವನ ಮಾಡುತ್ತಿರುವಾಗ ಎಲ್ಲರೂ ಅವನ ಬಳಿ ಸಿಹಿಗೆ ಮುತ್ತುವನೊಣಗಳಂತೆ ಇದ್ದು ಆತ ಬರಿಗೈಯಾದಾಗ ಯಾರೂ ಹತ್ತಿರ ಸುಳಿಯುವುದಿಲ್ಲ ಎಂದು ಅರ್ಥೈಸಬಹುದಾಗಿದೆ)ಒಟ್ಟಿನಲ್ಲಿ ಸರ್ವಜ್ಞನ ಕಾಲದಲ್ಲಿನ ದಲಿತರ ಸಾಮಾಜಿಕ, ಆರ್ಥಿಕ ಸ್ಥಿತಿಗಳನ್ನು ಗಮನಿಸಿದಾಗ ಅವರು ಸಾಮಾಜಿಕವಾಗಿ ಶೋಷಣೆಗೆ ಒಳಗಾಗಿದ್ದು, ಆರ್ಥಿಕವಾಗಿ ದುರ್ಬಲರಾಗಿದ್ದ ಅಂಶವು ಬೆಳಕಿಗೆ ಬರುತ್ತವೆ. ಇಂತಹ ಸರ್ವ ಶ್ರೇಷ್ಠ ವ್ಯಕ್ತಿಯ ಕಾಲದಲ್ಲೂ ಸಹ ದಲಿತರ ಸ್ಥಿತಿ 'ಜಾತಿ' ವ್ಯವಸ್ಥೆಯ ಮುಷ್ಠಿಯಲ್ಲಿ ಸಿಲುಕಿ ಒದ್ದಾಡಿರುವುದು ಶೋಚನಿಯವಾಗಿದೆ.

ಕನ್ನಡ ಸಾಹಿತ್ಯ ಕಂಡ ಉನ್ನತ ಲೇಖಕರಲ್ಲಿ ಕುವೆಂಪು ಕೂಡ ಒಬ್ಬರಾಗಿದ್ದು, ಇವರ ಕೃತಿಗಳಿಂದ ಕನ್ನಡ ಸಾಹಿತ್ಯ ಲೋಕದ ಪತಾಕೆ ನಭದೆತ್ತರದಲ್ಲಿ ರಾರಾಜಿಸ ತೊಡಗಿತು. ಇವರ ಕಾಲವು ನವೋದಯ ಸಾಹಿತ್ಯ ಘಟ್ಟವಾಗಿದ್ದು, ಬ್ರಾಹ್ಮಣ ಜಾತಿಯೇ ಹೆಚ್ಚು ಶಕ್ತಿಯುತವಾಗಿ ಇದ್ದಂತಹ ಸಂದರ್ಭದಲ್ಲಿ ದಲಿತರ ಪರವಾಗಿ ನಿಂತು ದಲಿತ ಲೇಖಕರಿಗೆ ಮಾರ್ಗದರ್ಶಕರಾಗಿ ತಮ್ಮ ಕಾದಂಬರಿಗಳ ಮೂಲಕ ದಲಿತರ ಚಿತ್ರಣವನ್ನು ನೀಡಿ, ದಲಿತರ ಬಗ್ಗೆ ಕಾಳಜಿ ತೋರುವ, ದಲಿತ ಸಮನ್ವಯ ಅಥವಾ ದಲಿತೇತರ ಕವಿಯಾಗಿದ್ದಾರೆ.ನವೋದಯ ಕಾದಂಬರಿಕಾರರಲ್ಲಿ ಹೆಚ್ಚಿನ ಪ್ರತಿಭಟನೆಯ ಅಂಶಗಳನ್ನು ಕುವೆಂಪುರವರಲ್ಲಿ ಕಾಣಬಹುದು. ಇವರ ಕಾದಂಬರಿಗಳಲ್ಲಿ ಸಾಮಾಜಿಕ ಅಸಮಾನತೆಯ ವಿರುದ್ಧ, ವರ್ಣ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ, ವರ್ಗ ಸಂಘರ್ಷಗಳು ಕಂಡುಬರುತ್ತವೆ.

ಕುವೆಂಪುರವರ ಸಾಮಾಜಿಕ ಅನುಭವವನ್ನು "ಸಾಮಾಜಿಕ ಅನುಭವವೇ ಕುವೆಂಪು ಅವರ ಕೃತಿಗಳಲ್ಲಿಯ ವರ್ಗ ಸಂಘರ್ಷದ ಸ್ವರೂಪವನ್ನು ಆಳದಲ್ಲಿ ನಿಯಂತ್ರಿಸಿದೆ"(ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಶಿವರುದ್ರಪ್ಪ ಜಿ.ಎಸ್. (ಸಂ.), 1989, ಪುಟ 143) ಎಂದು ವಿಮರ್ಶಕರಾದ ಡಿ.ಆರ್.ನಾಗರಾಜ್‌ರವರು ಗುರುತಿಸಿದ್ದಾರೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ 'ನಾಯಿಗುತ್ತಿ' ಎಂಬ ಪಾತ್ರವು ಹೊಲೆಯರ ಚಿತ್ರಣವನ್ನು ತೊರಿಸುತ್ತದೆ. ಇವನು ಭರಮೈ ಹೆಗ್ಗಡೆಯವರ ಮನೆಯಲ್ಲಿ 'ಜೀತದಾಳಾಗಿ' ದುಡಿಯುತ್ತಿದ್ದನು.

ಇಡೀ ಕಾದಂಬರಿಯಲ್ಲಿ ಮಳೆಯ ಆರ್ಭಟ, ಇಂಬಳದ ಆರ್ಭಟ, ಪರಿಸರದ ವೈಚಿತ್ರ್ಯಗಳು ಕಂಡುಬರುತ್ತವೆ. ಇದರಿಂದ ಬಿಡುಗಡೆ ಪಡೆಯಲು ಅವರವರ ಅನುಕೂಲಗಳಿಗೆ ತಕ್ಕಂತೆ ಸವಲತ್ತುಗಳನ್ನು ಮಾಡಿಕೊಂಡಿರುತ್ತಾರೆ.

'ನಾಯಿಗುತ್ತಿ' ಸೀತೂರು ಗುಡ್ಡಕ್ಕೆ ಏರಲು ಹೋದಾಗ 'ಮಳೆ'ಯ ನರ್ತನ ಶುರುವಾಗಿರುತ್ತದೆ. ಇದರ ಜತೆಗೆ 'ಇಂಬಳ'ದ ಕಾಟ ಬೇರೆ. "ಗುತ್ತಿ ಅಲ್ಲಲ್ಲಿಯೇ ನಿಂತು ಕಣ್ಣಿಗೆ ಕಂಡ ಇಂಬಳಗಳನ್ನು ಕಾಲಿನಿಂದ ಕಿತ್ತೊಗೆಯುತ್ತಾ"(ಕುವೆಂಪು, ಮಲೆಗಳಲ್ಲಿ ಮದುಮಗಳು, 2015, ಪುಟ 02) ಮುಂದುವರೆಯುತ್ತಿದ್ದನು. ಇದೇ ಇಂಬಳ ಮೇಲ್ಜಾತಿಯವರಿಗೆ ಹತ್ತಿದ್ದರೇ 'ಸುಣ್ಣ ಬಳಸಿ' ಅದನ್ನು ನಿಯಂತ್ರಿಸುತ್ತಿದ್ದರು. ಆದರೆ 'ನಾಯಿಗುತ್ತಿ' ಅದನ್ನು ತನ್ನ ಅಂಗಾಂಗದಿಂದಲ್ಲೇ ಕಿತ್ತು ಎಸೆಯುತ್ತಿದ್ದ. ಇದರಿಂದ ಅವನ ದೇಹದ ಕೆಲ ಭಾಗಗಳು 'ಚರ್ಮ' ಸಹಿತ ಕಿತ್ತು ಬರುತ್ತಿದ್ದ ಸಂದರ್ಭವು ಉಂಟು. ಇದು 'ಹೊಲೆಯ'ರ ಸ್ಥಿತಿಯನ್ನು ತೋರಿಸುತ್ತದೆ. ಎರಡನೇ ಪ್ರಸಂಗವನ್ನು ಹೇಳುವುದಾದರೇ, 'ತಿಮ್ಮ ನಾಯ್ಕ'ನ ಮನೆಗೆ ಊಟ ಕೇಳಲು ಹೋದಾಗ ಹೊರ ಭಾಗದಲ್ಲಿ ನಿಂತಿರುತ್ತಾನೆ. ಇದನ್ನು ಗಮನಿಸಿ "ಮ್ಯಾಲೆ ಬಂದು ಕೂತುಕೊಳ್ಳೋ ಅಂದ್ರೆ ನೀರಿನಾಗೆ ನಿಂತ್ಕೋಟು ಪರ್ಸಂಗ ಮಾಟ್ತಾನೆ! ಒಳ್ಳೆ ಮಾರಾಯ.!"(ಕುವೆಂಪು, ಮಲೆಗಳಲ್ಲಿ ಮದುಮಗಳು, 2015, ಪುಟ 02)ಎಂದು ಹೇಳಿದಾಗಲೂ ಗುತ್ತಿ ಕಿರು ಜಗಲಿಯಲ್ಲಿ ಕೂರುತ್ತಾನೆ. ಇದು ಹೊಲೆಯರ ಸ್ಥಿತಿಯನ್ನು ಗುರುತ್ತಿಸುತ್ತದೆ. ಉತ್ತಮರ ಮನೆಗೆ ಹೋದಾಗ 'ದಲಿತ'ರಿಗೆ ಹೊರ ಭಾಗದಲ್ಲಿ ಕೂರಿಸುವುದರ ಮೂಲಕ 'ಜಾತಿ' ಶೋಷಣೆ ನೀಡುವುದು ಕಂಡು ಬರುತ್ತದೆ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಎಲ್ಲಾ ಜಾತಿಗಳಿಗೂ ಮನ್ನಣೆ ಕೊಡುವಂತೆ, ದಲಿತರ ಜಾತಿಗೂ ಮನ್ನಣೆ ದೊರಕಿಸಿಕೊಡುವುದರ ಜತೆಗೆ ಇವರಕಾಲದಲ್ಲೂ ದಲಿತರಿಗೆ ಶೋಷಣೆ ನಡೆದಿದೆ ಎಂಬುದು ಸಾಬೀತಾಗುತ್ತದೆ. ಕುವೆಂಪುರವರ ಕಾದಂಬರಿಗಳಲ್ಲಿ ಮುಖ್ಯವಾಗಿ ಐದು ಜಾತಿಗಳಿದ್ದು, ಇದರಲ್ಲಿ ಮೊದಲನೇ ಸ್ಥಾನ, ಬ್ರಾಹ್ಮಣರು ಪಡೆದಿದ್ದು, ಇವರ ವೃತ್ತಿ ದೇವಸ್ಥಾನಗಳಲ್ಲಿ ದೇವರ ಸೇವೆ ಮಾಡಿಕೊಂಡು, ಭಕ್ತರಿಂದ ಬರುವ ಹಣವನ್ನು ತಮ್ಮ ಹೊಟ್ಟೆ ಪಾಡಿಗೆ ಬಳಸಿಕೊಳ್ಳುವುದಲ್ಲದೆ ಭಕ್ತರಲ್ಲಿ ಭಯ-ಭಕ್ತಿ ಮೂಡಿಸಿ ಅರಿಶಿನ, ಕುಂಕುಮ, ಮಂತ್ರ, ತಂತ್ರಗಳಿಂದ ಹಣ ವಸೂಲಿ ಮಾಡಿಕೊಳ್ಳುತ್ತಿದ್ದರು.

ತಾವು ಕಷ್ಟ ಪಡುವ ಬದಲು ಕಷ್ಟ ಪಡುವ ಜನರನ್ನು ಶೋಷಿಸುತ್ತಿದ್ದರು ಎಂಬ ಅಂಶ ತಿಳಿದುಬರುತ್ತದೆ.

ಬ್ರಾಹ್ಮಣರ ನಂತರದ ಸ್ಥಾನ ಗೌಡ–ಒಕ್ಕಲಿಗರಾಗಿದ್ದು ಇವರ ವೃತ್ತಿ ಹಣಕಾಸಿನ ಲೇವಾದೇವಿ ಹಾಗೂ ಭೂ ಒಡೆತನವಾಗಿರುತ್ತದೆ. ಬೇರೆ ಜಾತಿಯವರು ಈ ವೃತ್ತಿಯನ್ನು ಮಾಡುವ ಹಾಗಿರಲಿಲ್ಲ. ಹೀಗೆ ಗೌಡರ ವಿರುದ್ದ ಸಾಗುವಳಿ ಮಾಡಿದ ಏಕೈಕ ವ್ಯಕ್ತಿ ಎಂದರೆ 'ಸೇನಾ ನಾಯ್ಕ' ನಾಗಿದ್ದು, ಇವನ ಜಾತಿಯು ಗೌಡರ ನಂತರದ ಜಾತಿಯಾದ 'ಹಳೆಪೈಕ' ಈ ಜಾತಿಯ ಜನರ ಕಸುಬೆಂದರೆ ಗೌಡರು ಹೇಳಿದ ಕೆಲಸ ಮಾಡಿಕೊಂಡು ಇರಬೇಕಾಗಿತ್ತು. ಆದರೆ 'ಸೇನಾನಾಯ್ಕ' ಹೊಲ ಗದ್ದೆಗಳಲ್ಲಿ ದುಡಿಯುವ ಶ್ರಮ ಜೀವಿಯಾಗಿದ್ದು, ಇವನ ವರ್ತನೆಯಿಂದ 'ಮಂಜು ಭಟ್ಟ'ರು ಯಾವಾಗಲೂ ಕೆಂಡ ಕಾರುತ್ತಿದ್ದರು.

ಗೌಡರ ನಂತರ ಮುಸ್ಲಿಮರು, ಗೌಡರ ದಾದಾಗಿರಿಗೆ ಬಲಗೈಗಳಾಗಿ, ಅದರಲ್ಲೂ ಹೊನ್ನಾಳಿ ಹೊಡೆತದ ಮೂಲಕ ಹೇಳಿದ ಹಾಗೆ ಕೇಳುವಂತೆ ಮಾಡಿಕೊಳ್ಳುತ್ತಿದ್ದರು. ಮುಸ್ಲಿಮರಿಗೆ ಗೌಡರು ಹಣದ ಆಸೆ ತೋರಿಸಿ, ತಮ್ಮಿಷ್ಟಕ್ಕೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳುತ್ತಿದ್ದರು. ಆದರೆ ಮುಸ್ಲಿಮರು ಇಷ್ಟಕ್ಕೆ ಸೀಮಿತವಾಗದೆ ಕೆಲವರು ಕಳ್ಳತನಕ್ಕೆ ಕೈ ಹಾಕಿದರೆ, ಇನ್ನೂ ಕೆಲವರು ಸಣ್ಣ–ಪುಟ್ಟ ವ್ಯಾಪಾರ ಮಾಡಿಕೊಂಡು ಜೀವಿಸುತ್ತಿದ್ದ ಜಾಣರಾಗಿದ್ದರು. ಹಮ್ಮೀರ ನಾಯ್ಕನ ಪ್ರಕಾರ ಮುಸ್ಲಿಮರು ಗೌಡರ ತಾಳಕ್ಕೆ ತಕ್ಕಂತೆ ಕುಣಿಯುವ ಗೊಂಬೆಗಳಾಗಿದ್ದು, ಗೌಡನು ಹಾವಾಡಿಗನಂತೆ ಪುಂಗಿ ಊದಿದಾಗ, ಪುಂಗಿಯ ನಾದಕ್ಕೆ ನಲಿಯುವ ಹಾವುಗಳಾಗಿದ್ದರು.ಮುಸ್ಲಿಮರ ನಂತರ ಕ್ರೈಸ್ತರ ಸರದಿಯಾಗಿದ್ದು, ಇವರು ತಮ್ಮ ಮತ ಧರ್ಮ ಪ್ರಚಾರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಆಮಿಷಗಳನ್ನೊಡ್ಡುವ ಮೂಲಕ ಜನರನ್ನು ಮತಾಂತರಗೊಳಿಸುವ ಕಾಯಕದಲ್ಲಿ ಯಶಸ್ವಿಯಾಗಿದ್ದರು.

ಈ ಮತಾಂತರದ ಕುಣಿಕೆಗೆ ಹೆಚ್ಚಿನ ಪಾಲು ದಲಿತರೇ ಕೊರಳೊಡ್ಡಿದ್ದು ಆಶ್ಚರ್ಯವಾಗಿದ್ದರೂ ಸಹಜವಾಗಿದೆ.ಇವರ ನಂತರದಲ್ಲಿ ಉಳಿಯುವ ಕಟ್ಟ ಕಡೆಯ ಜಾತಿ ಎಂದರೆ ಹೊಲೆಯರು ಇವರಿಗೆ ಗೌಡರ ಹೊಲ ಗದ್ದೆಗಳಲ್ಲಿ ದುಡಿದು, ಜೀತ ಪದ್ಧತಿಯಲ್ಲಿ ಬದುಕುವುದು ಅನಿವಾರ್ಯವಾಗಿತ್ತು. ಇಲ್ಲಿ ದಲಿತರಿಗಾದ ಮೊದಲ ಶೋಷಣೆಯನ್ನು ಗುರುತಿಸುವುದಾದರೆ.

ಕಲ್ಲೇಗೌಡನು ಇಜಾರದ ಸಾಬಿಯಿಂದ ಸಣ್ಣ ಬೀರನಿಗೆ ಹೊನ್ನಾಳಿ ಹೊಡೆತ ಕೊಡಿಸಿದ್ದು, ಈ ಶಿಕ್ಷೆಗೆ ಕಾರಣ ಬಲವಾಗಿಲ್ಲದಿದ್ದರೂ ತಿಂದ ಹೊಡೆತಮಾತ್ರ ಸಣ್ಣ ಬೀರನ ಮನಸ್ಸನ್ನು ಕ್ರೂರ ರೂಪಕ್ಕೆ ತಳ್ಳಿತು. ಈ ಹೊಡೆತಕ್ಕೆ ಕಾರಣವೆಂದರೆ ತಿಮ್ಮಿ ಮತ್ತು ಗುತ್ತಿ ಒಬ್ಬರನೊಬ್ಬರುಪ್ರೀತಿಸಿ ಊರು ಬಿಟ್ಟು ಹೋದರೆಂದು ತಿಳಿದ ಗೌಡ, ಈ ಇಬ್ಬರು ಇಲ್ಲದಿರುವುದರಿಂದ ತನ್ನ ಹೊಲದಲ್ಲಿ ಕೆಲಸ ಮಾಡುವವರ ಸಂಖ್ಯೆ ಕಡಿಮೆಯಾಯಿತೆಂದು ಭಾವಿಸಿ, ಇವರಿಬ್ಬರು ಓಡಿ ಹೋಗಲು ಈ ಸಣ್ಣ ಬೀರನೇ ಸಹಾಯ ಮಾಡಿರಬಹುದೆಂದು ತಿಳಿದು, ಇವನ ಮೇಲೆ ಕೋಪಗೊಂಡು ಮರಕ್ಕೆ ಕಟ್ಟಿಸಿ, ಹೊಡೆಯಲು ಸಾಬಿಗೆ ಹೇಳಿದ್ದನ್ನುಗಮನಿಸಿದಾಗ ಮೇಲ್ವರ್ಗದವರು ತಮ್ಮ ಸ್ವಾರ್ಥಕ್ಕೆ, ಸ್ವಾರ್ಥ ಸಮಾಧಾನಕ್ಕೆ ದಲಿತರ ಮೇಲೆ ದೈಹಿಕ ಶೋಷಣೆ ಮಾಡುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ.ದಲಿತರ ಮೇಲೆ ದೈಹಿಕ ಶೋಷಣೆ ಮಾತ್ರವಲ್ಲದೆ 'ಮತಾಂತರ' ಎಂಬ ಧಾರ್ಮಿಕ ಶೋಷಣೆಯ ಕರಿ ನೆರಳು ಆವರಿಸಿತ್ತು. ಇದಕ್ಕೆ 'ಬಚ್ಚ' ಎಂಬುವವನ್ನು ಬಲಿಪಶುವನ್ನಾಗಿ ಮಾಡಿ ಕ್ರೈಸ್ತ್ರ ಧರ್ಮಕ್ಕೆ ಮಂತಾಂತರ ಮಾಡಿಸುವಲ್ಲಿ ಮೇಲ್ವರ್ಗದವರು ಯಶಸ್ವಿಯಾಗಿರುತ್ತಾರೆ. ಕಾದಂಬರಿಯ ಚಿತ್ರಣದಲ್ಲಿ ಸವರ್ಣೀಯರು ದಲಿತರನ್ನು ತಮ್ಮ ಮನೆಗೆ ಸೇರಿಸದೆ ಶೋಷಣೆ ನೀಡುತ್ತಿದ್ದರು. ಒಟ್ಟಿನಲ್ಲಿ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಎಂಬ ಕಾದಂಬರಿಯಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ದಲಿತರ ಮೇಲೆ ಧಾರ್ಮಿಕ ಹಾಗೂ ದೈಹಿಕ ಶೋಷಣೆ ನೀಡಿರುವುದು ಸ್ಪಷ್ಟವಾಗಿದೆ.

'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಕಂಡು ಬರುವ ದಲಿತ ಪಾತ್ರಗಳೆಂದರೆ ಭೈರ, ಮಂಜ, ತಿಮ್ಮ, ಸಿದ್ಧ. ಈ ಕಾದಂಬರಿಯಲ್ಲಿ ಮೂರು ರೀತಿಯಲ್ಲಿ ಶೋಷಣೆ ನಡೆದಿದ್ದು, ಮೊದಲನೆಯದು ಧಾರ್ಮಿಕತೆ, ಎರಡನೆಯದು ದೌರ್ಜನ್ಯ ಹಾಗೂ ಮೂರನೆಯದು ಲೈಂಗಿಕ ಶೋಷಣೆಗಳು. ಇಲ್ಲಿ ಕುವೆಂಪುರವರು ಸಮಾಜದ ನೈಜ ಸ್ಥಿತಿಯನ್ನು ದಲಿತ ಪಾತ್ರಗಳ ಮೂಲಕ ತಿಳಿಸುವಲ್ಲಿ ಸಫಲರಾಗಿದ್ದಾರೆ.

ದಲಿತರ ವಿಚಾರ ಬಂದಾಗ ಇತರರಿಗೆ ಮಾತಿನ ಧಾಟಿ ಹೆಚ್ಚುತ್ತಿತ್ತು. ಇದಕ್ಕೆ ಬೇಲರ ಸಿದ್ಧ ಜೋಯಿಸರ ಮನೆಗೆ ದಾನದ ದನವನ್ನು ಕಮಾನಿಲ್ಲದ ಗಾಡಿಯಲ್ಲಿ ಹೊತ್ತು ತಂದಾಗ ಅದು ಗಾಡಿಯಲ್ಲೇ ಪ್ರಾಣ ಬಿಟ್ಟರುತ್ತದೆ.

ಇದರಿಂದ ವಿಷಾದಗೊಂಡ ಮಂಜು ಭಟ್ಟ ಇವನನ್ನು ಉದ್ದೇಶಿಸಿ "ಮುಟ್ಠಾಳು ಮುಂಡೇಮಕ್ಕಳಿರಾ, ಯಾರಾದರೂ ಗೋವನ್ನು ಹೀಗೆ ಗಾಡಿಮೇಲೆ ಹಾಕಿಕೊಂಡು ತರುತ್ತಾರೆಯೇನ್ರೊ?"(ಕುವೆಂಪು, ಕಾನೂರು ಹೆಗ್ಗಡತಿ 2015, ಪುಟ 461) ಎಂದು ರೇಗುತ್ತಾನೆ. ಇದು ದಲಿತರ ಬಗ್ಗೆ ಉಳ್ಳವರಿಗೆ ಇರುವ ತಾತ್ಸರದ ಮನೋಭಾವನೆಯನ್ನು ತೋರುತ್ತದೆ. ಈ ಮಂಜು ಭಟ್ಟನ ಪ್ರಕಾರ ಇವನು ಮುಂಡೆ ಮಗನಂತೆ ಕಂಡು ಬರುತ್ತಾನೆ. ಇದು ದಲಿತ ಜಾತಿಗೆ ನಡೆದ ಶೋಷಣೆ. ಇದಕ್ಕೆ 'ಸಿದ್ಧ' ಯಾವ ಮಾತನ್ನು ಆಡದೇ ಇದದ್ದು ಆ ಕಾಲದ ಪ್ರತಿಭಟನೆಯ ಸ್ವರೂಪವಾಗಿದೆ. ಪ್ರಪಂಚದಲ್ಲಿ ಎಲ್ಲಾ ರೀತಿಯ ಚಟುವಟಿಕೆಗಳಿಗೆ 'ಜಾತಿ' ಎಂಬ ತಾರತಮ್ಯವಿದ್ದರೂ, ಲೈಂಗಿಕ ಚಟುವಟಿಕೆಗೆ ಯಾವುದೇ ರೀತಿಯ ತಾರತಮ್ಯವಿಲ್ಲ ಎಂಬ ಅಂಶವನ್ನು ಈ ಕಾದಂಬರಿ ಎತ್ತಿ ಹಿಡಿದಿದೆ.

ತಿಮ್ಮಪ್ಪ ಹೆಗ್ಗಡೆಎಂಬ ಉತ್ತಮ ಜಾತಿಯ ವ್ಯಕ್ತಿಯೊಬ್ಬ 'ಸಣ್ಣ'ನ ಮಗಳಾದ 'ಪುಟ್ಟಿ' ಎಂಬ ದಲಿತ ಹೆಣ್ಣನ್ನು ಕೆಡಿಸಿ 'ಜಾತಿ'ಗಿಂತ ಕಾಮ ದೊಡ್ಡದು ಎಂದು ಸಾರಿದಂತಿದೆ. ಇದರ ಅಂಶ ದಲಿತರ ಹೆಣ್ಣು ಮಕ್ಕಳು, ಮೇಲ್ವರ್ಗದವರ ದೈಹಿಕ ತೆವಲು ತೀರಿಸಲು ಭೋಗದ ವಸ್ತುಗಳು ಎಂಬುದು ಸ್ಪಷ್ಟವಾಗಿದೆ. ಕೇವಲ ದೈಹಿಕ ಚಟಕ್ಕಾಗಿ ಜಾತಿಯನ್ನು ಲೆಕ್ಕಿಸದೆ, ಅಲ್ಪ ಸುಖಕ್ಕೆ ಕಟ್ಟು ಬಿದ್ದು, ಇಂಥವರ ನಡವಳಿಕೆ ಕಂಡ ಹಿರಿಯರು 'ಕಾಮ ಗೆದ್ದವರು ಪ್ರಪಂಚ ಗೆಲ್ಲುತ್ತಾರೆ' ಎಂದು ಹೇಳುತ್ತಾರೆ. ಸಣ್ಣನಿಗೆ ತನ್ನ ಮಗಳು ಯಾರಿಂದ ಲೈಂಗಿಕ ಶೋಷಣೆ ಅನುಭವಿಸಿದ್ದಾಳೆ ಎಂಬ ವಿಷಯ ತಿಳಿದಿದ್ದರೂ ತಿಳಿಯದಂತೆ ಇರಲು ಮೂಲ ಕಾರಣ ದಲಿತರಿಗೆ ಮೇಲ್ವರ್ಗದವರ ಮೇಲಿರುವ ಭಯ. 'ಕಾಮ'ಕ್ಕೆ ಜಾತಿ-ಮತ-ಧರ್ಮಗಳ ಸೋಂಕು ಇರುವುದಿಲ್ಲ ಎಂಬ ಸತ್ಯ ಎಲ್ಲರಿಗೂ ತಿಳಿದ ವಿಷಯ ಎಂಬುದು ಇದರ ಅರ್ಥವಾಗಿದೆ.ಒಟ್ಟಿನಲ್ಲಿ ಕುವೆಂಪುರವರು ತಮ್ಮ ಎರಡೂ ಕಾದಂಬರಿಗಳಲ್ಲಿ ದಲಿತರ ಜೀವನಮಟ್ಟ, ಸಮಾಜದಲ್ಲಿ ಅವರಿಗಿದ್ದ ಸ್ಥಾನ-ಮಾನಗಳು ಎಂತಹವು ಎಂಬುದನ್ನು ಚಿತ್ರಿಸಿರುವುದು ವಾಸ್ತವಾಂಶದ ಪ್ರತೀಕವೆಂದು ಭಾವಿಸಬಹುದಾಗಿದೆ.

ನವೋದಯದ ಪ್ರಮುಖ ಲೇಖಕರಲ್ಲಿ ಒಬ್ಬರಾದ ಶಿವರಾಮ ಕಾರಂತರು ರಾಜಕೀಯ ಕ್ಷೇತ್ರದಲ್ಲಿ ಕಾನೂನುಗಳ ಚೌಕಟ್ಟಿನಲ್ಲಿ ತಮಗೆ ಸರಿಕಂಡಿದ್ದನ್ನು ಮೌಲ್ಯಗಳ ಪರವಾಗಿ ನಿಂತು ಪ್ರತಿಭಟಿಸಿದವರು.

ಇವರ ಕಾದಂಬರಿಯ ಒಳಭಾಗದಲ್ಲಿ ವ್ಯವಸ್ಥೆ ತಲೆಮಾರು, ಧರ್ಮ, ಗಂಡು ಹೆಣ್ಣಿನ ಸಂಬಂಧದ ವಿಷಯಗಳನ್ನು ಒಂದು ಸಂಪ್ರದಾಯದ ವಿರೋಧಿ ನೆಲೆಯಲ್ಲಿ ನಿಂತು ಪ್ರತಿಭಟಿಸುತ್ತಾರೆ.

ಇವರ ಪ್ರಸಿದ್ಧ 'ಚೋಮನದುಡಿ' ಕಾದಂಬರಿಯು 'ಅಸ್ಪೃಶ್ಯ' ಜನಾಂಗದ ಬದುಕಿನ ಸ್ಥಿತಿಗತಿಗಳು ಸಮರ್ಥವಾಗಿ ಬಿತ್ತರಗೊಳ್ಳುವ ಹಾಗೇ ರಚನೆಗೊಂಡಿದೆ. ಒಬ್ಬ ದಲಿತೇತರ ಲೇಖಕ, ದಲಿತರ ಕಾಳಜಿ ಬಗ್ಗೆ ಬರೆದ ಈ ಕಾದಂಬರಿಯು ದಲಿತ ಪರವಾಗಿದೆ.

ದಲಿತರ ಉದ್ಧಾರ ಆಗಿದೆ ಎಂದು ಭಾವಿಸಿದರೆ ಅದು ತಪ್ಪಾಗುತ್ತದೆ. ಏಕೆಂದರೆ ಈ ಕಾದಂಬರಿಯೂ ಒಬ್ಬ ದಲಿತನ ದುರಂತವನ್ನು ತಿಳಿಸುವ ಕಾದಂಬರಿಯಾಗಿದ್ದು, ಮೇಲ್ವರ್ಗದವರು ದಲಿತರಿಗೆ ಯಾವ ಕಾಲಕ್ಕೂ ಭೂ ಸಾಗುವಳಿಯ ಹಕ್ಕನ್ನು ಕೊಡುವುದಿಲ್ಲ ಎಂಬುದನ್ನು ಸಾಬೀತುಪಡಿಸಿದೆ.

ಈ ಕಾದಂಬರಿಯಲ್ಲಿ ಮುಖ್ಯವಾಗಿ ಜಾತಿ ಶೋಷಣೆ, ಭೂ ಸಾಗುವಳಿ ಶೋಷಣೆ ಹಾಗೂ ಮತಾಂತರದ ಶೋಷಣೆಗಳಿದ್ದು, ತಳ ಸಮುದಾಯದವರು ಎಂದೂ ಆಸೆ ಪಡೆದೆ, ಆಸೆ ಪಡುವವರ ಆಸೆಯನ್ನು ಮಾತ್ರ ತೀರಿಸಬೇಕು. ಇದು ದಲಿತರ ಆದ್ಯ ಕರ್ತವ್ಯದಂತೆ ಬಿಂಬಿತವಾಗಿದೆ.'ಚೋಮನದುಡಿ'ಯಲ್ಲಿ 'ಚೋಮ' ಜಾತಿ ಆದಾರವಾಗಿ ಕೆಲಸ ಮಾಡುವ ಜೀತಗಾರನಾಗಿದ್ದು, ಮೇಲ್ವರ್ಗದವರು ಮಾತ್ರ ಉಳುಮೆಗೆ ಯೋಗ್ಯರೆಂದು, ದಲಿತರು ಸ್ವಂತ ಭೂಮಿಯನ್ನು ಹೊಂದಬಾರದೆಂದು, ಇದು ಹಿಂದಿನಿಂದ ನಡೆದು ಬಂದ ಪದ್ಧತಿ ಎಂದು ಮೇಲ್ವರ್ಗದವರು ಹೇಳುತ್ತಾರೆ. ಇವರ ಪ್ರಕಾರ "ಹೊಲೆಯ ನೇಗಿಲನ್ನು ಹಿಡಿದರೆ ಪ್ರಳಯವೇ ಆದೀತು ಎಂದು ತಿಳಿಯುವವರು ಅವರು.ಎಲ್ಲೋ ಯಾವನೋ ಒಬ್ಬ ಹೊಲೆಯ ಸರಕಾರಿ ನೆಲವನ್ನು ದರಖಾಸ್ತಿಗೆ ಪಡೆದು ಏನೋ ನಾಲ್ಕು ಗಿಡ ಭತ್ತವನ್ನು ಬೆಳೆಸುತ್ತಾನೆಂದು ಕೇಳಿ ಚೋಮನ ಕಿವಿ ನೆಟ್ಟಗಾಗಿ, ನಾಲಿಗೆ ಮುಂದೆ ಬಿದ್ದರೆ ಅವರ ಬಾಳ್ವೆ ಒಳಿತಾಗುವುದುಂಟೆ"(ಶಿವರಾಮ ಕಾರಂತ, ಚೋಮನ ದುಡಿ, 2012, ಪುಟ 11)ಎಂಬ ಎರಡು ವಿಚಾರಗಳು ಇಡೀ ಕಾದಂಬರಿಯ ಜೀವವಾಗಿರುತ್ತದೆ. ಮೇಲ್ವರ್ಗದವರ ಪ್ರಕಾರ ಹೊಲೆಯರು ಆಳಾಗಿ ದುಡಿದು, ಜೀತದಲ್ಲಿ ಜೀವಿಸಿ, ಪಡೆದ ಸಾಲ ತೀರಿಸುವಲ್ಲಿ ಆಯಸ್ಸನ್ನು ಕಳೆಯುವಂತಾಗ ಬೇಕೆಂದರೆ, ಹೊಲೆಯನಾದ ಚೋಮನ ಲೆಕ್ಕಾಚಾರವೇ ಬೇರೆಯಾಗಿರುತ್ತದೆ.

ತಾನು ಕೂಡ ಬೇಸಾಯಗಾರನಾಗಬೇಕು ಎಂಬ ಆಸೆಯಿಂದ ತನ್ನ ಒಡೆಯನಲ್ಲಿ ಹಲವಾರು ರೀತಿಯಲ್ಲಿ ಬೇಡಿಕೊಂಡಾಗ, ಒಡೆಯನಿಗೆ ಕೊಡಬೇಕೆಂಬ ಮನಸ್ಸು ಬಂದರೂ ಒಡೆಯನ ತಾಯಿ ವ್ಯವಸ್ಥೆ ಎಂಬ ಸಂಪ್ರದಾಯದ ಸಂಕೇತವಾಗಿ ನಿಂತು ಚೋಮ ಸ್ವಂತ ಬೇಸಾಯಗಾರನಾಗುವುದನ್ನು ತಪ್ಪಿಸುತ್ತಾಳೆ.

ಇನ್ನೊಂದು ಕಡೆ ತನ್ನ ಹೆಂಡತಿ ಸಾಯುವುದಕ್ಕೂ ಮುಂಚೆ ಕಳಸದ ಸಮೀಪದ ಕಾಫಿ ತೋಟ ಒಂದರಲ್ಲಿ ನಾಲ್ಕಾರು ರೂಪಾಯಿ ಸಾಲ ಪಡೆದದ್ದು, 4–5 ವರ್ಷಗಳಾದ ನಂತರ ಇದು 20 ರೂಪಾಯಿಗಳಾಗಿದೆ ಎಂದು, ಇದನ್ನುವಸೂಲಿ ಮಾಡಲು ತೋಟದ ಮಾಲೀಕರು ಬಂದು ಕೆಲಸಕ್ಕೆ ಬರಬೇಕೆಂದು ಆಜ್ಞಾಪಿಸಿದ್ದು ಇವನಿಗಾದ ಇನ್ನೊಂದು ಶೋಷಣೆಯಾಗಿದೆ.

ಕಾದಂಬರಿಯ ಉದ್ದಕ್ಕೂ ಬೇಸಾಯಗಾರನಾಗಬೇಕೆಂಬ ಹಠದಿಂದ, ಒಡೆಯ ಕೊಡುವ ಕಷ್ಟವನ್ನು ಸಹಿಸಲಾಗದೆ, ಮನೆ ಕಷ್ಟಕ್ಕೂ, ಮನಸ್ಸಿನ ಒತ್ತಡಕ್ಕೂ ನಾನೇ ಕಾರಣ ಎಂದು ತನ್ನ ಆರ್ಥಿಕ ಸ್ಥಿತಿಗೆ ಹೊಂದಿಕೊಂಡು ಬದುಕುವ ಚೋಮನ ಬದುಕು ಒಂದು ಕಡೆ. ಚೋಮನಿಗೆ ತಮ್ಮಲ್ಲಿರುವ ಬಂಜರು ಭೂಮಿಯನ್ನು ಸಾಗುವಳಿ ಮಾಡಲು ಕೊಟ್ಟರೆ ಚೋಮನ ಆಸೆ ಈಡೇರುತ್ತದೆ ಎಂದು ಯೋಚಿಸಿದರೂ ಒಳ ಸತ್ಯದಲ್ಲಿ ಬಂಜರು ಭೂಮಿಯಲ್ಲಿ ಚೋಮ ದುಡಿದು ಲಾಭಗಳಿಸಿದರೆ ಅದರ ಲಾಭ ನಮ್ಮದು ಎನ್ನುವ ಕಾದಂಬರಿಯ ಪ್ರತಿನಾಯಕನಾದ ಸಂಕಪ್ಪಯ್ಯನ ತೊಳಲಾಟ ಇನ್ನೊಂದು ಕಡೆ.ಇವರಿಬ್ಬರ ತೊಳಲಾಟದ ಮಧ್ಯೆ ಸಂಕಪ್ಪಯ್ಯನ ತಾಯಿ ಚೋನಿಗೆ ಸ್ವಂತ ಸಾಗುವಳಿ ಮಾಡಲು ತಮ್ಮ ಭೂಮಿಯನ್ನು ಕೊಟ್ಟರೆ ನಮ್ಮ ಮನೆಯಲ್ಲಿ ಕೂಲಿ ಇಲ್ಲದೆ ಬಿಟ್ಟಿ ಕೆಲಸ ಮಾಡಲು ಯಾರು ಸಿಗುತ್ತಾರೆ? ಎಂಬುದು ಈಕೆಯ ಯೋಚನೆ. ಈ ಪ್ರಕಾರ ತುಂಡು ಭೂಮಿ ಕೊಡುವುದು ದೊಡ್ಡ ವಿಷಯವಲ್ಲ, ತುಂಡು ಭೂಮಿ ಕೊಟ್ಟ ನಂತರ ಚೋಮ ಉತ್ತಮವಾದ ಸಾಗುವಳಿ ಮಾಡಿ ಲಾಭ ಪಡೆದರೆ, ಹಣಕಾಸಿನ ವಿಷಯದಲ್ಲಿ ನಮ್ಮ ಸಮಾನ ಬಂದು, ನಮಗೆಯಾವುದೇ ರೀತಿಯ ಮರ್ಯಾದೆ ಇರುವುದಿಲ್ಲ ಎಂಬ ಯೋಚನೆ ಈಕೆಯದಾಗಿದೆ. ಇವೆರಡು ಉದಾಹರಣೆಗಳು ವ್ಯವಸ್ಥೆಯ ಸ್ವಾರ್ಥ ಕ್ರೌರ್ಯವೂ ಮುಗ್ಧ ದಲಿತನ ಆಸೆ–ಆಕಾಂಕ್ಷೆಯನ್ನು ನುಂಗಿ ಹಾಕಿರುವುದು ಅನಾವರಣಗೊಂಡಿದೆ.

ಒಡೆಯ ಮತ್ತು ಒಡೆಯನ ತಾಯಿಯ ಯೋಚನೆಯನ್ನು ಗಮನಿಸಿದಾಗ ಹೊಲೆಯನಾದ ಚೋಮ ತನ್ನ ಜಾತಿ ವ್ಯವಸ್ಥೆಯ ವಿರುದ್ಧ, ನನ್ನ ಪಾಲಿಗೆ ಸ್ವಲ್ಪವೂ ಆಸ್ತಿ ಮಾಡಿಲ್ಲ ಎಂಬ ತನ್ನವರ ವಿರುದ್ಧ ಅಥವಾ ತುಂಡು ಭೂಮಿ ಕೊಡದ ಒಡೆಯನ ವಿರುದ್ಧ ಪ್ರತಿಭಟಿಸ ಬೇಕೋ ತಿಳಿಯದೆ ಸಿಟ್ಟು ಬಂದಾಗ ಇವನ ಎರಡು ಎತ್ತುಗಳ ಕಾಲುಗಳಿಗೆ ಹೊಡೆದು, ತನ್ನ ಕೋಪವನ್ನು ತೀರಿಸಿಕೊಳ್ಳುತ್ತಿದ್ದ.

ಈ ಕಾದಂಬರಿಯಲ್ಲಿ ಹೊಲೆಯನಾದವನು ಎಂಥ ಸಮಯದಲ್ಲೂ ಸ್ವಂತ ಭೂಮಿ ಮಾಡಿಕೊಂಡು ಬೇಸಾಯಗಾರನಾಗಬಾರದು ಎಂಬುದೇ ಉಳ್ಳವರ ನಿರ್ಧಾರವಾಗಿತ್ತು. ಆದರೆ ಚೋಮನ ಮಗ 'ಗುರವ'ನ ನಿರ್ಧಾರ ವಿಚಿತ್ರವಾಗಿದ್ದು, ಕ್ರಿಶ್ಚಿಯನ್ ಹುಡುಗಿಯನು ಮದುವೆಯಾಗಿ, ಕ್ರೈಸ್ತ ಮತಕ್ಕೆ ಮತಾಂತರ ಹೊಂದಿ, ನಂತರ ಕ್ರೈಸ್ತ ಜನಾಂಗದವರು ಕೊಟ್ಟ ಭೂಮಿಯನ್ನು ಸಾಗುವಳಿ ಮಾಡಿ ಸ್ವಂತ ಬೇಸಾಯಗಾರ ಎಂಬ ಪಟ್ಟವನ್ನು ಪಡೆದುಕೊಂಡಾಗ ಚೋಮನ ಮನಸು ಡೋಲಾಯಮಾನವಾಗಿ ತನ್ನ ಮಗ ಮತಾಂತರ ಹೊಂದಿದನಲ್ಲ ಎಂದು ಕೋಪಗೊಳ್ಳುವುದೋ? ಅಥವಾ ಜಾತಿ ಬಿಟ್ಟಾದರೂ ಬೇಸಾಯಗಾರನಾದನಲ್ಲ ಎಂಬ ಖುಷಿ ಪಡುವುದೋ? ತಿಳಿಯದವನಾಗುತ್ತನೆ. ಗುರವನ ಬದಲಾವಣೆಯನ್ನು ಗಮನಿಸಿದಾಗ 'ಭೂಮಿ ಬೇಕಾದರೆ ಜಾತಿ, ಜಾತಿ ಬೇಕಾದರೆ ಸ್ವಂತ ಬೇಸಾಯಗಾರನಾಗುವ ಆಸೆ' ಬಿಡಬೇಕಾದ ಯಕ್ಷ ಸಮಸ್ಯೆಯೊಂದು ಚೋಮನಲ್ಲಿ ಉಳಿಯುತ್ತದೆ.

ಮತ್ತೊಂದು ಜಾತಿ ಶೋಷಣೆಯ ಅಂಶವೆಂದರೆ ಚೋಮನ ಇನ್ನೊಬ್ಬ ಮಗ ನೀರು ಕುಡಿಯಲು ಹೊಳೆಗೆ ಹೋದಾಗ, ಕಾಲು ಜಾರಿ, ಈಜು ಬಾರದೆ ಮುಳುಗಿ ಸಾವು ಬದುಕಿನ ನಡುವೆ ಹೋರಾಡುತ್ತಿರುವಾಗ, ಬ್ರಾಹ್ಮಣ ಹುಡುಗನೊಬ್ಬ ಇವನ ಸಹಾಯಕ್ಕೆ ಮುಂದಾದಾಗ, ಬ್ರಾಹ್ಮಣ ಜಾತಿಯ ಜನರು ಹುಡುಗನನ್ನು ತಡೆದು, 'ಅವನು ಹೊಲೆಯಾವ' ಎಂದು ಹೇಳಿ ತಡೆಯುತ್ತಾರೆ. ಅಂದರೆ ಜಾತಿ ಕೀಳಾಗಿರುವುದರಿಂದ ಚೋಮನ ಮಗನ ಪ್ರಾಣ ಉಳಿಸಲು ಯಾರೂ ಮುಂದೆ ಬಾರದೆ, ಪ್ರಾಣಕ್ಕಿಂತ ಜಾತಿಗೆ ಹೆಚ್ಚಿನ ಪ್ರಾಮುಖ್ಯತೆ ತೋರಿಸುವ ಉಳ್ಳವರು ಇಲ್ಲಿ ಮಾನವೀಯತೆಯನ್ನು ಮರೆತು ಜಾತಿ ಶೋಷಣೆ ಮಾಡಿರುವುದು ಕಂಡು ಬರುತ್ತದೆ.

ವ್ಯವಸ್ಥೆಯ ಜಾತಿ ಶೋಷಣೆಯಿಂದ ಬೇಸತ್ತ ಚೋಮ 'ನಾನು ಹೊಲೆಯನಾಗಿರದಿದ್ದರೆ ನನ್ನ ಮಗ ಬದುಕುತ್ತಿದ್ದ' ಎಂದುಮನದಲ್ಲೇ ನೊಂದುಕೊಂಡು ತನ್ನ ಮಗ ಗುರವನ ರೀತಿಯಲ್ಲಿ ಮತಾಂತರ ಹೊಂದಬೇಕೆಂದು ನಿಶ್ಚಯಿಸಿದ್ದು ಉಂಟು. ಆದರೆ ಅವನ ಮನಸ್ಸಿನಲ್ಲಿ ದೇವರು ಮೂಡಿ 'ಈ ಕಾಲಕ್ಕೆ ನನ್ನನ್ನು ಬಿಟ್ಟು ಹೊರಟೆಯಾ' ಎಂಬ ಮಾತಿನಿಂದ ಇವನ ಮತಾಂತರದ ಆಸೆ ಮರೆಯಾಗುತ್ತದೆ.

ಒಟ್ಟಿನಲ್ಲಿ ಈ ಕಾದಂಬರಿಯಲ್ಲಿ ಹೊಲೆಯನೆನಿಸಿಕೊಂಡವನು ಹೊಲೆಯನಾಗಿಯೇ ಇದ್ದು, ಉಳ್ಳವರ ಆಸ್ತಿಯಾಗಿ, ಜೀತ, ಸೇವೆ ಮುಂತಾದ ಕಾರ್ಯಗಳಲ್ಲೇ ನಿರತನಾಗಿದ್ದು, ಜೀವಿತದ ಕೊನೆಯವರೆಗೂ ನಂಬಿಕಸ್ಥ ಸೇವಕನಾಗರಬೇಕೆಂಬುದು ಸ್ಪಷ್ಟವಾಗಿದೆ.

# ಅಧ್ಯಾಯ–5
## ಪ್ರತಿಭಟನೆಯ ನೆಲೆಗಳು

ಪ್ರತಿಭಟನೆ ಎಂದಾಕ್ಷಣ ಸಾಮಾನ್ಯವಾಗಿ ಬೇರೆಯವರಿಗೆ ಧಿಕ್ಕಾರ ಕೂಗುವುದು, ಕಪ್ಪು ಪಟ್ಟಿ ಧರಿಸಿ, ರಸ್ತೆಗಿಳಿದು ವಿರೋಧಿಸುವ ಪ್ರಕ್ರಿಯೆಗಳು, ಕೆಲಸ ಕಾರ್ಯಗಳನ್ನು ಬಿಟ್ಟು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಉದ್ದೇಶದಿಂದ ಅಹಿತಕರ ಘಟನೆಗಳಿಗೆ ಕಾರಣವಾಗುವುದು, ಕಲ್ಲು ತೂರುವುದು, ಕೂಗುವುದು, ರಸ್ತೆಯಲ್ಲಿ ಕೂತು ವಾಹನ ಸಂಚಾರಕ್ಕೆ ಅಡಚಣೆ ಉಂಟುಮಾಡುವ ಸನ್ನಿವೇಶಗಳು ಕಂಡುಬರುತ್ತವೆ. ಇವಿಷ್ಟು ಸಾಮಾನ್ಯ ಜನತೆಯಲ್ಲಿ, ಸಮಾಜದ ಹೊರ ಪ್ರಪಂಚದಲ್ಲಿ ಕಂಡು ಬರುವ ಪ್ರತಿಭಟನೆಯ ನೆಲೆಗಳು. ಈ ನೆಲೆಗಳಲ್ಲಿ ಸ್ವಾರ್ಥ ಸಾಧನೆಯ ಉದ್ದೇಶವನ್ನು ಕಾಣಬಹುದು. ಇಲ್ಲಿನ ಪ್ರತಿಭಟನೆಯ ನೆಲೆಗಳು ಸಾಹಿತ್ಯಿಕ ಉದ್ದೇಶದಿಂದ ಹೊರಗುಳಿಯುವ ನೆಲೆಗಳಾಗಿವೆ. ಸಾಹಿತ್ಯಿಕ ಪರಿಭಾಷೆಯಲ್ಲಿ 'ಪ್ರತಿಭಟನೆ' ಎಂದರೆ ಅದು ಒಂದು ಕಾಲ ಘಟ್ಟದ ಸಾಹಿತ್ಯವನ್ನು, ಇನ್ನೊಂದು ಕಾಲಘಟ್ಟದ ಸಾಹಿತ್ಯದವರು ವಿರೋಧಿಸುವ, ಒಬ್ಬರ ಹೇಳಿಕೆಯನ್ನು ಇನ್ನೊಬ್ಬರು ವಿರೋಧಿಸುವ, ಅದರ ವಿರುದ್ಧ ಪ್ರತಿಭಟಿಸುವ ಅಂಶಗಳು ಕಂಡುಬರುತ್ತವೆ. ಇಲ್ಲಿ ಒಬ್ಬರ ಹೇಳಿಕೆಯನ್ನು ಸಮರ್ಥಿಸಿಕೊಳ್ಳವಾಗಲು ಪ್ರತಿಭಟನೆಯ ಅಲೆ ಏಳುವುದುಂಟು. ಆದರೆ ದಲಿತ ಸಾಹಿತ್ಯದ ಪ್ರಮುಖ ಪ್ರಾಕಾರವಾದ 'ಕಾವ್ಯ'ದಲ್ಲಿ ವ್ಯಕ್ತವಾಗುವ 'ಪ್ರತಿಭಟನೆಯ ನೆಲೆಗಳು' ತೀರ ವಿಭಿನ್ನವಾಗಿರುತ್ತವೆ. ಕಾವ್ಯದಲ್ಲಿ ವ್ಯಕ್ತಗೊಂಡಿರುವ ಅಸ್ಪೃಶ್ಯತೆ, ಅಕ್ಷರ ವಂಚನೆ, ಸಾಮಾಜಿಕ ಬಹಿಷ್ಕಾರಗಳು, ಹಸಿವಿನ ನರಳಾಟ, ನೋವಿನ ಚಿತ್ರಣಗಳೆಲ್ಲಾವು ಒಟ್ಟು ತಳ ಸಮುದಾಯದ ಶೋಷಣೆಯ ಕೇಂದ್ರ ಬಿಂದುಗಳಾಗಿರುತ್ತವೆ. ತನ್ನ ಸಮುದಾಯದವರು ಎದುರಿಸುತ್ತಿರುವ ಶೋಷಣೆಗಳನ್ನು ಪ್ರತಿಭಟಿಸುವ ಸಲುವಾಗಿ, ಕಾವ್ಯಗಳು ಶ್ರಮಿಸಿರುವುದರಿಂದ ದಲಿತ ಕಾವ್ಯ ಇತರೆ ಕಾವ್ಯಗಳಿಗಿಂತ ಭಿನ್ನವಾಗಿರುತ್ತವೆ. ದಲಿತ ಕಾವ್ಯಗಳಲ್ಲಿ ಮುಖ್ಯವಾಗಿ ಕಂಡು ಬರುವ ಪ್ರತಿಭಟನೆಯ ನೆಲೆಗಳೆಂದರೆ, 'ಅಸ್ಪೃಶ್ಯತೆ : ಪ್ರತಿಭಟನೆ', 'ಹಸಿವು : ಪ್ರತಿಭಟನೆ', 'ನೋವು : ಪ್ರತಿಭಟನೆ', 'ಲೈಂಗಿಕ ಶೋಷಣೆ : ಪ್ರತಿಭಟನೆ', 'ಅರಿವಿನ ವಂಚನೆ : ಪ್ರತಿಭಟನೆ' ಇವಿಷ್ಟು ತಳ ಸಮುದಾಯದ ಶೋಷಣೆಯ ಹಾಗೂ ಪ್ರತಿಭಟನೆಯ ಜೀವಂತ ನೆಲೆಗಳಾಗಿರುತ್ತವೆ.

ಈ ನೆಲೆಗಳಲ್ಲಿ ದಲಿತ ಕವಿಗಳು ಬರೀ ಉಳ್ಳವರನ್ನು ಭಯ, ಮೌಢ್ಯತೆ, ಅಂಧಕಾರ, ಅಸಹಾಯಕತೆಗಳ ಜತೆಗೆ 'ಜಾತಿ'ಯ ಕರಾಳತೆಯನ್ನು ಪ್ರತಿಭಟಿಸುತ್ತಾರೆ. ಒಂದು ಕಡೆ ಕವಿ ತನ್ನವರನ್ನು ನೇರವಾಗಿ ಪ್ರತಿಭಟಿಸಿದರೆ, ಮತ್ತೊಂದು ಕಡೆ ವ್ಯವಸ್ಥೆಯಿಂದ ತನ್ನವರಿಗಾದ ಶೋಷಣೆಯನ್ನು ಪ್ರತಿಭಟಿಸುತ್ತಾರೆ. ತನ್ನ ಅನುಭವಕ್ಕೆ ಬಂದ , ತಾವೇ ಸ್ವಂತ ಅನುಭವಿಸಿದ ಶೋಷಣೆಯ ಅಂಶಗಳನ್ನು ಪ್ರತಿಭಟಿಸುವುದು ಇಲ್ಲಿನ ಇನ್ನೊಂದು ವಿಶೇಷ. ಇಲ್ಲಿ ವ್ಯಕ್ತವಾಗಿರುವ ಪ್ರತಿಭಟನೆಯ ನೆಲೆಗಳು ಸ್ವಂತಿಕೆಯಿಂದ ಕೂಡಿದು, ಎಲ್ಲಿಯೂ ಭಯವಾಗಲಿ, ಅಂಜಿಕೆಯಾಗಲಿ, ದರ್ಪವಾಗಲಿ, ಒಣ ಪ್ರತಿಷ್ಠೆಯಾಗಲಿ, ಅಹಂಕಾರದ ಭಾವನೆಯಾಗಲಿ ಪ್ರಕಟಗೊಳ್ಳುವುದಿಲ್ಲ. ಇದರ ಬದಲಿಗೆ ತನ್ನವರಲ್ಲೇ ಅಡಗಿರುವ ಭಯದ ಅನಾವರಣ, ವ್ಯವಸ್ಥೆಯ ದೌರ್ಜನ್ಯ, 'ಜಾತಿ'ಯ ಪರಾಕಾಷ್ಠೆ, ದಲಿತ ಕವಿಗಳ ಸಿಟ್ಟು, ಮನವಿ, ತಾಳ್ಮೆಯ ಗುಣಗಳನ್ನು ಕಾಣಬಹುದು. ಈಗಾಗಲೇ ತಿಳಿಸಿರುವ ಪ್ರತಿಭಟನೆಯ ನೆಲೆಗಳ ಸ್ಥೂಲ ವಿವರಣೆಯನ್ನು ಈ ಅಧ್ಯಾಯದ ಮುಂದಿನ ಭಾಗದಲ್ಲಿ ಕಂಡು ಬರುತ್ತದೆ.

## ಅ. 'ಅಸ್ಪೃಶ್ಯತೆ : ಪ್ರತಿಭಟನೆ'

'ಅಸ್ಪೃಶ್ಯತೆ' ದಲಿತ ಸಮುದಾಯಕ್ಕೆ ಅಂಟಿದ ದೊಡ್ಡ ಕಳಂಕ. ದಲಿತರು ಲ್ಲ ಅಸ್ಪೃಶ್ಯರು ಎಂಬ ಕಾರಣಕ್ಕಾಗಿ ಸಮಾಜದಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಶೋಷಣೆಗಳು ಹೆಚ್ಚಾಗಿವೆ. ಇಲ್ಲಿ 'ಜಾತಿ' 'ಅಸ್ಪೃಶ್ಯತೆ' ಹೆಚ್ಚು ಪ್ರಭಾವ ಉಂಟುಮಾಡಿದೆ. 'ಜಾತಿ' ಹೀನ ಎಂಬ ಕಾರಣಕ್ಕೆ ದಲಿತರನ್ನು ಎಲ್ಲಾ ಕ್ಷೇತ್ರಗಳಲ್ಲೂ ಅಸ್ಪೃಶ್ಯತೆ ಕಾಡಿರುವ ಅಂಶಗಳು ಕಂಡು ಬರುತ್ತವೆ. ಅಸ್ಪೃಶ್ಯತೆಯಿಂದಾಗಿ ದಲಿತರು ಮೇಲ್ವರ್ಗದವರನ್ನು, ಮೇಲ್ವರ್ಗದವರು ದಲಿತರನ್ನು ಮುಟ್ಟುವ ಹಾಗಿರಲ್ಲಿಲ. ಹಾಗೂ ನಡೆದಾಡುವ ರಸ್ತೆ, ಸಾರ್ವಜನಿಕ ಕ್ಷೇತ್ರಗಳಲ್ಲಿ ಮಾಡುವ ಕೆಲಸ, ತಿನ್ನುವ ಆಹಾರದ ಮೇಲೂ ಅಸ್ಪೃಶ್ಯತೆಯ ಪ್ರಭಾವ ಉಂಟಾಗಿದೆ. ಇದು ವ್ಯವಸ್ಥೆ ಅಸ್ಪೃಶ್ಯರ ಮೇಲೆ ತನ್ನ 'ಪ್ರಭುತ್ವ' ಹೇರಿರುವುದನ್ನು ಸೂಚಿಸುತ್ತದೆ. ಇಂಥ ಉಸಿರುಗಟ್ಟಿಸುವ ಪರಿಣಾಮಗಳು ದಲಿತರಿಗೆ ಶೋಷಣೆಯಾಗಿ, ಅವಕಾಶಗಳಿಂದ ವಂಚಿತರಾಗುವಂತೆ, ಅವಮಾನವನ್ನು ಅನುಭವಿಸುವಂತೆ ಮಾಡಿದೆ.

'ಅಸ್ಪೃಶ್ಯತೆ'ಗಳ ಪಟ್ಟಿಯಲ್ಲಿ 'ಜಾತಿ'ಅಸ್ಪೃಶ್ಯತೆ, 'ಶೈಕ್ಷಣಿಕ'ಅಸ್ಪೃಶ್ಯತೆ, 'ಸಾಮಾಜಿಕ'ಅಸ್ಪೃಶ್ಯತೆ, 'ಧಾರ್ಮಿಕ' ಅಸ್ಪೃಶ್ಯತೆ ಎಂಬಿತ್ಯಾದಿ ಅಂಶಗಳು ಸೇರಿಕೊಳ್ಳುತ್ತವೆ. 'ಜಾತಿ' ಅಸ್ಪೃಶ್ಯತೆ ಎಂದಾಗ ಚಾತುರ್ವಣಗಳಿಂದಲೂ ಕೆಳಗೆ ಇದ್ದ ಸಮುದಾಯಗಳು ಅಂದರೇ 'ಅಸ್ಪೃಶ್ಯ'ರು ಸಮಾಜದ ಎಲ್ಲಾ ಅನಿಷ್ಟಗಳ ಕೇಂದ್ರ ಬಿಂದುವಾಗಿ, ಶೋಷಣೆಯನ್ನು ಅನುಭವಿಸಿದರು. 'ಶೈಕ್ಷಣಿಕ' ಅಸಮಾನತೆಯಲ್ಲಿ ಒಂದು ಕಾಲದಲ್ಲಿ ಮೇಲ್ವರ್ಗದವರಿಗೆ ಮಾತ್ರ ವಿದ್ಯೆ ಮೀಸಲು ಎನ್ನುವಂತಾಗಿದ್ದು, ಅಲ್ಲಿ ಬ್ರಾಹ್ಮಣರಿಗೆ ಹೆಚ್ಚು ಪ್ರಾಮುಖ್ಯತೆ ನೀಡಲಾಗುತ್ತಿತ್ತು. ಇವರ ಹೊರತು ಬೇರೆಯವರಿಗೆ ಅಂದರೆ ಉತ್ತಮ ಕುಲವದರು ಕೂಡ 'ಶೈಕ್ಷಣಿಕ ಸಮಾನತೆ'ಯನ್ನು ಅನುಭವಿಸುತ್ತಿದ್ದರು. ಆದರೆ ದಲಿತ ಸಮುದಾಯಕ್ಕೆ ಮಾತ್ರ ವಿದ್ಯೆ ದಕ್ಕದೇ ಶೋಷಣೆ ಉಂಟಾಯಿತು. ಸಾಮಾಜಿಕ ಅಸ್ಪೃಶ್ಯತೆ ಎಂಬಲ್ಲಿ ಊರಿನ ಒಳಭಾಗದಲ್ಲಿ ವಾಸಿಸಲು ಅವಕಾಶ ಕೊಡದೆ ಹೊರ ಭಾಗದಲ್ಲಿ (ಊರಿನ ದಕ್ಷಿಣ ದಿಕ್ಕಿನಲ್ಲಿ ಎಂಬ ಮಾತಿದೆ) ವಾಸಿಸುವಂತಹ ದುರ್ಗತಿ ಎದುರಾಗಿ, ಉತ್ತಮರು ಓಡಾಡುವ ರಸ್ತೆಯಲ್ಲಿ ದಲಿತರು ಓಡಾಡದಂತೆ ನಿಷೇಧ ಹೇರಿದ್ದರಿಂದ ದಲಿತ ಸಮುದಾಯ ಅಕ್ಷರಶಃ ಜರ್ಜರಿತವಾಗಿತ್ತು. ಇನ್ನು 'ಧಾರ್ಮಿಕ' ವಿಷಯದಲ್ಲಿ 'ಜಾತಿ' ಹೀನ ಎಂಬ ಉದ್ದೇಶಕ್ಕೆ ದೇವಸ್ಥಾನದ ಪ್ರವೇಶವನ್ನು ನಿಷೇಧಿಸಿದ್ದರು.

ಇಂಥ ಅನೇಕ ಶೋಷಣೆಗಳನ್ನು ದಲಿತ ಕಾವ್ಯಗಳಲ್ಲಿ ಕಾಣಬಹುದು ಡಾ. ಅಂಬೇಡ್ಕರ್‌ರವರು 'ಮಹಾಡ್' ಕೆರೆ ನೀರು ಕುಡಿದು 'ಸಮಾನತೆ'ಗೆ ನಾಂದಿ ಹಾಡಿದರು. ಅಂದರೆ ಅಸ್ಪೃಶ್ಯತೆ ಎಂಬ ವಿಷ ಬೀಜದಿಂದ ನರಳಿದ ಅದೇಷ್ಟೋ ಮಂದಿಯ ನೆನಪು ಇಲ್ಲಾಗುತ್ತದೆ. ಇನ್ನೂ ಅನೇಕ ರೀತಿಯ'ಅಸ್ಪೃಶ್ಯತೆ'ಗಳನ್ನು ಸ್ವತಹಃ ತಾವೇ ಅನುಭವಿಸಿದ ದಲಿತ ಕವಿಗಳು ಅದನ್ನು ದೂರ ಮಾಡಲು, 'ಅಸ್ಪೃಶ್ಯತೆ'ಯ ಅರಿವನ್ನು ತನ್ನವರಲ್ಲಿ ಮೂಡಿಸಿ, ಇದರ ವಿರುದ್ಧ ಎಚ್ಚೆತ್ತಿಕೊಳ್ಳಲು ಕಾವ್ಯದ ಮೂಲಕ ಪ್ರಯತ್ನಿಸಿದ್ದಾರೆ.

ಸ್ವತಹ ಅನುಭವಿಸಿದ 'ಅಸ್ಪೃಶ್ಯತೆ ಶೋಷಣೆ'ಯ ಕಾರಣವಾಗಿ ಕವಿಗಳಲ್ಲಿ 'ಕಾವ್ಯ' ಸೃಷ್ಟಿಯಾಯಿತು. ಅಂದರೆ ಅವರ ಪೂರ್ವಜರು ಹಾಗೂ ಕಣ್ಣ ಮುಂದಿರುವ ತಂದೆ–ತಾಯಂದಿರು ತಮ್ಮ ಇಳಿವಯಸ್ಸಿನಲ್ಲೂ ಪಡುವ ಕಷ್ಟ, ಪಡಿ–ಪಾಟಲುಗಳನ್ನು ಕಣ್ಣಾರೆ ನೋಡಿಯೂ, ನೋಡದಂತಹ ಅನಿವಾರ್ಯತೆಗಳೇ 'ಕಾವ್ಯ' ಪ್ರಯೋಗಕ್ಕೆ ಬುನಾದಿಯಾಗಿದೆ. ಉಳ್ಳವರ ಸಮಾಜಕ್ಕೆ ದಲಿತ ಮಕ್ಕಳೇ ಅಸ್ತ್ರವಾಗಿ, ಆ ಮಕ್ಕಳು ಜೀತಕ್ಕೆ ಅಥವಾ ಕೆಲಸಕ್ಕೆ ನಿಯೋಜಿತವಾದರೆ ಮಾತ್ರ ಸಾಲ ಎಂಬ ನಿಬಂಧನೆಯ ಬೆದರಿಕೆಗೆ ತಲೆಬಾಗಿ, ಉತ್ತಮ ಭವಿಷ್ಯದ ಕನಸು ಕಾಣುವ ಮಕ್ಕಳ ಬದುಕು ಅನಿವಾರ್ಯವಾಗಿ, ಜೀತದ ಕುಣಿಕೆಗೆ ಸಿಲುಕಿದ್ದಕ್ಕೂ 'ಸಾಮಾಜಿಕಅಸ್ಪೃಶ್ಯತೆ'ಯೇ ಕಾರಣವೆಂಬುದು ದಲಿತ ಕಾವ್ಯಗಳ ಮೂಲಕ ಸಾದರಗೊಂಡಿರುತ್ತದೆ.

ಒಟ್ಟಿನಲ್ಲಿ ಸಮಾಜವನ್ನು ಜಾತಿಗಳಾಗಿ ವಿಂಗಡಿಸಿ, ಇವುಗಳ ನಡುವೆ ಭೇದ ನಿರ್ಮಿಸಿ, ಮೇಲು–ಕೀಳು ಅಥವಾ ಸವರ್ಣ–ಅವರ್ಣ, ಸ್ಪೃಶ್ಯ, ಅಸ್ಪೃಶ್ಯ ಎಂಬಂತಹ ತಾರತಮ್ಯಗಳು ಆಚರಣೆಯಲ್ಲಿದ್ದವು. ಸವರ್ಣೀಯರು, ಜಮೀನ್ದಾರರು, ರಾಜಕಾರಣಿಗಳು, ಮಾಲೀಕರು, ಯಜಮಾನರು ಎಂಬ ಈ ವರ್ಗಗಳಿಂದ ದಲಿತರು ಅನುಭವಿಸಿದ ಅವಮಾನ ದಲಿತ ಕಾವ್ಯದ ವಸ್ತುವಾಗಿ, ಈ ಬಗೆಯ ಶೋಷಣೆ ಅಥವಾ ಶೋಷಕರ ಬಗೆಗೆ ದಲಿತ ಕಾವ್ಯದ ನಿಲುವುಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಶೋಷಣೆಗೊಳಗಾದ, ದುಡಿದು ದುಡಿದು ಹಣ್ಣಾದ, ಸದಾ ನೋವಿನಿಂದ ನರಳಿದ ಸಮುದಾಯವು ಬದುಕಿನ ಗಾಢ ಅನುಭವದಲ್ಲಿ ಬೆಂದು, ಮಾಗಿದ ಸಮಚಿತ್ತದ ಅಭಿವ್ಯಕ್ತಿಯನ್ನು 'ಅಪ್ಪ ಹೇಳಿದ ಕಥೆ' ಎಂಬ ಕವನದಲ್ಲಿ ಪ್ರಾಣಿಗಳ ಉದಾಹರಣೆಯೊಂದಿಗೆ ನಿರೂಪಿಸಲಾಗಿದೆ.

ಊರ ಎಲ್ಲ ನಾಯಿಗಳಿಗೂ ವಾರಸುದಾರರಿಲ್ಲ
ಇದಿಂತಿರಲಾಗಿ
ವಾರಸುದಾರರಿಲ್ಲದ ಕೊತ್ತಿ ಊರಲ್ಲಿ ಅತಿ ವಿರಳ
ಒಂದಾನೊಂದು ಊರು
ಅಲ್ಲಿರುವುದು ಎರಡೇ ಸೂರು
ಒಂದು ಧರ್ಮ ಸಾರುವ ಮಹಲು
ಮತ್ತಿನೊಂದು
ಕರ್ಮದ ಕತೆ ಹೇಳುವ ಗುಳ್ಳು

(ಜವರಯ್ಯ ಮ.ನ., ವಿದ್ರೋಹ, 2002, ಪುಟ 61)

ತನಗಿಂತ ಬಲಹೀನವಾದ ವ್ಯಕ್ತಿಗಳಿಗೆ, ಬಲಾಢ್ಯರು ನಿರ್ಮಿಸಿರುವ 'ಅಸ್ಪೃಶ್ಯತೆ'ಯ ಧರ್ಮವೇ ದಾರಿ ದೀಪವಾಗುತ್ತದೆ. ಇದನ್ನು ಸಾರುವ ಸಾಲುಗಳಿವು. 'ನಾಯಿ' ತನ್ನ ದಬ್ಬಾಳಿಕೆಯಿಂದ ತನಗಿಂತ ದುರ್ಬಲವಾಗಿರುವ ಬೆಕ್ಕಿನ ಮೇಲೆ ಪರಾಕ್ರಮ ಮೆರೆವಂತೆ 'ವ್ಯವಸ್ಥೆ'ಯು ದಲಿತ ಸಮುದಾಯದ ಮೇಲೆ ಸವಾರಿ ಮಾಡುತ್ತಿರುವುದು ಕಾವ್ಯದಲ್ಲಿ ಚಿತ್ರಿತವಾಗಿದೆ. ಸಮುದಾಯಕ್ಕೆ ವಾರಸುದಾರರ ನೆಪದಲ್ಲಿ 'ಅಸ್ಪೃಶ್ಯತೆ' ತೋರುತ್ತಿರುವುದು ನಮ್ಮ ಕರ್ಮವೆಂದು ಕವಿ ಕಾವ್ಯದ ಮೂಲಕ ಪ್ರತಿಭಟಿಸುತ್ತಿದ್ದಾರೆ.

ನಾಯಿ ಶ್ರೀಮಂತರಿಗೆ, ಮೇಲ್ಜಾತಿಗೆ ಸಂಕೇತವಾದರೆ, ಕೊತ್ತಿಯನ್ನು ಸಾಮಾನ್ಯ ಬಡವರಿಗೆ ಕೆಳ ಜಾತಿಗೆ ಸಂಕೇತಿಸಲಾಗಿದ್ದು, ಕವಿ ಮೇಲ್ಜಾತಿಯ 'ಎಡಬಿಡಂಗಿ'ತನವನ್ನು ತಿಳಿಸಿದ್ದಾರೆ. ಇಲ್ಲಿನ 'ವ್ಯವಸ್ಥೆ'ಯಲ್ಲಿ ಮೌನದ ಕೂಪವಾದ ಕೊತ್ತಿ, ಸದಾ ಬಾಯಿ ಬಡುಕ ಸರದಾರ ನಾಯಿಗಳ ಬದುಕಿನಲ್ಲಿ ಎದುರಾಗುವ 'ಅಸ್ಪೃಶ್ಯತೆ'ಯನ್ನು ಕಣ್ಮುಂದೆ ನಿಲ್ಲಿಸಿದ್ದಾರೆ. 'ಮಹಲು' ಎಂಬಲ್ಲಿ 'ಜಾತಿ' ಹೆಸರಿನಿಂದ ಮಾಡಿದ, ಶೋಷಣೆಯಿಂದಾಗಿ ಇದನ್ನು ಕಟ್ಟಿದ್ದಾರೆಂದು ಹಾಗೂ 'ಕರ್ಮದ ಕತೆಯಗುಳ್ಳು' ಎಂಬಲ್ಲಿ ಶೋಷಣೆ, ಅಸ್ಪೃಶ್ಯತೆಗೆ ಗುರಿಯಾಗಿ 'ಗುಳ್ಳು' ಸೇರಿಕೊಂಡ ಸ್ಥಿತಿಯನ್ನು ಕವಿ ನಾಯಿ ಮತ್ತು ಕೊತ್ತಿಯ ಪ್ರತೀಕದಲ್ಲಿ 'ಜಾತಿ' ಸಂಘರ್ಷವನ್ನು ಬಿಚ್ಚಿಟ್ಟಿದ್ದಾರೆ. ಒಟ್ಟಿನಲ್ಲಿ 'ವ್ಯವಸ್ಥೆ'ಯಿಂದ ಸಮುದಾಯಕ್ಕಾದ 'ಅಸ್ಪೃಶ್ಯತೆ'ಯ ಶೋಷಣೆ ಇಂದಿನದ್ದಲ್ಲ. ಜೀವನದ ದಾರಿಯಲ್ಲಿ ಬಹುದೂರ ಸಾಗಿ ಬಂದಿರುವಂತದ್ದು ಎಂಬ ಸತ್ಯ ಗೋಚರಿಸಿದೆ.

'ಅಸ್ಪೃಶ್ಯತೆ' ಎಂಬ ವಿಷಯ ಬಂದಾಗ ದಲಿತರಿಗೆ ಇಂದಿಗೂ ಇದೊಂದು ಪಿಡುಗಾಗಿ ಕೆಲಸ ಮಾಡುತ್ತಲೇ ಬಂದಿದೆ. ಇದನ್ನು ಬಗ್ಗು ಬಡಿಯುವ ಪ್ರಯತ್ನಗಳು ನಡೆಯುತ್ತಲೇ ಇದ್ದರೂ, ಇದರ ಅಟ್ಟಹಾಸ ಮಾತ್ರ ಕಡಿಮೆಯಾಗಿಲ್ಲ. 'ಅಸ್ಪೃಶ್ಯತೆ'ಯ ನೆಲೆಯಲ್ಲಿ 'ಕನ್ನಡ ಕಟ್ಟಾಳು' ಎಂಬ ಕವನವನ್ನು ಕಾಣಬಹುದು.

ಒಂದನೇ ಏಟು
ಮೆಡಿಕಲ್ ಓದಲು ಹೋದದ್ದಕ್ಕೆ
ಎರಡನೇ ಏಟು–
ನಮ್ಮ ಜಾತಿಕುಲ ಕೆಡಿಸಿದ್ದಕ್ಕೆ
ಮೂರನೇ ಏಟು–
ಹೊಲೆಯನ ಮದುವೆ ಆದದ್ದಕ್ಕೆ

(ಜವರಯ್ಯ ಮ.ನ., ವಿದ್ರೋಹ, 2002, ಪುಟ 22)

'ವ್ಯವಸ್ಥೆ'ಯ ಒಂದು ಮುಖ ಸಮಾನತೆಗೆ ತೆರೆದುಕೊಳ್ಳಲು ತಯಾರಿದ್ದರೇ, ಇದನ್ನು ವಿರೋಧಿಸುವುದು 'ವ್ಯವಸ್ಥೆ'ಯ ಇನ್ನೊಂದು ಮುಖವಾಗಿದೆ. ಮೆಡಿಕಲ್ ಓದಿದ ಹುಡುಗಿಗೆ 'ಸಮಾನತೆ'ಯ ಅರಿವಾಗಿ, ಅಂತರ್ ಜಾತಿ ವಿವಾಹದಿಂದ 'ಅಸ್ಪೃಶ್ಯತೆ' ದೂರವಾಗುವುದೆಂಬ ತನ್ನ ಜಾಣ್ಮೆಯಿಂದ ಹೊಲೆಯನನ್ನು ಮದುವೆ ಆಗಿದ್ದೇ 'ವ್ಯವಸ್ಥೆ' ಎಂಬ ತಂದೆಗೆ ಕೋಪ ಬಂದಿದೆ. ಅಂದರೇ 'ವ್ಯವಸ್ಥೆ' ಎಂಬ ಹಳೆಯ ಪೀಳಿಗೆ, ಹೊಸ ಪೀಳಿಗೆಯನ್ನು ತನ್ನ ಸ್ವಾಧಿನತೆಗೆ ಎಳೆದಿರುವುದು ಕವಿಯ ಪ್ರತಿಭಟನೆಗೆ ಕಾರಣವಾಗಿದೆ. 'ಅಸ್ಪೃಶ್ಯತೆ'ಯೇ ಕವನದ ಹಿನ್ನೆಲೆ. ದಲಿತ ಹುಡುಗನನ್ನು ಮದುವೆಯಾದ ಸವರ್ಣೀಯ 'ಕಟ್ಟಾಳು'ವಿನ ಮಗಳಿಗೆ ತಂದೆಯೇ ಚಪ್ಪಲಿಯಲ್ಲಿ ಮೂರೇಟು ಹೊಡೆಯುವುದರ ಜತೆಗೆ ಮೂರು ಸಮರ್ಥನೆ ನೀಡುವನು.ಇಲ್ಲಿನ 'ವ್ಯವಸ್ಥೆ' ಎಂಬ ತಂದೆಯು ಜಾತಿ ಪ್ರತಿಷ್ಠೆಯ ನೆಪವೊಡ್ಡಿ, ತನ್ನ ಮಗಳ ವಿರುದ್ಧ ಕಠಿಣವಾಗಿರುವ ಚಿತ್ರಣವಿದೆ. 'ಕಟ್ಟಾಳು' ಒಂದು ಜಾತಿ 'ವ್ಯವಸ್ಥೆ'ಯ ಕಟ್ಟಾಳುವಾಗಿ, ದಲಿತ ಹುಡುಗನನ್ನು ಮದುವೆಯಾಗಿದಕ್ಕೆ ಚಪ್ಪಲಿ ಏಟು ನೀಡುವುದು ಅಸ್ಪೃಶ್ಯತೆಯ ಇನ್ನೊಂದು ಅವತಾರವಾಗಿ ಮೇಲಿನ ಕವಿತೆಯ ಸಾಲುಗಳಲ್ಲಿ ಮೂಡಿ ಬಂದಿದೆ. 'ವರ್ಣ ವ್ಯವಸ್ಥೆ'ಯು ಎಂದೂ ಬಹುಮುಖೀ ನೆಲೆಯನ್ನು ಸ್ವೀಕರಿಸದ ಕಾರಣ, ಸಮಾಜದ ಅಂಚಿನಲ್ಲಿರುವ ಸಮುದಾಯ ತಮ್ಮ ಅಸ್ತಿತ್ವವನ್ನು, ತಮ್ಮದೇ ಆದ ಪರಂಪರೆಯನ್ನು ಗುರ್ತಿಸಿಕೊಳ್ಳುವ ತವಕದಲ್ಲಿತ್ತು.

ಅಸ್ಪೃಶ್ಯತೆಗೊಳಗಾದ, ದಮನಕ್ಕೊಳಗಾದ ದಲಿತ ಸಮುದಾಯದ ಅಥವಾ ಜನಾಂಗದ ಪ್ರತಿನಿಧಿ ಇದನ್ನರಿತು ತನ್ನವರಿಗಾದ ಅಸ್ಪೃಶ್ಯತೆಯ ಶೋಷಣೆಯನ್ನು 'ಅಪ್ಪಾ' ಎಂಬ ಕವನದಲ್ಲಿ ಬಿಂಬಿಸಿದ್ದಾರೆ.

ಹಣೆಯ ಮೇಲಿನ ಸುಕ್ಕು ಮೈಯ ಒಳಗಿನ ದೊಕ್ಕು
ಹೇಳುತ್ತದೆ ನೂರಾರು ಇತಿಹಾಸ ನನಗೆ
ಹರೆಯದರ್ಧಾಜೀವ ಜೀತದಲಿ ಸವೆದಿತ್ತು
ಉಳಿದರ್ಧ ಜೀವನವು ಮಣ್ಣಿನಲಿ ಮರವಾಯ್ತು
ನೀ ಉಳುವ ನೇಗಿಲಿಗೆ ಕಬ್ಬಿಣದ ಗುಳವಾದೆ
ಜೊಳ್ಳು ಬೀಜವ ಬಿತ್ತಿ ಸೂರ್ಯಕಾಂತಿಯ ಬೆಳೆದೆ
(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 235)

( ಕವಿ ಇಲ್ಲಿ ತನ್ನ ತಂದೆಯ ಚಿತ್ರಣ ಕೊಡದೆ, ಒಂದು ಸಮುದಾಯದ ಬದುಕಿನ ಇತಿಹಾಸದ ಕಟು ಸತ್ಯವನ್ನು, ದನಿಯಾಗಿ ನುಡಿದಿದ್ದಾರೆ. 'ಹಳೆಯದರ್ಧಾ ಜೀವ ಜೀತದಲ್ಲಿ ಸವೆದಿತ್ತು' ಎನ್ನುವ ಸಮುದಾಯವು ತಮ್ಮ ಯೌವನವನ್ನು ಜಾತಿ ತಾರತಮ್ಯದಿಂದಾಗಿ 'ಜೀತ'ದಲ್ಲಿ ಕಳೆದಿರುವುದು ಕಂಡು ಬರುತ್ತದೆ. 'ಬಾಳ ಪಯಣದ ತುಂಬ ಜಾಲಿಮುಳ್ಳು' ಇಲ್ಲಿ ಜಾಲಿ ಮರಕ್ಕೆ ಎಲೆಗಿಂತ ಮುಳ್ಳೆ ಹೆಚ್ಚಾಗಿರುವಂತೆ ದಲಿತ ಸಮುದಾಯಕ್ಕೆ 'ವ್ಯವಸ್ಥೆ'ಯಿಂದ ಹೆಚ್ಚು ಅವಮಾನ, ಅಸಮಾನತೆಯೇ ಉಂಟಾಗಿದೆ ಎಂಬುದು ಕವಿಯ ಅಭಿಪ್ರಾಯವಾಗಿದೆ. ಕವಿಗೆ ತನ್ನ ಸಮುದಾಯದವರ ಸಂಕಟದ ಇತಿಹಾಸವನ್ನು ಅವರ ದೇಹದ ಚಹರೆಯಿಂದಲೇ ಕಾಣಿಸುತ್ತಿದೆ. ಜೀವಿತಾವಧಿಯ ಪ್ರತಿ ಕ್ಷಣವೂ 'ವ್ಯವಸ್ಥೆ'ಯ ಜೀತದಾಳಾಗಿ ದುಡಿದು, ಅವರ ಬಾಳಿಗೆ ಸೂರ್ಯನಾಗಿ, ತಮ್ಮವರ ಬಾಳಿನಲ್ಲಿ ಕತ್ತಲು ಆವರಿಸಿಕೊಳ್ಳಲು 'ಜಾತಿಅಸ್ಪೃಶ್ಯತೆ'ಯೇ ಕಾರಣವೆಂದು ತನ್ನವರ 'ಜೀತ'ದ ಇತಿಹಾಸವನ್ನು ಸ್ಮರಿಸುತ್ತ ಪ್ರತಿಭಟಿಸುತ್ತಿದ್ದಾರೆ.'ಸ್ಪೃಶ್ಯ'ರ ಶೋಷಣೆಯಿಂದ ಉರಿಬಿಸಿಲಿನಲ್ಲಿ ದುಡಿದ ದಲಿತರ ಸ್ಥಿತಿ ಕೆಟ್ಟುನಿಂತ ಕಾರಿನಂತಾಗಿದೆ. ಕಾಲ ಬದಲಾದರೂ 'ವ್ಯವಸ್ಥೆ'ಯ ಅಸ್ಪೃಶ್ಯತೆಯ ಮಾನದಂಡಗಳು ಮಾತ್ರ ಬದಲಾಗದೇ, ದಲಿತ ಸಮುದಾಯವನ್ನು ದುಡಿಸಿ- ದುಡಿಸಿ ನರಳಿಸಿದೆ. ಈ ನರಳುವಿಕೆಗೆ 'ಕಾರು ನಿಂತಲ್ಲೇ ನಿಂತಿದೆ' ಎಂಬ ಕವನವು ದನಿಯಾಗಿದೆ.

ಬದಲಾದ ಚಾಲಕರ ಚಾಲಾಕಿಗೆ
ಚಲಿಸುತ್ತಾ ಚಲಿಸಿ ಉರುಳುತ್ತಾ
ಬೇಸಿಗೆಯಲ್ಲಿ ಬೆವರುತ್ತಾ
ಚಳಿಗಾಲದಲ್ಲಿ ನಡುಗುತ್ತಾ
ಮಳೆಗಾಲದ ಹನಿಗಳನ್ನೆಲ್ಲಾ
ಒಂದೊಂದಾಗಿ ನುಂಗುತ್ತಾ
ಹಿಂಬದಿಯ ಮುಂಬದಿಯ
ನಂಬರುಗಳ ನಾಚಿಸುತ್ತಾ
ಬಂದವರ ಬೇಡುತ್ತ ಕುಂತವರ
ಕೇಳುತ್ತಾ ಚಾಲನೆಗೆ ಕಾದು
ಕಾರು ನಿಂತಲ್ಲೇ ನಿಂತಿದೆ

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 269)

'ಕಾರು' ಮನುಷ್ಯನ ಉಪಯೋಗಕ್ಕೆ ಸಿದ್ಧವಾಗಿರುವುದು. 'ದಲಿತರು' ವ್ಯವಸ್ಥೆಯ ಉಪಯೋಗಕ್ಕೆ ಸಿದ್ದರಾಗಿರುವವರು. ಕಾರಿನ ಸ್ಥಿತಿಯಂತೆ ದಲಿತರ ಸ್ಥಿತಿ ಎಂಬುದು ಕವಿಯ ಪ್ರತಿಭಟನೆಗೆ ಕಾರಣವಾಗಿದೆ. ತಮಗೆ ಬೇಕಾದಾಗ ಮಾತ್ರ ಬಳಸಿಕೊಂಡು, ನಂತರ ಬಿಸಾಡುವ ವಸ್ತುವಿನಂತೆ ದಲಿತರ ಸ್ಥಿತಿಯಾಗಿದೆ. ಸ್ವಂತವಾಗಿ ಬೆಳೆಯಲು ಅವಕಾಶ ನೀಡದೆ, ಬೇರೆಯವರ ಸಹಾಯಕ್ಕೆ ಮಾತ್ರ ನಿಂತಿರುವ 'ದಲಿತ' ಎಂಬ ಕಾರಿನ ಸ್ಥಿತಿಯನ್ನು ಕವಿ ವಿವರಿಸುತ್ತಾ, ಇದರ ಕಾರಣ ಪುರುಷರನ್ನು ಪ್ರತಿಭಟಿಸುತ್ತಿದ್ದಾರೆ. 'ಕಾರು ನಿಂತಲ್ಲೇ ನಿಂತಿದೆ' ಎನ್ನುವಾಗ 'ವ್ಯವಸ್ಥೆ' ಎನ್ನುವುದು ಬದಲಾಗಲೇ ಇಲ್ಲ ಎಂಬ ಅರ್ಥವನ್ನು ಉಂಟುಮಾಡಿದೆ. ಈ ಅರ್ಥದ ಜಾಡು ಹಿಡಿದು ಹೊರಟಾಗ 'ವ್ಯವಸ್ಥೆ'ಯ ಶೋಷಣೆಗೆ ದಲಿತ ಸಮುದಾಯವು ಬೆವರಿ, ನಡುಗಿ, ಹನಿಗಳಾಗಿ ತತ್ತರಿಸಿರುವುದು ಕವಿಗೆ ಗೋಚರಿಸಿದಂತಿದೆ. 'ಬಂದವರ ಬೇಡುತ್ತ, ಕುಂತವರ ಕೇಳುತ್ತಾ' ಇದು ದಲಿತರಿಗೆ ಯಾತನೆಯ ಸ್ಥಿತಿಯಾದ ಅಸ್ಪೃಶ್ಯತೆಯ ನೆರಳನ್ನು ಪ್ರದರ್ಶಿಸಿದೆ. ಒಟ್ಟಿನಲ್ಲಿ ದಲಿತ ಸಮುದಾಯಕ್ಕೆ ವ್ಯವಸ್ಥೆಯಿಂದ ಯಾವುದೇ ಗುರುತರ ಬದಲಾವಣೆಗಳಾಗದೇ 'ಅಸ್ಪೃಶ್ಯತೆ'ಯ ಒಡಲಲ್ಲಿ ಬೇಯುವಂತಾಗಿದೆ.

ಸಾಮಾನ್ಯವಾಗಿ ನೊಂದ ವ್ಯಕ್ತಿಯ ಅಭಿವ್ಯಕ್ತಿ ಕೇವಲ ಮಾತುಗಳಾಗುವುದಿಲ್ಲ. ಬದಲಾಗಿ ಅವು ರೂಪಕಗಳಾಗುತ್ತವೆ.

ತಾನು ಅನುಭವಿಸಿದ ನೋವು, ಅವಮಾನದ ಸ್ಥಿತಿ ಅತ್ಯಂತ ವೈಯಕ್ತಿಕವೂ ಹೌದು ಮತ್ತು ಎಲ್ಲ ಜನರ ಪಾಡೂ ಹೌದು ಎಂಬ ಭಾವನೆ ಸಮರ್ಥವಾಗಿ ಹಾಗೂ ಅತ್ಯಂತ ಸೂಕ್ಷ್ಮವಾಗಿ 'ಸಂಬಂಧಗಳು ಅಂದು–ಇಂದು' ಎಂಬ ಕವನದಲ್ಲಿ ಪ್ರಕಟಗೊಂಡಿದೆ.

ಬಣ್ಣಗಳ
ಗೋತ್ರಗಳ
ಪಂಗಡಗಳ
ಜೇಡರ ಜಾಲದಲ್ಲಿ ಸಿಕ್ಕಿ
ಏರ್ಪಡುತ್ತಿವೆ
ವಿಚಿತ್ರ ಸಂಬಂಧಗಳು

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 29)

ದಲಿತರ ಅಸ್ಪೃಶ್ಯತೆಗೆ ಕಾರಣವಾದ ಅಂಶಗಳನ್ನು ಎತ್ತಿ ಹಿಡಿದು ಪ್ರತಿಭಟಿಸುತ್ತಿದ್ದಾರೆ. ಕವಿ ಇಲ್ಲಿನ ಸಾಲುಗಳಲ್ಲಿ ಸಮುದಾಯದ ಅಸ್ಪೃಶ್ಯತೆಗೆ ಕಾರಣವನ್ನು ಕೊಡುತ್ತ, ತನ್ನ ಸಮುದಾಯಕ್ಕೆ ಜಾತಿ, 'ವರ್ಣ'ಗಳಿಂದ 'ಸಮಾನತೆ' ಸಿಗದೇ, ಉಳ್ಳವರ ಬಲೆಯಲ್ಲೇ ಸಿಕ್ಕಿ ನಲುಗುವಂತಾಗಿದೆ ಎಂದು ಪ್ರತಿಭಟಿಸುತ್ತಿದ್ದಾರೆ. ಇಲ್ಲಿ ಜನ–ಜನರ ನಡುವಿನ ಸಂಬಂಧ ಎಂಥದೆಂದು ಕವಿ ತಿಳಿಸಿದ್ದಾರೆ. ಜಗತ್ತಿನಲ್ಲಿ ಉಳ್ಳವರು ಇಲ್ಲದವರನ್ನು ವರ್ಣ, ಜಾತಿ, ವರ್ಗ ಎಂಬ ಬಲೆಯಲ್ಲಿ ಸಿಕ್ಕಿಸಿ, ನರಳುವಂತೆ ಮಾಡಿ ಶೋಷಿಸಿರುವುದನ್ನು ಕವಿ ಕಾವ್ಯವಾಗಿಸಿದ್ದಾರೆ. ಬಣ್ಣ, ಗೋತ್ರ, ಪಂಗಡ ಇವು 'ವ್ಯವಸ್ಥೆ'ಯ ಮೂಢ ನಂಬಿಕೆಯ ಕೇಂದ್ರ ಬಿಂದುಗಳು. 'ಜೇಡರ ಜಾಲ' ಎಂಬ ಜಾತಿ ವ್ಯವಸ್ಥೆಯಲ್ಲಿ, 'ವ್ಯವಸ್ಥೆ'ಯನ್ನು 'ವಿಚಿತ್ರ ಸಂಬಂಧಗಳೆಂದು' ಅಲ್ಲೇಗೆಳೆದು ಪ್ರತಿಭಟಿಸುತ್ತಿದ್ದಾರೆ.

ಪ್ರಕೃತಿಯ ವಸ್ತುವಾದ 'ಮಳೆ' ದಲಿತರ ಪಾಲಿಗೆ ಜೀವ ಹಿಂಡುವ ಸಾಧನವಾಗಿದೆ. ಮಳೆಗಾಲದಲ್ಲಿ ಸೋರುವ ಸೂರಿನ ಅಡಿಯಲ್ಲಿ ಜೀವ ಬಿಗಿ ಹಿಡಿದು ಕುಳಿತ ದಲಿತರ ಚಿತ್ರ ಹೃದಯ ಕಲಕುವಂತದ್ದು. ಮಳೆಗಾಲ ಬಂದಾಗ ತನ್ನ ಮನೆಯ ಹೆಂಚು ಕೈಯಾಡಿಸಿ, ಹೊಸ ತಡಿಕೆ ಹೊದಿಸುವ ಸಾಮರ್ಥ್ಯವಿಲ್ಲದೆ, ಅಸಹಾಯಕರಾಗಿ ನಿಲ್ಲುತ್ತಾರೆ. ತಮ್ಮಲ್ಲಿರುವ ತೂತು ಗಡಿಗೆಯಿಂದ ಹೊಸಲೊಳಗೆ ಇಳಿದ ನೀರನ್ನು ಹೊರಗೆ ಚಲ್ಲಲು ಸಾಧ್ಯವಾಗದೇ, ಕವಡೆ ಕಾಸಿನ ಜನರನ್ನು ಹಿಯಾಳಿಸುವ ಇಂತಹ ಮಳೆ ನಿಲ್ಲುವುದಿಲ್ಲವೇಕೆ? ಎಂಬ ಕುದಿತ ಬಡವನಾದ ದಲಿತನಲ್ಲಿದೆ. ಈ ಹತಾಶೆಯ ಸ್ಥಿತಿಯನ್ನು 'ಮತ್ತೆ ಮಳೆ ಬರುವ ಮುನ್ನ' ಎಂಬ ಕವನ ಕಟ್ಟಿಡುತ್ತಾದೆ.

ಅಪ್ಪನ ತಿದಿಬಾಯಿ
ಒತ್ತಿ ಹೇಳುವ ಮಾತು
ಹೆಂಚು ಕೈಯಾಡಿಸೋ ಮಗ
ಮತ್ತೆ ಮಳೆ ಬರುವ ಮುನ್ನ
ಇಲ್ಲ
ಹೊತ್ತು ಸಾಗಿಸು
ನನ್ನ ಕಳೇಬರವನ್ನು

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 95)

ತಂದೆಗೆ ವ್ಯವಸ್ಥೆಯ 'ಗುಣ' ಅರ್ಥವಾಗಿ ತನ್ನ ಮಗನಾದರೂ ಹಳೆಯದಕ್ಕೆ ಬಲಿಯಾಗದೆ ಹೊಸ ರೀತಿಯ ಜೀವನ ನಡೆಸಲಿ, ಅದೂ ನನ್ನ ಕಣ್ಣ ಮುಂದೆ ಎಂಬ ಆಸೆ ಪಡುತ್ತ, ತನ್ನ ಹಾಗೂ ತನ್ನ ಮನೆಯ ಹೆಂಚಿನ ಸ್ಥಿತಿಗೆ ಕಾರಣರಾದವರನ್ನು ಒಳಗೊಳಗೆಯೇ ಪ್ರತಿಭಟಿಸುವಂತಹ ಚಿತ್ರಣವಿದೆ.

ಅಪ್ಪ ಸಾಮಾಜಿಕ 'ಅಸ್ಪೃಶ್ಯತೆ'ಗೆ ಒಳಗಾದವ. ಇವನ ಬದುಕಿನ ಹಲವು ಮುಖಗಳು ತೆರೆದುಕೊಳ್ಳುವ ಸಾಲುಗಳು ಇಲ್ಲಿವೆ. ಕವಿ ನೋವುಂಡವರ ದನಿಯಾಗಿ ನಿಂತು, ದಲಿತ ಜಗತ್ತಿನ ಕುಸಿದ ಗೋಣುಗಳಲ್ಲಿ ಹೊರಬಂದ ಹತಾಶೆಯನ್ನು ಕಲೆ ಹಾಕಿ ಪ್ರತಿಭಟಿಸುತ್ತಿದ್ದಾರೆ.ದಲಿತರ ಅಸಹಾಯಕ ಸ್ಥಿತಿಗೆ 'ವ್ಯವಸ್ಥೆ' ಎಂಬ ಸಮಾಜವೇ ಮೂಲ ಕಾರಣವಾಗಿದ್ದು, ಇಲ್ಲಿನ ಸ್ಥಿತಿಗೆ ಸವರ್ಣೀಯರು ತೋರಿದ ನಿರಾಕರಣೆಯ ಫಲ ಇದಾಗಿದೆ.

ದಲಿತ ಸಮುದಾಯಕ್ಕೆ 'ಅಸ್ಪೃಶ್ಯತೆ' ಎಂಬುದು ಇತಿಹಾಸದ ಪುಟಗಳಿಂದಲೂ ಕಾಣಬಹುದು. ಪುರಾಣದ ಕಥೆಗಳಲ್ಲಿ, ತಾಳೇಗರಿಗಳಲ್ಲಿ ದಲಿತರ ಚಿತ್ರಣವಿಲ್ಲ. ವೀರಾ, ಧೀರಾ, ಶೂರ ದಾನವರಿಗೆ ಚಿತ್ರವನ್ನು ತನ್ನ ಮೇಲೆ ಕೆತ್ತಿಸಿಕೊಂಡಿರುವ ಶಾಸನಗಳಲ್ಲಿ ದಲಿತರ ಹಾಸುಂಡ ವ್ಯಥೆಯು ಇಲ್ಲವೆಂದು 'ಶ್ರದ್ಧಾಂಜಲಿ' ಎಂಬ ಕವನ ಶಾಸನಕರಿಸಿದೆ.

ಕೈಯಕಟ್ಟಿ ತಲೆಯಬಾಗಿ ನಡೆದ ಕಥೆಯಾ
ಯಾವ ಶಾಸನೇಳಲಿಲ್ಲ ನುಂಗಿದ ವ್ಯಥೆಯಾ
ಹಂದಿ ನಾಯಿಗಾಗಿ ಶಾಸನೂಳಿ ಕಳಶವಿಟ್ಟರೊ
ಊರಕರಿಗೆ ಕೊರಳಕೊಟ್ರೆ ಬಾಯ್ಗೆ ಬೆಣೆಯಿಟ್ಟರೊ

ದತ್ತಿ ನಿಧಿಯ ಬೀಳಲಿಲ್ಲ ನಮ್ಮ ಹೆಸರಲೊಂದು
ಸನಗು ಬೇಡುವದಂತೂ ಅಯ್ಯೋ ದೂರ ದೂರ ಎಂದೂ

(ಅರವಿಂದ ಮಾಲಗತ್ತಿ, ಕಪ್ಪು ಕಾವ್ಯ, 1985, ಪುಟ 01)

ನಾವು 'ಅಸ್ಪೃಶ್ಯ'ರೆಂಬ ಕಾರಣದಿಂದ ನಮ್ಮ ಚಾಕರಿಯನ್ನು, ನಾವು ಮಾಡಿದ ತ್ಯಾಗವನ್ನು, ಕೊನೆ ಪಕ್ಷ ನಮಗಾದ ಶೋಷಣೆಯನ್ನು ಒಂದು ಕಡೆ ಕೆತ್ತಿಸದೇ, ಇಲ್ಲೂ 'ಜಾತಿ ಅಸ್ಪೃಶ್ಯತೆ' ತೋರಿರುವುದು ಪ್ರತಿಭಟನೆಗೆ ಕಾರಣವಾಗಿದೆ. ಮೂಕ ಪ್ರಾಣಿಗಳಿಗೂ ನೆನಪಿನ ಶಾಸನಗಳು ನಿರ್ಮಾಣವಾಗಿರುವಾಗ, ದಲಿತ ಸಮುದಾಯದವರಾದ ನಾವು ಈ ಪ್ರಾಣಿಗಳಿಗಿಂತ ಕಡೆ. ಪ್ರಾಣಿಗಳಿಗೆ ಕೊಡುವ ಸಮಾನತೆ ಕೂಡ ನಮಗೆ ಇಲ್ಲವೆಂದು ಪ್ರತಿಭಟಿಸುವಂತಾಗಿದೆ. ಶಾಸನಗಳಲ್ಲಿ ನಾಯಿ, ಹಂದಿಗಳಿಗೆ, ಯುದ್ಧದಲ್ಲಿ ಸತ್ತವರಿಗೆ, ಹೆಣ್ಣಿಗೆ ಮಹಾಸತಿಗಲ್ಲು ಎಂಬ ಶಾಸನಗಳ ಸಾಲುಗಳನ್ನು ನೋಡುತ್ತೇವೆ. ಆದರೆ ದಲಿತರು ಸಮಾಜದಲ್ಲಿ ಇದ್ದರು ಎನ್ನುವುದಕ್ಕೆ ಒಂದು ಶಾಸನವಿಲ್ಲವೆಂದು ಕವಿ ಮನುಷ್ಯ–ಮನುಷ್ಯರಲ್ಲಿ ಮಾನವೀಯತೆ ಕಾಣದ ಈ ಜಗತ್ತು 'ಅಸ್ಪೃಶ್ಯತೆ'ಯ ಕಣಜವೆಂದು ತಮ್ಮ ವ್ಯಥೆಯನ್ನು ಹೇಳಿಕೊಂಡಿದ್ದಾರೆ. ಈ ಅಸ್ಪೃಶ್ಯತೆ ಸಾಲುಗಳಲ್ಲಿ 'ಅಸಮಾನತೆ'ಯು 'ಸ್ಪೃಶ್ಯ'ರ ನಡುವಳಿಕೆಗೆ ಉದಾಹರಣೆ ಎಂದರೆ 'ಕೈಯಕಟ್ಟಿ ತಲೆಯ ಬಾಗಿ ನಡೆದ ಕಥೆಯಾ' ಎಂಬ ಸಾಲಿನಲ್ಲಿ ದಲಿತ ಸಮುದಾಯಕ್ಕೆ 'ವ್ಯವಸ್ಥೆ'ಯವರು ನಿಬಂಧನೆ ಏರಿದ್ದರ ಗುರುತು ಸಿಗುತ್ತದೆ. ದಲಿತರ ಅಸ್ಪೃಶ್ಯತೆಯ ವ್ಯಥೆಯು ಇತರರಿಗೆ ತಿಳಿಯುವುದಿಲ್ಲ ಎಂಬುದು ಈ ಸಾಲುಗಳ ಅರ್ಥವಾಗಿದೆ.ದಲಿತ ಸಮುದಾಯಕ್ಕೆ ಕೇವಲ 'ಸಾಮಾಜಿಕಅಸ್ಪೃಶ್ಯತೆ' ಅಲ್ಲದೆ 'ಶೈಕ್ಷಣಿಕಅಸ್ಪೃಶ್ಯತೆ' ಕೂಡ ಆಗಿದ್ದು, ಇದನ್ನು ನಿವಾರಿಸಿಕೊಳ್ಳುವ ತವಕದಲ್ಲಿ ಸಂಪ್ರದಾಯ ಹಾಗೂ ಪಾರಂಪಾರಿಕವಾಗಿ ಜೀತದಲ್ಲಿ ಬಿದ್ದ ಅಪ್ಪನು ತನ್ನ ಮುಂದಿನ ಪೀಳಿಗೆಯಾದ ಮಗನ ಕಾಲಕ್ಕೆ, ತನಗಾದ ಅವಮಾನಗಳು ಮತ್ತು ಮೈ ಮೇಲಿನ ಗಾಯಗಳನ್ನು ಉಡುಗೊರೆಯಾಗಿ ಕೊಡುತ್ತಾನೆ. ಅಂಥ ಅಕ್ಷರ ಅಸ್ಪೃಶ್ಯತೆಗೆ'ಒಬ್ಬ ತಂದೆಯ ಹಾಡು' ಪ್ರತಿಧ್ವನಿಯಾಗಿದೆ.

ದುಡಿದುಡಿದು ನಾಸತ್ತೆ
ನನ್ನಪ್ಪ ನನ್ನ ತಾತ ಸತ್ತ
ನೀ ಸಾಯುವುದು ಬೇಡ ನಮ್ಮಂತೆ

ಹೆಬ್ಬೆರಳು ಒತ್ತೊತ್ತಿ
ಗೆರೆಯೆಲ್ಲ ಮಾಸಿಹವು
ನಮ್ಮಂತೆ ನೀನಾಗ ಬೇಡ ಎಂದೂ
(ಅರವಿಂದ ಮಾಲಗತ್ತಿ, ನಾದ ನಿನಾದ, 1985, ಪುಟ 14)

ಶೈಕ್ಷಣಿಕ ಅಸ್ಪೃಶ್ಯತೆಯ ಬೀಜಾಂಕುರದಿಂದ ಒಂದು ತಲೆಮಾರಿನ ದಲಿತರು ಅನುಭಸಿದ ಶೋಷಣೆಯ ಚಿತ್ರವನ್ನು ಕಾವ್ಯದ ರೂಪದಲ್ಲಿ ತಂದು ಪ್ರತಿಭಟಿಸುತ್ತಿದ್ದಾರೆ. ಅಪ್ಪನ ಕೈ ಗೆರೆಗಳು ಅಕ್ಷರ ತಿಳಿಯದೆ ಅಳಿಸಿರುವಂತೆ, ಮಗನ ಕೈ ಗೆರೆಗಳು ಅಕ್ಷರ ವಂಚನೆಯಾಗಬಾರದೆಂಬ ಆಶಯ ಇಲ್ಲಿದೆ. ಅಪ್ಪನ ಮೈಯ ಗೆರೆಗಳಿಗೆ ಉತ್ತರವೆಂಬಂತೆ ಅಕ್ಷರಸ್ಥನಾಗಬೇಕೆಂಬ ಹಂಬಲ ಇಲ್ಲಿ ವ್ಯಕ್ತವಾಗಿದೆ. 'ವ್ಯವಸ್ಥೆ' ಎಂಬುದು ಒಂದು ಕಾಲದಲ್ಲಿ ದಲಿತ ಸಮುದಾಯಕ್ಕೆ ಅಕ್ಷರ ವಂಚನೆ ಮಾಡಿರುವ ಸತ್ಯವನ್ನು ಕವಿತೆಯ ಸಾಲುಗಳಲ್ಲಿ ಕಾಣಬಹುದು.

'ಅಸ್ಪೃಶ್ಯತೆ', 'ಜಾತಿ ಪದ್ಧತಿ'ಯೆಂಬುದು ಎಷ್ಟು ಹಳೆಯದ್ದೋ, ಅದನ್ನು ವಿರೋಧಿಸುವ, 'ಸಮಾನತೆ'ಯನ್ನು ಸೃಷ್ಟಿಸುವ ಪ್ರಯತ್ನವೂ ಅಷ್ಟೇ ಹಳೆಯದು. ಇದು ದಲಿತ ಸಮುದಾಯದ ಪಿತೃ ಪ್ರಧಾನವಾದ ಆಸ್ತಿಯಾಗಿದೆ. 'ಅಸ್ಪೃಶ್ಯತೆ'ಯ ಆಳದಲ್ಲಿ, ಹುಟ್ಟಿನ ಮೂಲವನ್ನು ಖಚಿತಗೊಳಿಸದಂತೆ ದಲಿತರನ್ನು ಕೆಲವರು ಗುರುತಿಸಿದ್ದಾರೆ. ದಲಿತರಿಗಾದ ಹಸಿವು, ಅವಮಾನ, ಅನುಭವಗಳ, ವಿಸ್ತಾರವನ್ನು 'ಅಲ್ಲೇ ಕುಂತವರೆ' ಎಂಬ ಕವನವು ಉದಾಹರಿಸುತ್ತದೆ.

ವಟ್ಟೆಗಿಲ್ಲದ ಜನರ ವಣನೆತ್ತಿ ಮ್ಯಾಲೇರಿ
ಕುಣಿಯುತ್ತ ಬರುತ್ತಾವೆ ಕರೆಬಾಣ
ಯಾರಾನ ಕದ್ದಾರೆ ಮರುಮಾತು ಕೊಟ್ಟಾರೆ
ಬಯಲಲ್ಲಿ ನ್ಯಡಸವರೆ ಕತ್ತಿವರಸೆ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 106)

ಅಸ್ಪೃಶ್ಯರಾದ ದಲಿತರು 'ವ್ಯವಸ್ಥೆ' ವಿರುದ್ಧ ನಿಂತರೆ, ಅದರಿಂದ ಉಂಟಾಗುವ ತೊಂದರೆಯನ್ನು ಉದಾಹರಣೆ ಕೊಡುತ್ತ ಪ್ರತಿಭಟಿಸುತ್ತಾರೆ. ಅಸ್ಪೃಶ್ಯತೆಯಿಂದ ಎಂಥ ಅವಮಾನಕ್ಕೂ, ಶಿಕ್ಷೆಗೂ ದಲಿತ ಸಮುದಾಯ ಸದಾ ಸಿದ್ಧವಿರಬೇಕೆಂದು ವ್ಯವಸ್ಥೆಯ ವಿರುದ್ಧ, ಅವರ ನಡಾವಳಿಯ ಕವಿ ವಿರುದ್ಧ ಪ್ರತಿಭಟನೆಯ ಕತ್ತಿ ಬೀಸಿ, ತನ್ನ ಸಮುದಾಯದ ಸಂಸ್ಕೃತಿಯನ್ನು ತೆರೆದಿಟ್ಟಿದ್ದಾರೆ.

ದಲಿತ ಜಗತ್ತಿನ ಅವಮಾನ, ಸಂಕಟಗಳು ಇಲ್ಲಿ ಸ್ಫೋಟಗೊಂಡಿದ್ದು, ಸಾಮಾಜಿಕ ಕೀಳರಿಮೆಯನ್ನು ಅರಿವಿನ ಎಚ್ಚರದಲ್ಲಿ ಕಳೆದುಕೊಂಡ ಸಮುದಾಯವನ್ನು ಕಾವ್ಯದ ಮುಖ್ಯ ವಿಚಾರಕ್ಕೆ ತಂದಿದ್ದಾರೆ. 'ಯಾರಾನ ಕದ್ದಾರೆ ಮರುಮಾತು ಕೊಟ್ಟಾರೆ' ಎಂಬಲ್ಲಿ ಶೋಷಣೆಯ ಅಟ್ಟಹಾಸವನ್ನು ಕಾಣಬಹುದು. ದಲಿತೇತರರೇ ಖುದ್ದು ತಪ್ಪು ಮಾಡಿದರೂ, ಶಿಕ್ಷೆ ಮಾತ್ರ ದಲಿತರಿಗೆ ಸೀಮಿತವಾಗಿತ್ತು ಹಾಗೂ ಇದನ್ನು ಪ್ರಶ್ನಿಸಿದರೆ 'ಬೆತ್ತ'ದ ಪ್ರಯೋಗವನ್ನು ಅನುಭವಿಸುವ ಹೀನ ಸಂಸ್ಕೃತಿ ದಲಿತರಿಗಿತ್ತು ಎಂದು ಕವಿ ಹೇಳಿದ್ದಾರೆ. ದಲಿತ ಕಾವ್ಯಗಳ ದೃಷ್ಟಿ ಎಂದಿಗೂ ವಾಸ್ತವದಿಂದ ದೂರ ಸರಿಯುವುದಿಲ್ಲ. ವಾಸ್ತವತೆಯ ಅರಿವನ್ನುಂಟು ಮಾಡುವುದೇ ಕಾವ್ಯದ ಒಳ ದ್ರವ್ಯವಾಗಿದೆ. ವಾಸ್ತವತೆಯ ಗುರುತುಗಳೆಂದರೆ 'ಹಬ್ಬಗಳು'. ಈ ಹಬ್ಬಗಳು ದಲಿತರ ಸಾಮಾಜಿಕ, ಧಾರ್ಮಿಕ ಅಸ್ಪೃಶ್ಯತೆಗೆ ಸಾಕ್ಷ್ಯ ಗುಣವಾದ ಪದರುಗಳಾಗಿ, ಜೀವಗಳಾಗಿ ಸಂಚರಿಸಿದಕ್ಕೆ 'ಯುಗಾದಿ 1' ಕವನ ಸಾಕ್ಷಿಯಾಗಿದೆ

ಬೇವು ಬೆಲ್ಲದ ಅದೇ ಹಳೆಯ ಪಾಠ
ಸ್ವಂತದ್ದೋ ಸಾಲದ್ದೋ ಒಬ್ಬಟ್ಟಿನೂಟ
ಬದುಕೇ ಇಲ್ಲದ ಅನಾದಿಯ ಲೆಕ್ಕಕ್ಕೆ
ನೀನೊಂದು ಶಬ್ದ ಮಾತ್ರ
ಬೀದಿವಾಸಿಯ ಅಳಲು ಜೋಪಡಿಯ ಕತ್ತಲು
ದಿನದಿನದ ಅನ್ನಕ್ಕೇ ಮಾರಿಕೊಳ್ಳುವ ಮಯ್ಯಿ
ಆಸೆಯಲಿ ಚಾಚಿರುವ ಲಂಚಕೋರನ ಕಯ್ಯಿ
ಯುಗಯುಗವು ಕಳೆದರೂ ಅಳಿಯದೇನು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 40)

'ಯುಗಾದಿ' ಹಬ್ಬವು ಹಳೆಯದನ್ನು ತೊಡೆದು, ಹೊಸತನ ತರುವ ಹಬ್ಬವೆಂದು ಹೇಳುತ್ತಾರೆ. ಆದರೆ ದಲಿತರ ಪಾಲಿಗೆ 'ಹಳೆಯ'ದನ್ನು ಹಳೆಯದಾಗಿಯೆ ಉಳಿಸುವ 'ಹಬ್ಬ'ವಾಗಿದೆ ಎಂದು ಕವಿ ಮರುಗುತ್ತ ಪ್ರತಿಭಟಿಸುತ್ತಿದ್ದಾರೆ.

'ಸಮಾನತೆ'ಯ ಮಂತ್ರ ಬರೀ ಬಾಯಿಯಲ್ಲಿ ನಿಂತಿದೆ. ದಲಿತ ಸಮುದಾಯದ ಸ್ಥಿತಿ ಎಂಥ ಸಂದರ್ಭದಲ್ಲೂ ಬದಲಾಗುವುದಿಲ್ಲ. ತುತ್ತು ಅನ್ನಕ್ಕೆ ಅಲೆದಾಡುವ, ಬೀದಿ ಪಾಲಾಗುವ ಗತಿ ಪ್ರತಿಯುಗಯುಗಗಳಿಗೂ ತಪ್ಪುವುದಿಲ್ಲವೆಂಬ ವೇದನೆಯೊಂದಿಗೆ ಕವಿ ಪ್ರತಿಭಟಿಸುತ್ತಿದ್ದಾರೆ.

‘ಯುಗಾದಿ’ ಸಾಂಪ್ರದಾಯಿಕ, ಸಡಗರದ ಪ್ರತಿಮೆಯಾಗಿ ಮನಸ್ಸಿನಲ್ಲಿ ಮೂಡಿ ನಿಲ್ಲುವ ಹಬ್ಬ. ಆದರೆ ಇಲ್ಲಿನ ‘ಯುಗಾದಿ’ ಇಂತಹ ಸಾಂಪ್ರದಾಯಿಕ ವೈಚಾರಿಕತೆಯನ್ನು ದಾಟಿ ನಿಲ್ಲುತ್ತದೆ. ಈ ಸಾಲುಗಳಲ್ಲಿ ವ್ಯಕ್ತವಾಗಿರುವ ಸತ್ಯಗಳೆಂದರೆ ಜೋಪಡಿ ಮನೆಯ ಕತ್ತಲು, ಬೀದಿಯಲ್ಲಿ ವಾಸ ಮಾಡುವವರ ಆಕ್ರಂದನ, ತುತ್ತಿನ ಚೀಲಕ್ಕಾಗಿ ಮೈ ಮಾರಿಕೊಳ್ಳುವ, ಲಂಚದ ನರ್ತನ ಇವೆಲ್ಲಾ ‘ಸಾಮಾಜಿಕಅಸ್ಪೃಶ್ಯತೆ’ಗೆ ಸತ್ಯದ ಚಹರೆಯಾಗಿವೆ. ‘ಸಾಮಾಜಿಕಅಸ್ಪೃಶ್ಯತೆ’ಯ ಸ್ಥಾಯಿ ಭಾವವೆಂದರೆ ‘ಸಂಕಟ’ ಈ ಸಂಕಟದ ಮೂಲವೆಂದರೆ ದಲಿತರು ಸಹ ಜೀವಿಗಳ ಒಡಲೊಳಗಿನ ಸಂಕಟದ ಅನಾವರಣ ಎನ್ನುವ ಸಹಜತೆ ದಲಿತ ಸಮುದಾಯದ ಅಂತಃಸತ್ವವಾಗಿದೆ. ಈ ಅಂತಃಸತ್ವದ ಕವಿತೆಯಾಗಿ ‘ಹಕ್ಕಿಸಾಲು’ ನಿಲ್ಲುತ್ತದೆ.

ಕಣ್ಣಿಂದ
ಹೊಳೆಯಂತೆ
ಹರಿದ ನೀರು
ಎದೆಯೊಳಗೆ ಹರಳುಗಟ್ಟಿದೆ
ಒಣ ಆದರ್ಶಗಳ
ತೆಪ್ಪದ ಮೇಲೆ
ಸಮುದ್ರ ಈಜಲು ಹೋದೆ
ಕಣ್ಣೀರು ಬತ್ತಿದೆ

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 104)

ದಲಿತರ ನಂಬಿಕೆಗೆ ದ್ರೋಹ ಬಗೆದ ‘ವ್ಯವಸ್ಥೆ’ಯನ್ನು ಪ್ರತಿಭಟಿಸುವ ಸಾಲುಗಳಿವು. ‘ವ್ಯವಸ್ಥೆ’ ದಲಿತ ಸಮುದಾಯವನ್ನು ಹೀನ ಜಾತಿಯೆಂದು, ಅಸಮಾನತೆ ತೋರಿ ಹೊರ ಇಟ್ಟರೇ, ಇದೇ ನೆಪ ಮಾಡಿ ಕೆಲ ವ್ಯಕ್ತಿಗಳು ಇವರಿಗೆ ನಂಬಿಸಿ, ಎಲ್ಲರೂ ಒಂದೇ ಎಂಬ ಆದರ್ಶದ ಮಾತುಗಳನ್ನಾಡಿ ಇನ್ನಷ್ಟು ದುಃಖಕ್ಕೆ ನೂಕಿರುವುದನ್ನು ನೆನಪಿಸಿಕೊಂಡು ಕವಯತ್ರಿ ಪ್ರತಿಭಟಿಸುತ್ತಿದ್ದಾರೆ.

ಸರಳ ಮಾತುಗಳ ಮೂಲಕವೇ ಬದುಕಿನ ಸವಾಲು, ಸಂಕಟ, ಪರಕೀಯತೆ, ಹರಳುಗಟ್ಟುವ ಭಾವತೀವ್ರತೆಯನ್ನು ವ್ಯಕ್ತಪಡಿಸಿದ್ದಾರೆ. ಸರಳ ಸಾಮರ್ಥ್ಯದ ನಡುವೆ ಅನಾಥ ಪ್ರಜ್ಞೆಯನ್ನು ಹಿಡಿದಿಟ್ಟು, ದಮನಕೊಳ್ಳಗಾದ ಜೀವಿಗಳ ಮನಸ್ಸಿನ ಆಳಕ್ಕಿಳಿದು ಕರುಣೆ ಎಂಬ ಕಣ್ಣುಗಳಿಂದ ಕವಿತೆಯಾಗಿಸಿದ್ದಾರೆ.

'ಅಸ್ಪೃಶ್ಯತೆ'ಯ ಕೇಂದ್ರ ಬಿಂದು 'ಜಾತಿ'. ಜಾತಿಯಿಂದಾಗಿ ದಲಿತರು ದುಃಖ ಹಾಗೂ ವಿಷಾದವನ್ನು ಅನುಭವಿಸುವಂತಾಗಿದೆ. ದಲಿತ ಕವಿಗಳು ನಿಜಕ್ಕೂ ದುಃಖದ ಕವಿಗಳು. ತಮ್ಮ ಮೂಲ ಮನೋಧರ್ಮಕ್ಕೆ ಹತ್ತಿರವಾದುದನ್ನು ನಿರಂತರವಾಗಿ ಹುಡುಕಿಕೊಳ್ಳುತ್ತಾ, ಅದಕ್ಕೆ ಒಂದು ಲಯ ರೂಪಿಸಿಕೊಡುತ್ತಾರೆ. ಅಂತ ಒಂದು ಪದ್ಯವೆಂದರೆ 'ದೇವರನ್ನು ಸಾಕಿ ಕೊಂಡವರಿಲ್ಲ'.

ನಿಂತರೂ ತಳ್ಳುತ್ತಾರೆ, ಕೂತರೂ ಸರೀ ಅಂತಾರೆ.
ನನ್ನ ಮೇಲಿನ ಗಾಯಗಳನ್ನು ನೋಡಿ
ಕೆಲವರಿಗಂತೂ ನನ್ನ ಮುಟ್ಟಿಸಿಕೊಳ್ಳದಿದ್ದರೇ,
ಪರಮಾನಂದ;
ಅದಕ್ಕೆ ಕೇಳಿದ್ದು, ಈ ದೇಶವನ್ನು ಸ್ವಲ್ಪ ದೊಡ್ಡದು ಮಾಡಿ
ಅಂತ

(ಸುಬ್ಬು ಹೊಲೆಯರ್, ಎಲ್ಲರ ಬೆರಳಲ್ಲೂ ಅಂಟಿಕೊಂಡ ದುಃಖವೇ, 2013 ಪುಟ 23)

ಎಲ್ಲಾ ಅನಿಷ್ಟಗಳಿಗೂ ದಲಿತ ಸಮುದಾಯವೇ ಕಾರಣವೆಂಬಂತಹ ಅಸ್ಪೃಶ್ಯತೆಯ ರೂಪಕಗಳನ್ನು ನೀಡುತ್ತ, ತನಗಾದ ಸ್ವಂತ ಅನುಭವದಂತೆ ಕವಿ 'ವ್ಯವಸ್ಥೆ'ಯ ನಡುವಳಿಕೆಯನ್ನು, 'ವ್ಯವಸ್ಥೆ'ಯ ಗುಣವನ್ನು ಪ್ರತಿಭಟಿಸುತ್ತಿದ್ದಾರೆ.ಕೆಟ್ಟ ಊರಿನಲ್ಲಿ ಸೂರ್ಯ ಹುಟ್ಟದಿರಬಹುದು. ಆದರೆ ದಲಿತರ ಮೇಲಿನಹಿಂಸೆ, ದೌರ್ಜನ್ಯ, ಹಲ್ಲೆಗಳು ಮಾತ್ರ ತಪ್ಪುವುದಿಲ್ಲ ಎಂಬ ಸಾಲುಗಳನ್ನು ಇಲ್ಲಿ ಕಾಣಬಹುದು. ಕವಿ ಈ ಸಾಲುಗಳಲ್ಲಿ ದಲಿತ ಸಮುದಾಯದ ಮೇಲೆ ಮಾನವೀಯ ಕಾಳಜಿ ಅಸಾಧ್ಯವೆಂದು ಹೇಳ ಹೊರಟಿದ್ದಾರೆ. 'ನಿಂತರೂ ತಳ್ಳುತ್ತಾರೆ, ಕೂತರೂ ಸರೀ ಅಂತಾರೆ' ಎಂಬಲ್ಲಿ ಮಾನಸಿಕವಾಗಿ ಹಾಗೂ ದೈಹಿಕವಾಗಿ ಹಿಂಸಿಸುವ ಕಾರ್ಯವನ್ನು ಕಾಣಬಹುದು. ಇಲ್ಲಿ ದಲಿತರಿರುವುದೇ ಹಿಂಸೆ ಪಡೆಯಲು ಎಂಬ ಭಾವನೆ 'ವ್ಯವಸ್ಥೆ'ಯಲ್ಲಿ ನಿರ್ಮಾಣವಾಗಿರುವುದನ್ನು ಕವಿ ಖಂಡಿಸಿದ್ದಾರೆ. 'ಅಸ್ಪೃಶ್ಯತೆ'ಗೆ ಗಂಡು ಮಾತ್ರವಲ್ಲ, ಹೆಣ್ಣು ಕೂಡ ಗುರಿಯಾಗಿದ್ದು, ದಲಿತ ಹೆಣ್ಣಿಗೆ ಲಿಂಗ ಭೇದವಿಲ್ಲದೆ ನಾನಾ ವಿಧದ ಶೋಷಣೆ, ಸಂಕಟ, ಅವಮಾನಗಳಲ್ಲಿ ಸಿಕ್ಕಿ, ದಿಕ್ಕು-ದಿಕ್ಕು ಬಾಯಿ ಬಿಡುತ್ತಿರುವ ಕೂಗನ್ನು 'ಬೇಡ ದಾಸಿಯ ಪಟ್ಟ'ದಲ್ಲಿ ಕೇಳಬಹುದು.

ನೀ ನಡೆದ ಹೆಜ್ಜೆಗಳ ತಡೆದು
ಹಾದರದ ಗೆಜ್ಜೆ ಕಟ್ಟಿದವರ್ಯಾರು
ಗುಡಿ ಗೋಪುರದ ತೆರೆಮರೆಯಲ್ಲಿ
ನಿನ್ನ ತಡೆದಿರಿಸಿದವರ್ಯಾರು

(ಲಲಿತಾ ನಾಯಕ್ ಬಿ.ಟಿ., ಒಡಲ ಬೇಗೆ, ಪುಟ 09)

ದಲಿತ ಸಮುದಾಯದ ಹೆಣ್ಣಿಗೆ 'ವ್ಯವಸ್ಥೆ'ಯಿಂದ ಸಿಕ್ಕಿರುವ ಬಿರುದನ್ನು ಕವಯತ್ರಿ ಪ್ರಶ್ನೆ ಮಾಡುವ ಮೂಲಕ ಪ್ರತಿಭಟಿಸುತ್ತಿದ್ದಾರೆ. ಈಕೆಯ ಪ್ರಕಾರ ದಲಿತ ಹೆಣ್ಣಿಗೆ ಈ ಪಟ್ಟ ಬಂದಿರುವುದೇ 'ವ್ಯವಸ್ಥೆ'ಯಿಂದ, ನಿಷೇದ ಹೇರಿರುವುದು ಇವರೆ ಎಂದು ಕೋಪಗೊಂಡು ಪ್ರತಿಭಟಿಸುವಂತಿದೆ. ಸೃಷ್ಟಿಯು ಪ್ರಾರಂಭವಾದಗಿನಿಂದ ಈಗಿನವರೆಗೂ ಗಂಡು, ಹೆಣ್ಣಿನ ಸರ್ವಾಧಿಕಾರಿಯಾಗಿರುವುದರಿಂದ ಪುರುಷನ ಸ್ವಾರ್ಥವನ್ನು ಅಲ್ಲಗೆಳೆದಿದ್ದಾರೆ. ಇಲ್ಲಿನ ಸಾಲುಗಳಲ್ಲಿ ಹೆಣ್ಣಿನ ಅಸಹಾಯಕ ಪರಿಸ್ಥಿತಿಯ ಬಗ್ಗೆ ಸಹಾನುಭೂತಿಯ ಕಣ್ಣೀರಿದೆ. ಕವಯತ್ರಿಯು ಪುರುಷ ಕೀಚಕರ ದುರಾಚಾರವನ್ನು ಗುಣಗಾನ ಮಾಡಿ ಹೆಂಗೆಳೆಯರನ್ನು ಎಚ್ಚರಿಸುವಲ್ಲಿ ಸಾತ್ವಿಕ ಕ್ರೋಧವನ್ನು ಕಾಣಬಹುದು.

ದಲಿತರು ಅಸ್ಪೃಶ್ಯತೆಯಿಂದ ನೊಂದು, ಬೆಂದು, ಅಸಹಾಯಕರಾಗಿ, ಚರಿತ್ರೆಯ ಸ್ಮಾರಕಗಳಾಗಿ, 'ವ್ಯವಸ್ಥೆ'ಯ ಕಪ್ಪು ಚುಕ್ಕೆಗಳಾಗಿ, ಅಪವಿತ್ರದ ಮಾರ್ದನಿಗಳಾಗಿದ್ದಾರೆ. 'ವ್ಯವಸ್ಥೆ'ಯ ಹೀನ ಜಾತಿ 'ವ್ಯವಸ್ಥೆ'ಗೆ ಬಲಿಯಾಗಿ ಮನುಷ್ಯರೊಂದಿಗೆ ಕೂಡದೆ ತಬ್ಬಲಿಯಾದ ಮನಸ್ಸುಗಳ ಮನಸ್ಸಾಗಿ 'ವಿದಾಯ' ಕವನ ವಿಷಾದಿಸುತ್ತದೆ.

ನೆತ್ತರು ಕುಡಿದು ನಗುತ್ತಿಹ ಕತ್ತಿಗಳು
ಕ್ರೋಧದಿಂದ ಕತ್ತರಿಸಲ್ಪಟ್ಟ ದೇಹಗಳು
ಪರಸ್ಪರ ವಿದ್ರೋಹದಿಂದ ಸುಟ್ಟು ಹೋದ ಮನಸ್ಸುಗಳು
ಮನುಷ್ಯನ ಬಾಳಿನ ಚೆಲುವೆಲ್ಲವೂ ತಬ್ಬಲಿಯಾಗಿಹುದು ಇಲ್ಲಿ

(ಮುಳ್ಳೂರು ನಾಗರಾಜ್, ದಾಖಲೆ, 1997, ಪುಟ 13)

ಇವುಗಳು ದಲಿತ ಸಮುದಾಯದ ದುರಂತಾವಸ್ಥೆಯ ಸಾಲುಗಳಾಗಿವೆ. ಒಂದೊಂದು ಸಾಲುಗಳಲ್ಲೂ ವ್ಯಂಗ್ಯ ವಿಡಂಬನೆ, ಅನೃತ್ತದ ಹೃದಯವನ್ನು ಸೀಳಿ ಸತ್ಯವನ್ನು ಸಾರುವ, ಸಂಪ್ರದಾಯಸ್ಥರ, ಮಡಿವಂತರ, ಅಜ್ಞಾನದ ಅನಾವರಣವನ್ನು ಹರಳುಗಟ್ಟಿಸಿದೆ.

ಕಪಟ 'ವ್ಯವಸ್ಥೆ'ಯ ವಂಚನೆ ಬಿಗಿದಿರುವ ಆವೇಶದ ಔಚಿತ್ಯವನ್ನು ಕವಿ ಕಾವ್ಯವಾಗಿಸಿದ್ದಾರೆ. ಕ್ರೋಧದಿಂದ ಕತ್ತರಿಸಲ್ಪಟ್ಟ ದೇಹಗಳು, 'ವ್ಯವಸ್ಥೆ'ಯ ಕೋಪಕ್ಕೆ ತುತ್ತಾದ ದಲಿತ ಸಮುದಾಯದಲ್ಲಿನ ಪರಿಸ್ಥಿತಿಯನ್ನು ಬಿತ್ತಿರಿಸುವಲ್ಲಿ ಕವಿ ಸಮರ್ಥರಾಗಿದ್ದಾರೆ.

ಪುರೋಹಿತ ಶಾಹಿ, ಬಂಡವಾಳ ಶಾಹಿ, ಭೂ ಮಾಲೀಕ ಶಾಹಿ, ಅಧಿಕಾರ ಶಾಹಿ, ರಾಜಕಾರಣ ಶಾಹಿಗಳಿಂದ ನಲುಗಿದ ದಲಿತ ಸಮುದಾಯವು ನೋವು, ಸಂಕಟ, ಅಸಹಾಯಕರಾಗಿ ಪಡೆದ ಶೋಷಣೆಯನ್ನು ಮೂಕರಾಗಿ ಅನುಭವಿಸಿದರು. ಇಂತಹ 'ಜಾತಿಅಸ್ಪೃಶ್ಯತೆ'ಯ ವೈರುಧ್ಯವನ್ನು 'ಇದು ಕವಿತೆ ಅಲ್ಲ' ಎಂಬ ಪದ್ಯದಲ್ಲಿ ಹೀಗೆ ನುಡಿಯುತ್ತಾರೆ.

ಬೆಳೆದ ಫಸಲನು ಕದ್ದರು
ಬೆಳೆದ ಮಗಳನು ಬಡಿದರು
ಸುಳ್ಳು ಸುದ್ದಿ ಮಾಡಿ ಅವರು
ಊರ ತುಂಬ ರಂಪ ಮಾಡಿದರು
(ಮುನಿವೆಂಕಟಪ್ಪ ವಿ., ಕಾಡು ಕಣಿವೆಯ ಹಕ್ಕಿ, 1999, ಪುಟ 18)

'ಅಸ್ಪೃಶ್ಯತೆ'ಯ ನೆಪದಲ್ಲಿ 'ವ್ಯವಸ್ಥೆ'ಯಿಂದಾದ ಕ್ರೌರ್ಯವನ್ನು ಬಿತ್ತರಿಸಿ ಪ್ರತಿಭಟಿಸುತ್ತಿದ್ದಾರೆ. ಒಬ್ಬ ವ್ಯಕ್ತಿಗೆ ವೈಯಕ್ತಿಕವಾಗಿ ನೋವಾದಾಗ, ಧಕ್ಕೆಯುಂಟಾದಾಗ ತನ್ನ ಸ್ವಾಭಿಮಾನವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುವುದು ಸಾಮಾನ್ಯ. ಒಂದು ಸಮುದಾಯಕ್ಕೆ ಧಕ್ಕೆಯಾದಾಗ ಆ ಸಮೂಹ ನಿಷ್ಠೆಯನ್ನು,ಸ್ವಾಭಿಮಾನವನ್ನು ಎತ್ತಿ ಹಿಡಿಯಲು ಪ್ರಯತ್ನಿಸುವುದು ವಿಶೇಷವಾದದ್ದು. ಮುನಿವೆಂಕಟಪ್ಪನವರ ಈ ಕವನ ಎರಡನೇ ಗುಂಪಿಗೆ ಸೇರುತ್ತದೆ. ಒಂದು ಸಮುದಾಯಕ್ಕೆ ಆದ ಅವಮಾನವನ್ನು, ಹೋದ ಉತ್ತಮ ಫಸಲಿನ ನಷ್ಟವನ್ನು ಕಾವ್ಯದ ಮೂಲಕ ತಂದು, ಇದರಿಂದಾದ ದಲಿತರ ಶೋಷಣೆ, 'ವ್ಯವಸ್ಥೆ'ಯ ನೀಚತೆಯನ್ನು ಎತ್ತಿ ಹಿಡಿದಿದ್ದಾರೆ. 'ಅಸ್ಪೃಶ್ಯತೆ'ಯಿಂದ ಜೀವಮಾನವಿಡೀ 'ಜಾತಿ' ಶೋಷಣೆಯಾಗಿರುವ ಅನೇಕ ಉದಾಹರಣೆಗಳನ್ನು ದಲಿತ ಕಾವ್ಯಗಳಲ್ಲಿ ಕಾಣಬಹುದು. ಕೇವಲ ಜಾತಿಯ ವಿಷಯವಾಗಿ ದಲಿತರು ಮನೆ, ಊರು ಬಿಡುವ ಹೀನ ಅಥವಾ ಕೆಟ್ಟ ಸ್ಥಿತಿ, ದರಿದ್ರವಾಗಿರುವ 'ಜೀತ' ಪದ್ಧತಿಗೆ ಜೋತು ಬೀಳುವ ಸ್ಥಿತಿ, ಇವರಿಗೆ ಸರ್ವೇ ಸಾಮಾನ್ಯವಾಗಿದೆ.

ದಲಿತರ ಮುಗ್ಧತೆಯ ಲಾಭ ಪಡೆದ 'ವ್ಯವಸ್ಥೆ'ಯು ಅವರನ್ನು ಬಳಸಿಕೊಂಡ ರೀತಿಯನ್ನು ಕವಿ ಪ್ರತಿಭಟಿಸುತ್ತಿದ್ದಾರೆ.

ದಣಿಯ ಹಟ್ಯಾಗ ದುಡಿದುಡಿದು ನಾವು
ಬೇಲಿಯಾಗಿ ನಿಂತವರು
ದಣಿಯ ದರ್ಪದಲ್ಲಿ ಬೆಂದೆವು ನಾವು
ಅವರ ಗರ್ಜನೆಯಲ್ಲಿ ಮೂಕರು

(ಮುನಿವೆಂಕಟಪ್ಪ ವಿ., ಸ್ವಾಭಿಮಾನದ ಬೀಡಿಗೆ, 1996, ಪುಟ 43)

ದಲಿತರ ಅಸಹಾಯಕ ಸ್ಥಿತಿಯ ಅನಾವರಣ ಇದು. 'ವ್ಯವಸ್ಥೆ'ಗೆ ದಾಸರಾಗಿ ದುಡಿದರೂ, ಅವರ ವರ್ತನೆಯಿಂದ ಬೆಂದು ನಲುಗಿರುವುದನ್ನು ಕವಿ ಪ್ರತಿಭಟಿಸುತ್ತಿದ್ದಾರೆ. 'ಬೇಲಿ' ಹೊಲವನ್ನು ರಕ್ಷಣೆ ಮಾಡುವುದು. ಅಂದರೇ ಕಾಡು ಪ್ರಾಣಿಗಳ, ಮನುಷ್ಯರ ಅತಿಕ್ರಮಣವನ್ನು ತಡೆಯುವುದು. ಅದೇ ರೀತಿ ದಲಿತರು ದಣಿಯ ಮನೆಗೆ ಹಾಗೂ ಅವರ ಆಸ್ತಿಗೆ ಕಾವಲುಗಾರರಾಗಿ ನಿಂತವರು. 'ವ್ಯವಸ್ಥೆ' ನೀಡುವ ಕೆಲಸಗಳು ದಲಿತರ ಮನಸ್ಸಿಗೆ ಇಷ್ಟವಿಲ್ಲದಿದ್ದರೂ, ಅನಿವಾರ್ಯವಾಗಿ ಮಾಡಬೇಕಾಗಿತ್ತು. ಈ ಅನಿವಾರ್ಯತೆ ದಲಿತರ ಮೇಲೆ ದಬ್ಬಾಳಿಕೆ ಮಾಡಲು ಮೂಲ ಮಂತ್ರದಂತೆ ಕಂಡು ಬಂದಿತು. 'ವ್ಯವಸ್ಥೆ'ಯ ದಬ್ಬಾಳಿಕೆಗೆ ಹೊಂದಿಕೊಂಡಿರುವ ದಲಿತ ಸಮುದಾಯದ ಚಿತ್ರಣವನ್ನು ಇಲ್ಲಿ ಕಾಣಬಹುದು.

'ವ್ಯವಸ್ಥೆ'ಯು ಜಾತಿ ಆಧಾರವಾಗಿ ಕೆಲಸ ನಿಗಧಿ ಮಾಡಿರುವ ಹಿನ್ನೆಲೆಯಲ್ಲಿ ದಲಿತರಿಗೆ ಸಿಕ್ಕ ಬಹುದೊಡ್ಡ ಕುಲಕಸುಬೆಂದರೆ 'ಪುರ' ಸ್ವಚ್ಛತೆ. ಇಲ್ಲಿ ದಲಿತರು ಕಸ, ಮಲ ಎತ್ತುವ ಹೀನ ಕೆಲಸವನ್ನು ಹೊಟ್ಟೆ ಪಾಡಿಗೋ, ವ್ಯವಸ್ಥೆಯದಬ್ಬಾಳಿಕೆಗೋ, ಇಷ್ಟಕ್ಕೋ, ಒತ್ತಾಯಕ್ಕೋ ಮಾಡುವ ಮೂಲಕ ತಮಗಾಗುತ್ತಿದ್ದ ಶೋಷಣೆಯನ್ನು ಅನುಭವಿಸಬೇಕಾಗಿತ್ತು. ಇದನ್ನು ಪ್ರಶ್ನಿಸಿದರೆ ವ್ಯವಸ್ಥೆಯ ಇನ್ನೊಂದು ರೀತಿಯ ಶೋಷಣೆಗೆ ಎದುರಾಗಬೇಕಾಗಿತ್ತು. ಇಂತಹ ಶೋಷಣೆಗೆ ಒಳಗಾದವರ ಗುರುತನ್ನು 'ಅಲ್ಲಮನ ಹುಡುಕುತ' ಎಂಬ ಪದ್ಯವು ಕಟ್ಟಿಕೊಡುತ್ತದೆ.

ಸೂರ್ಯ ಮೂಡುವ ಮುಂದೆ ಎದ್ದು ಹೊರಡುತ್ತೇನೆ
ನನ್ನ ಅಣ್ಣ, ಅಕ್ಕ ಅವ್ವಂದಿರೊಂದಿಗೆ ರಾಶಿ ರಾಶಿ ಚಿನ್ನದ
ಕಸವನ್ನೆತ್ತಲು

ಘಮ ಘಮಮಿಸುವ ಹೂವನ್ನೆತ್ತಲು, ಮಲವನ್ನೆತ್ತಲು
ಅಂತರಂಗದ ಹೊಲಸು ಬಹಿರಂಗದ ಮನಸು
ಎತ್ತುವ ಶೂನ್ಯ ಸಂಪಾದನೆಯ ಭಂಗಿಗಳು ನಾವು
ಸಂಬಳ ಕಡಿಮೆ ದುಡಿಮೆ ಜಾಸ್ತಿ
ಪ್ರಶ್ನಿಸಿದರೆ ಬೀದಿ ಗುಡಿಸುವವರಿಗೆ ಇನ್ನೆಷ್ಟು

(ಸುಬ್ಬು ಹೊಲೆಯರ್, ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು, 2013, ಪುಟ 11)

ದಿನ ನಿತ್ಯದ ಕಸುವಿನಿಂದ ಬೆಸತ್ತ ದಲಿತರು ಈ ಕೆಲಸದಿಂದ ಘನತೆಯೂ ಇಲ್ಲ, ಉತ್ತಮ ಸಂಬಳವೂ ಇಲ್ಲ ಎಂದು ಬೇಸರ ವ್ಯಕ್ತಪಡಿಸಿ ನವಿರಾಗಿಯೇ ಪ್ರತಿಭಟಿಸುತ್ತಿದ್ದಾರೆ. ಕವಿಯ ಈ ಸಾಲುಗಳಲ್ಲಿ ಮೇಲಿನವರ ದಬ್ಬಾಳಿಕೆ, ದಲಿತರ ಪ್ರಶ್ನಿಸುವ ಹಕ್ಕನ್ನೂ ಕಿತ್ತುಕೊಂಡಿದೆ. 'ಮಲ' ಹೊರುವುದು ಹೀನ ಪದ್ಧತಿ, ಇದಕ್ಕೆ ಉಳ್ಳವರ 'ವ್ಯವಸ್ಥೆ'ಯು ಬಲವಂತವಾಗಿ ದಲಿತರನ್ನು ಉಪಯೋಗಿಸಿಕೊಂಡಿದ್ದು, 'ಜಾತಿ' ಅಸ್ಪೃಶ್ಯತೆಯಿಂದಾಗಿ, ತಮ್ಮ ಜಾತಿ 'ಹೀನ' ಎಂಬ ಕಾರಣಕ್ಕಾಗಿ ದಲಿತರು ಇಂತಹ ಕೆಲಸವನ್ನು ಶಿರಸಾವಾಹಿಸಿ ನಿರ್ವಹಿಸುವುದು ಸಮುದಾಯದ ದೌರ್ಬಲವೆಂದು ಸೂಚಿಸಿ ಪ್ರತಿಭಟಿಸುತ್ತಿದ್ದಾರೆ.

'ವ್ಯವಸ್ಥೆ'ತೋರಿದ ಅಸ್ಪೃಶ್ಯತೆಯ ಅವಮಾನಕ್ಕೆ ಒಳಗಾದ ದಲಿತ ಸಮುದಾಯವು ಪಾಂಡಿತ್ಯ ಹೀನರೆಂದು ಭಾವಿಸಿದಾಗ, ದಲಿತರು ನಮ್ಮಲ್ಲೂ ಸ್ವಪ್ರತಿಭೆ ಇದೆ, ನಾವೂ ಪಾಂಡಿತ್ಯ ಪೂರ್ಣರು. ಆದರೆ ಇತರರಿಂದ ನಮಗೆ ಮನ್ನಣೆ ಸಿಗದೆ, ನಮ್ಮ ವಿದ್ವತ್ತನ್ನು ಗುರುತಿಸದೆ ಇಲ್ಲೂ ಅಸ್ಪೃಶ್ಯತೆ ತೋರಿದರೆಂದು ಕವಿ

ನಮಗೆ ವಿದ್ವತ್ತು ರಿಯಾಯಿತಿಯಿಂದ ಬಂದದ್ದು,
ನಮ್ಮ ಪ್ರತಿಭೆ ದ್ವಿತೀಯ ದರ್ಜೆಯದು ಈ ಅಸಮ
ವ್ಯಂಗ್ಯ ಕುಹುಕಗಳ ನಡುನಡುವೆಯೆ
ಸೊಲೋಪ್ಪದೆ ನಡೆದಾಡುವನಾವು ನಾಗರಿಕತೆಯಅಪವಾದಗಳು

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 61)

ಎಂದಿದ್ದಾರೆ.ದಲಿತರು ಪಾಂಡಿತ್ಯ ಪಡೆದಿರುವುದು ವ್ಯವಸ್ಥೆಯ ಕೃಪಾ ಕಟಾಕ್ಷದಿಂದಲೇ ಹೊರತು ಸ್ವಂತ ಪ್ರತಿಭೆಯಿಂದಲ್ಲ ದಲಿತರ ಪ್ರತಿಭೆ ಏನಿದ್ದರು ಕೆಳ ಹಂತದ ಪ್ರತಿಭೆಯಾಗಿದೆ ಎಂದು ಜರೆಯುವವರ ಮುಂದೆ ಸೋಲು ಒಪ್ಪಿಕೊಳ್ಳದೇ, ಎದೆ ಸೆಟೆಸಿ ನಿಂತು ನಾವು ವಿದ್ವತ್ತನ್ನು ರಿಯಾಯಿತಿಯಿಂದ ಪಡೆದು ಕೊಂಡಿದ್ದೇವೆ.

ನಮ್ಮಲ್ಲಿರುವ ಪ್ರತಿಭೆಗೆ ದ್ವಿತೀಯ ದರ್ಜೆಯ ಅಂದರೆ ಎರಡನೆ ಸ್ಥಾನವಿದೆ ಎಂದು ವ್ಯವಸ್ಥೆಯನ್ನು ವ್ಯಂಗ್ಯ ಮಾಡಿ, ನಮ್ಮನ್ನು ನೀವು ಶೋಷಣೆ ಮಾಡುವುದಲ್ಲದೆ, ನಮ್ಮ ಬೆಳವಣಿಗೆಯನ್ನು ಸಹಿಸದೆ, ನಮ್ಮನ್ನು ನಾಗರೀಕತೆಯ ಅಪವಾದಗಳೆಂದು ಹೀಯಾಳಿಸುವ ಸವರ್ಣೀಯರ ವರ್ತನೆಯನ್ನು ಕವಿ ತಮ್ಮ ಕವಿತೆಯ ಈ ಸಾಲುಗಳಲ್ಲಿ ವಿಡಂಬಿಸಿದ್ದಾರೆ.

ಸಮಾನತೆಯೊಂದೆ ಅಭಿವೃದ್ಧಿಯ ಮಂತ್ರವಾಗಬೇಕು ಎಂಬುದು ದಲಿತರ ಪಾಲಿಗೆ ಬರೀ ಬಾಯುಪಚಾರವಾಗಿದೆ. ಇವರಿಗೆ ಅಸಮಾನತೆಯೆಂಬುದು ಕೇವಲ ಒಂದು ವಿಷಯಕ್ಕೆ ಮಾತ್ರ ಸೀಮಿತವಾಗಿಲ್ಲ. ಇದು ಹುಟ್ಟಿನೊಂದಿಗೆ ತಳಕು ಹಾಕಿಕೊಂಡಿದೆ. ಎಲ್ಲಾ ಸಾಮರ್ಥ್ಯವಿದ್ದರೂ ಅವಕಾಶ ವಂಚಿತರಾಗಲು 'ಜಾತಿ' ಎಂಬುದು ಕೆಲವೊಮ್ಮೆ ಅಡ್ಡಗೋಡೆಯಾಗಿದೆ. ಇಂತಹ ಅಸ್ಪೃಶ್ಯತೆಯ ಪ್ರಪಂಚದಿಂದ ಹೊರಬರಲು 'ಗುಡಿಗೆ ಹೋಗುವವರ ಹಾಡು' ಎಂಬ ಕವನವು ಪ್ರಯತ್ನಿಸುತ್ತದೆ.

ಗುಟ್ಟಿನ ಲೋಕದ ಗುಡಿಗೆ ಹೋಗುವೆವು
ಶತಮಾನದ ಸುಳ್ಳನು ಒಡೆದು
ಹೊಸಬಾಳ ಪಯಣದಲ್ಲಿ
ನಾವಿಟ್ಟು ಮೊದಲ ಹೆಜ್ಜೆ
ಕೆಟ್ಟು ನಿಂತಿರುವ ಕಾಲದ ರಥವನು
ಎಳೆಯುತೀವಿ ಮುಂದೆ
ಸಮತೆಯ ಹೂಗಳು ಚೆಲ್ಲಿದ ಪಥವನು
ತುಳಿಯುತ್ತೀವಿ ನಾವು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 147)

ದಲಿತರ ದಿಟ್ಟ ತನದ ಪ್ರದರ್ಶನ ಇಲ್ಲಿ ವ್ಯಕ್ತಗೊಂಡಿದೆ. 'ವ್ಯವಸ್ಥೆ'ಯ ಎಲ್ಲಾ ಶೋಷಣೆಗೆ ವಿರುದ್ಧವಾಗಿ ನಿಂತು, ಸಮಾನತೆ ತಂದೇ ತಿರುತ್ತೇವೆ ಎಂಬ ಪ್ರತಿಭಟನೆಯ ಕೂಗನ್ನು ಇಲ್ಲಿ ಕಾಣಬಹುದು. ಇದೊಂದು 'ಸಮಾನತೆ'ಯ 'ಕ್ರಾಂತಿ' ಪದ. ಇದನ್ನು ಬರೆಯಲು ಕಾರಣ 'ಅಸ್ಪೃಶ್ಯತೆ'ಯ ಛಾಯೆ ದಲಿತರ ಮೇಲಿರುವುದು. 'ಜಾತಿ' ಅಸ್ಪೃಶ್ಯತೆಯನ್ನು ಛಿದ್ರ ಮಾಡುವ ನೆಲೆಗಟ್ಟಿನಲ್ಲಿ ಕವಿ ಆಲೋಚಿಸುತ್ತಿದ್ದಾರೆ.

ತಮ್ಮ ಸಮುದಾಯದವರ ಅಭಿವೃದ್ಧಿಗೆ ಅಸ್ಪೃಶ್ಯತೆ ಎಂಬ ಹೆಸರಲ್ಲಿ ತೋರುವ ಪಟ್ಟಭದ್ರಹಿತಾಸಕ್ತಿಯು ಬದಲಾವಣೆಯಾಗಬೇಕಾಗಿದೆ ಎಂಬ ಹೋರಾಟದ ಸ್ಥೈರ್ಯವನ್ನು ಪ್ರಕಟಪಡಿಸುತ್ತಿದ್ದಾರೆ. 'ಕೆಟ್ಟು ನಿಂತಿರುವ ಕಾಲದ ರಥ' ಎನ್ನುವಲ್ಲಿ ಜಡವಸ್ತುವಾಗಿ, ಜಾತಿಯ ಕೂಪದಲ್ಲಿರುವ 'ವ್ಯವಸ್ಥೆ'ಯಿಂದ ಹೊರ ತರುವ ಪ್ರಯತ್ನವು ಕವಿ ಕಾರ್ಯದಲ್ಲಿ ನಡೆದಿದೆ.

ದಲಿತರನ್ನು 'ಜೀತ' ಮಾಡಿಸುವುದು 'ಅಸ್ಪೃಶ್ಯತೆ'ಯ ಸಂಕೇತಗಳಲ್ಲಿ ಒಂದು ದಣಿಯಾದವನು ದಲಿತರನ್ನು 'ಜೀತ'ಕ್ಕೆ ಇಟ್ಟುಕೊಳ್ಳುವುದು ಒಂದು ದಂಧೆ. ಇದಕ್ಕೆ ಪೂರಕವಾದ ಇನ್ನೊಂದು ದಂಧೆ ಎಂದರೆ 'ಸಾಂಸ್ಕೃತಿಕಅಸ್ಪೃಶ್ಯತೆ'. ಕೆಲ ವರ್ಗದವರಿಗೆ ಮಾತ್ರ ಸೀಮಿತವಾಗಿರುವ ದೇವರ ಸೇವೆಯಲ್ಲಿ ಸಮುದಾಯಕ್ಕೆ ಯಾವ ರೀತಿಯ ಮನ್ನಣೆಯೂ ಇಲ್ಲಿರುವುದನ್ನು 'ಸುಂಟರಗಾಳಿ'ಪದ್ಯವು ವಿರೋಧಿಸಿರುವುದು ಹೀಗೆ.

ಸುಂಟರಗಾಳಿಯೊಳಗೆ ಸಿಕ್ಕಿ ಥರಥರಗುಡುವ
ಗುರುಮಠದ ಧ್ವಜದಲ್ಲಿ ಧರ್ಮವಿಲ್ಲ
ಮೂಳೆ ತುಂಬಿದ ಹಣೆಗೆ ಸೊಟ್ಟಸೊಟ್ಟಗೆ ಬಳಿದ
ನಾಮವೀಭೂತಿಯಲಿ ಧರ್ಮವಿಲ್ಲ
ದಕ್ಷಿಣೆಯ ರುಚಿಯುಂಡು ಉಬ್ಬಿರುವ ಒಡಲಿನಲಿ
ಜುಟ್ಟು ಜನಿವಾರದಲಿ ಧರ್ಮವಿಲ್ಲ
ಊದುಕಡ್ಡಿಯ ಅರೆದು ಮೇಲೆದ್ದ ಧೂಮದಲಿ
ಧರ್ಮಸುಳಿ ಸುಳಿಯಾಗಿ ಸುಳಿವುದಿಲ್ಲ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 68)

ದೇವರ ಹೆಸರಲ್ಲಿ 'ವ್ಯವಸ್ಥೆ' ದಲಿತರಿಗೆ ಮಂಕು ಬೂದಿ ಎರಚಿ, ವಂಚಿಸಿರುವುದನ್ನು ಖಂಡಿಸಿದ್ದಾರೆ. ಧರ್ಮದ ಹೆಸರಲ್ಲಿ 'ಸಂಕೀರ್ಣತೆ'ಗಳನ್ನು ನಿರ್ಮಾಣ ಮಾಡಿಕೊಂಡು ಜಾತಿಗೊಂದು ದೇವಸ್ಥಾನ ಸ್ಥಾಪಿಸುವ ನಿಮ್ಮಲ್ಲಿ ನಿಜವಾದ ಧರ್ಮದ ಸಾರವಿಲ್ಲವೆಂದು ಅಲ್ಲಗಳೆದು ಪ್ರತಿಭಟಿಸಿ, ಇಲ್ಲಿ ವ್ಯವಸ್ಥೆಯ ಒಣ ಸಂಪ್ರದಾಯವನ್ನು ಅಲ್ಲೆಗಳೆದಿದ್ದಾರೆ. ಸದಾ ಗುಡಿಯಲ್ಲಿದ್ದು, ದೇವರ ಕಾಣದ ನಿಮ್ಮಲ್ಲಿ ಅಧರ್ಮ ಮನೆ ಮಾಡಿದೆ. ದೇವರ ಹೆಸರಲ್ಲಿ ನಡೆಯುವ ಅನೇಕ ಕಾರ್ಯಗಳಲ್ಲಿ ಧರ್ಮ ಇರುವುದಿಲ್ಲ. ಏಕತೆಯ ಮಂತ್ರದಿಂದ ಮಾತ್ರ ಧರ್ಮ, ದೇವರನ್ನು ಕಾಣಲು ಸಾಧ್ಯ ಎಂಬುದು ಕವಿಯ ಅಭಿಮತ.

ಕವಿ ಇಂಥ ನಿರ್ಧಾರಕ್ಕೆ ಬರಲು ಕಾರಣ 'ವ್ಯವಸ್ಥೆ'ಯು ಅಸ್ಪೃಶ್ಯತಾ ಜನಾಂಗಕ್ಕೆ ತೋರಿರುವ ಅಸ್ಪೃಶ್ಯತೆಗಳಲ್ಲಿ 'ಸಾಂಸ್ಕೃತಿಕ ಅಸ್ಪೃಶ್ಯತೆ'ಯು ಒಂದೆಂದು ಕೆಳವರ್ಗದವರನ್ನು ಪ್ರೀತಿಯಿಂದ ಕಾಣದ ನಿಮ್ಮ ಗೊಡ್ಡು ಸಂಪ್ರದಾಯವು ನಿಷ್ಪ್ರಯೋಜಕ ಎಂದು 'ವ್ಯವಸ್ಥೆ'ಯನ್ನು ಜರಿದಿದ್ದಾರೆ.

ದಲಿತ ಸಮುದಾಯಕ್ಕೆ ಎರಗಿದ ಅಸ್ಪೃಶ್ಯತೆಯ ಶಾಪದಿಂದ ಮಂಕಾಗಿ ಹತಾಶರಾದವರಿಗೆ ಸಮಾನತೆಯ ಬೀಜ ಬಿತ್ತುವ ಸಲುವಾಗಿ ಹಾಗೂ ಸಮುದಾಯಕ್ಕೆ ಧೈರ್ಯ ತುಂಬಲು ಕವಿ 'ಮಂಕಾದ ಜನ' ಪದ್ಯದಲ್ಲಿ ಪ್ರಯತ್ನಿಸಿದ್ದಾರೆ.

ಮಣ್ಣಲ್ಲಿ ಅರಳಿ ಮುಗಿಲಲ್ಲಿ ಮಿನುಗಿ
ಬೆಳಕಾಗಿ ಬರುವ ಜನರೇ
ನೂರಾರು ತೇರು ಹರಿಯುವಾ ದಿವಸ
ಮಂಕಾಗಿ ನಿಂತಿರೇಕೆ
ನುಚ್ಚಾದ ಕನಸು ತಲೆಯೆತ್ತಿ ಮತ್ತೆ
ಹಸಿರಾಗಿ ಹೊಳೆಯದೇನು
ಮನವ ಹೊಕ್ಕಿರುವ ಕತ್ತಲೆಯ ಕಳೆದು
ಹೊಸಲೋಕ ಕಾಣದೇನು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 38)

ತನ್ನವರಿಗೆ ಧೈರ್ಯ ತುಂಬುತ್ತಲ್ಲೇ ತನ್ನವರ ಈ ಸ್ಥಿತಿಗೆ ಕಾರಣರಾದವರನ್ನು ಪ್ರತಿಭಟಿಸುತ್ತಿದ್ದಾರೆ. ಸದಾ ಕ್ರಿಯಾಶೀಲರಾಗಿರಿ, ಎಂದು ದೃತಿಗೆಡ ಬೇಡಿ ಎಂದು ಧೈರ್ಯ ತುಂಬುತ್ತಲ್ಲೇ ಪ್ರತಿಭಟಿಸಿ ವ್ಯವಸ್ಥೆ ತನ್ನ ಸಮುದಾಯದವರಿಗೆ ಆತ್ಮಸ್ಥೈರ್ಯ ತುಂಬುತ್ತಿದ್ದಾರೆ.

'ಅಸ್ಪೃಶ್ಯತೆ'ಯ ಹೋಮಾಗ್ನಿಯಲ್ಲಿ ಬೆಂದಿರುವ ತನ್ನವರಿಗೆ ಭರವಸೆಯ ಬೆಳಕಾಗಿದ್ದಾರೆ. ಮೊದಲ ಸಾಲುಗಳಲ್ಲಿ ಶ್ರಮ ಜೀವಿಗಳಾಗಿದ್ದು, ತಮ್ಮ ಶ್ರಮದ ಪ್ರತಿಫಲವನ್ನು ಅನುಭವಿಸದೆ ನಿಂತವರಿಗೆ, ಮುಂದಿನ ಸಾಲುಗಳಲ್ಲಿ ಆಶ್ವಾಸನೆಯನ್ನು ನೀಡಿ, ನಮಗೂ ಒಂದು ದಿನ ಬರುವುದು, ಈ ಅಸ್ಪೃಶ್ಯತೆ ಕತ್ತಲು ಕರಗಿ ಹೊಸ ಪ್ರಪಂಚ ಬರುವುದೆಂದು ಧೈರ್ಯ ತುಂಬುವ ಸಾಲುಗಳಲ್ಲಿ ವ್ಯಕ್ತವಾಗಿವೆ.

ದಲಿತರನ್ನು ವಿದ್ಯಾವಂತರನ್ನಾಗಿ ಮಾಡುವುದು ಮತ್ತು ಅವರ ಶ್ರೇಯಸ್ಸಿಗಾಗಿ ದುಡಿಯುವುದು ಒಂದು ಕಾಲದಲ್ಲಿ ಸಮಾಜದ ನಂಬಿಕೆಗೆ ವಿರೋಧವಾಗಿತ್ತು.

ದಲಿತರು ವಿದ್ಯಾವಂತರಾಗಿ ಆರ್ಥಿಕ ಪ್ರಗತಿ ಹೊಂದಿದರೆ, ಜೀತದ ಕೆಲಸವನ್ನು ಯಾರು ಮಾಡುತ್ತಾರೆ ಎಂಬ ಯೋಚನೆಯಲ್ಲಿ ಅವರಿಗೆ 'ಅಕ್ಷರ ಅಸಮಾನತೆ'ಯ ಶೋಷಣೆ ನೀಡಿರುವುದನ್ನು 'ಗಲ್ಲೆಬಾನಿ'ಯಲ್ಲಿ ಕಾಣಬಹುದು.

ನನ್ನೆರಡು ಕೈಗಳ ಇಕ್ಕುಳ
ಮಾಡಿಕೊಡುವೆ
ಕುಲ ಕುಲುಮೆಯ ಒಲೆಯಲ್ಲಿ
ಕುದಿಯುತ್ತಿರುವ
ಅರಿವಿನ ಕುರುಹಿನ ಕಿಡಿಗಳನ್ನು
ಆ ಇಕ್ಕಳದ ಕೊಕ್ಕಿನಲ್ಲಿ
ಹಿಡಿದ್ಹಿಡಿದು ಹಿಡಿದ್ಹಿಡಿದು
ಕಂಡೂ ಕಂಡೂ ಕಾಣದುದ
ಕಾಣುವಂತವನಾದರೆ
ಶಿವ... ಶಿವ... ಶಿವ...
ಶಿರವನ್ನೊಲ್ಲದ ಅಲ್ಲಮನಂತೆ

(ಸಿದ್ಧಯ್ಯ ಕೆ.ಬಿ., ಗಲ್ಲೆ ಬಾನಿ, 2009, ಪುಟ 3 ಮತ್ತು 4)

ಇಲ್ಲಿನ ಸಾಲುಗಳು 'ವ್ಯವಸ್ಥೆ' ತೋರಿರುವ ಶೈಕ್ಷಣಿಕ ಅಸ್ಪೃಶ್ಯತೆಗೆ ಬಲಿಯಾದವರ ಸ್ಥಿತಿಯನ್ನು ತಿಳಿಸುತ್ತದೆ. ದಲಿತರ ಅರಿವನ್ನು ಕುಲದ ಕೆಳಗೆ ಹಾಕಿ, ತುಳಿದು, ಜೀತಕ್ಕೆ ಬೇಕಾದ ಅಸ್ತ್ರವಾಗಿ ಮಾಡಿಕೊಂಡಿದ್ದಾರೆ. ದಲಿತರಿಗೆ ಶೈಕ್ಷಣಿಕ ಭಾಗ್ಯವಿಲ್ಲದ ಕಾರಣ 'ವ್ಯವಸ್ಥೆ'ಯ ಅಡಿಯಾಳಗುವ ದುರ್ಗತಿ ಬಂದಿರುವುದನ್ನು ಇಲ್ಲಿನ ಸಾಲುಗಳ ಮೂಲಕ ಪ್ರತಿಭಟಿಸುತ್ತಿದ್ದಾರೆ. ದಲಿತರ 'ಅಸ್ಪೃಶ್ಯತೆ'ಗೆ ಒಂದೇ ಕ್ಷೇತ್ರ ಸೀಮಿತವಾಗಿಲ್ಲ. 'ಜಾತಿ'ಯ ಮಾಯೆಗೆ ಸಿಲುಕಿ, ಮೈಲಿಗೆ ನೆಪದಲ್ಲಿ 'ವ್ಯವಸ್ಥೆ' ದುರಾಚಾರ ಎಸಗಿದ್ದು, ಅದು ದಲಿತ ಸಮುದಾಯದ ಮೇಲೆ ಪರಿಣಾಮ ಬೀರಿದೆ. ಇಂತಹ ಪರಿಣಾಮದಿಂದ ಅಸ್ಪೃಶ್ಯತೆ ತಾಳ್ಮೆಯನ್ನು ಪರೀಕ್ಷೆ ಮಾಡಿದಂತಾಗುವುದನ್ನು 'ನೆನಪುಗಳು ಸತ್ಯ' ದಲ್ಲಿ ಕಾಣಬಹುದು.

ಕಾಡಕಣಗಿಲೆಯಾಗಿ
ಘಮಿಸಿ ಉದುರಲೆಂದು
ನಮಿಸಿ ಕುಂತೆ

ದೇವಕಣಗಿಲೆಯಾಗಿ
ಅರ್ಚಕರ ಹಸ್ತದಲಿ
ನಲುಗಿ ನಿಂತೆ

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 31)

ಸ್ವತಂತ್ರವಾಗಿ ಬದುಕಬೇಕೆಂದು ನಿರ್ಧರಿಸಿದರೆ ಅದು ಸಾಧ್ಯವಾಗಲಿಲ್ಲ. ಇನ್ನೊಬ್ಬರ ದಾಳದಲ್ಲಿ ನಲುಗಿರುವುದನ್ನು 'ಹೂವಿ'ನ ಉದಾಹರಣೆಯ ಮೂಲಕ ಖಂಡಿಸುತ್ತಿದ್ದಾರೆ. 'ಹೂ' ಪ್ರಕೃತಿಯ ವಸ್ತು. ಇದನ್ನು ವಸ್ತುವಾಗಿ ಆರಿಸಿಕೊಂಡ ಕವಿ ತನ್ನವರಿಗಾದ 'ಅಸ್ಪೃಶ್ಯತೆ'ಯ ಅನುಭವನ್ನು ವ್ಯಕ್ತಪಡಿಸಿದ್ದಾರೆ. ಸ್ವತಂತ್ರವಾಗಿ ಬದುಕ ಬೇಕೆಂದು ಬಯಸಿದ ಸಮುದಾಯಕ್ಕೆ 'ಜಾತಿ' ವ್ಯವಸ್ಥೆ ಎಂಬುದು 'ಜೀತ' ಚಕ್ರದಲ್ಲಿ ಸುತ್ತುವಂತೆ ಮಾಡಿರುವ ಸ್ಥಿತಿಯನ್ನು ಇಲ್ಲಿ ಕಾವ್ಯವಾಗಿಸಿದ್ದಾರೆ.

'ಅಸ್ಪೃಶ್ಯತೆ'ಗೆ ನಾನಾ ಮುಖ. ಇಂಥವುಗಳಲ್ಲಿ 'ಆರ್ಥಿಕ' ಅಸ್ಪೃಶ್ಯತೆಯಲ್ಲಿ ಆದಾಯಗಳಿಸುವುದೇ ಇವರಿಗೆ ಒಂದು ಪವಾಡ. ಹೀಗಿರುವಾಗ ಆದಾಯ ಇಲ್ಲದಿರುವ ಸ್ಥಿತಿಯಲ್ಲಿ ಪಡೆಯದೇ ಇರುವ ಸಾಲಕ್ಕೆ ಬಡ್ಡಿ, ಮರುಪಾವತಿ ಹೇಗೆ ಸಾಧ್ಯ ಎಂಬುದನ್ನು 'ದ್ರೋಣರಿದ್ದಾರೆ' ಎಂಬ ಪದ್ಯ ಪ್ರಶ್ನೆಮಾಡುತ್ತದೆ.

ಅರಮನೆಯಿಲ್ಲ ಆಸ್ಥಾನವಿಲ್ಲ ಶಿಷ್ಯ ಅರ್ಜುನನೂ ಇಲ್ಲ
ಏಕಲವ್ಯ ಹೆಬ್ಬೆರಳ ಕಾಣ್ಕೆ ಕೇಳುವ ದ್ರೋಣರಿದ್ದಾರೆ
ಕಾಡುಗಳಿಲ್ಲ ಕಾಡುಗಳಲ್ಲಿ ಕಲಿವ ಏಕಲವ್ಯರಿಲ್ಲ
ನಾಡನ್ನೇ ಕಾಡು ಮಾಡಿರುವ ಯಂತ್ರ ಮಾನವರಿದ್ದಾರೆ
ಬಾಲಕರ ಬಲಿ ಕೊಡುವ ಬಲೆಯ ನೇಯುವ ಚತುರ
ಚಿಗುರ ಚಿವುಟುವ ಗುರು ಆಚಾರ್ಯರಿದ್ದಾರೆ

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 249)

ಕೆಲಸವಿದೆ, ಲಾಭವಿಲ್ಲ. ಖರ್ಚಿಲ್ಲದೆ ಕೆಲಸ ಮಾಡಿಸಿಕೊಳ್ಳವ ಜನರ ವಿರುದ್ಧ ಕವಿ ಪ್ರತಿಭಟನೆಗೆ ನಿಂತಿದ್ದಾರೆ. ಸ್ವಂತ ಪ್ರತಿಭೆಗೆ ನೌಕರಿ ಕೊಡುವ ಮಂದಿ ಇಲ್ಲ, ಪ್ರತಿಭೆಗಳನ್ನು ನಾಶ ಮಾಡುವ ದ್ರೋಹಿಗಳಿದ್ದಾರೆ ಎಂದು ಎಚ್ಚರಿಸಿ ಪ್ರತಿಭಟಿಸುತ್ತಿದ್ದಾರೆ.

ಮಹಾಭಾರತದ 'ದ್ರೋಣ' ಶ್ರಮ ಪಡದೇ ಏಕಲವ್ಯನಲ್ಲಿ ಸಂಭಾವನೆ ಕೇಳಿದವ ಇದಕ್ಕೆ ಮೂಲ ಕಾರಣ ಅರ್ಜುನ.

ಇಂದಿನ 'ಜಾತಿ' ಮಹಾಭಾರತದಲ್ಲಿ ಮೂಲ ಕಾರಣ ಇಲ್ಲದಿದ್ದರೂ, ಸಂಭಾವನೆ ಕೇಳುವ ವ್ಯವಸ್ಥೆಯ ದ್ರೋಣರಿರುವುದು ಕವಿಯ ಅಸಮಾಧಾನಕ್ಕೆ ಕಾರಣವಾಗಿದೆ. ದಲಿತರು ತಮ್ಮ ಬದುಕಿನಲ್ಲಿ ಕಾಣಲಾಗದ ಸಮಾನತೆಯ ಸುಖವನ್ನು, ಹತಾಶೆಯ ತೀವ್ರತೆಯನ್ನು ಮರೆತು, ಮತ್ತೊಂದು ಸ್ಥಿತಿಗಾಗಿ ತಮ್ಮ ಬದುಕನ್ನು ತೆರೆದಿಡುವ, ಮುಡಿಪಾಗಿಸುವ ಸಮುದಾಯದ ಮನಸ್ಸು 'ನಿರೀಕ್ಷೆ'ಯಲ್ಲಿ ಗೋಚರಿಸುತ್ತದೆ.

ಶ್ರಾವಣದ ಮಳೆಗೆ ಸಂಭ್ರಮಿಸಿದ ಬಾವಿ
ಜೋತಾಡುವ ಜೋಡು ಮಜಲಿನ ಗೂಡು
ಬಾಯೊಳಗೆ ಕೂತ ಗುಬ್ಬಿ
ನೀರ ಕನ್ನಡಿಯಲ್ಲಿ ಮುಖವ ನೋಡಿ
ಪುಕ್ಕಕುಣಿಸಿ, ರೆಕ್ಕೆ ಬಲಿಯದ ಮರಿಗಳಿಗೆ
ಗುಟುಕು ತರಲು ಹಾರಿದಂತೆ
ಮುಗಿಲಿಗೆ ಮುತ್ತಿಡುತ್ತದೆ ನಿರೀಕ್ಷೆ

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 29)

ಮನುಷ್ಯನ ಬದುಕು ನಿಂತಿರುವುದು ಆಶು ಸೌಧದ ಮೇಲೆ ಅದು ಫಲ ನೀಡಲಿ, ಬಿಡಲಿ ತನ್ನಿಷ್ಟಕ್ಕೆ ತಾನೇ ಕನಸುಗಳ ಆಶಾ ಗೋಪುರಗಳನ್ನು ಕಟ್ಟುತ್ತಾನೆ. ಅಂತೆಯೇ ಈ ಸಾಲುಗಳು ಕೂಡ. ಇಲ್ಲಿ ಕವಯತ್ರಿ 'ಸಮಾನತೆ'ಯ ನಿರೀಕ್ಷೆಯ ಆಶಾ ಗೋಪುರದ ಮೇಲೆ ನಿಂತಿದ್ದಾರೆ. ಪ್ರಕೃತಿಯಲ್ಲಿ ಆಗುವ ಬದಲಾವಣೆಯಂತೆ ನಮ್ಮ ದಲಿತ ಸಮುದಾಯದಲ್ಲೂ ಆಗಬೇಕೆಂಬ ಆಕಾಂಕ್ಷೆ, ನಿರೀಕ್ಷೆ ಕಾವ್ಯದಲ್ಲಿ ಅಡಗಿದೆ. ಒಂದು ಗುಬ್ಬಿ ಮರಿ ಬಾವಿಯಲ್ಲಿ ಆಶ್ರಯ ಪಡೆದು ತನ್ನ ಮರಿಗಳಿಗೆ ಆಶ್ರಯಕೊಟ್ಟು, ಆಹಾರಕ್ಕಾಗಿ ಬೇರೆಡೆಗೆ ಹೋಗುವ ಧೈರ್ಯ ಹಾಗೂ ಬಾವಿ ಬರಿ ಗುಬ್ಬಿಗೆ ಮಾತ್ರ ಆಶ್ರಯ ನೀಡದೆ, ಹಾವಿಗೂ ನೀಡಿದೆ. ಹಾವು ತನ್ನ ಮರಿಯನ್ನು ತಿನ್ನುತ್ತದೆ ಎಂಬ ಭಯ ಪಡದೆ ಮುಗಿಲಿಗೆ ಹಾರುವ ಅದರ ಧೈರ್ಯ, ಬಾವಿಯಲ್ಲಿನ ಜೀವನ ಅನ್ಯೋನ್ಯತೆ ನಮ್ಮಲ್ಲೂ ಇರಲೆಂಬ ನಿರೀಕ್ಷೆ ಕವಯತ್ರಿಗೆ ಮೂಡಿದೆ. ಇದು 'ವ್ಯವಸ್ಥೆ'ಗೆ ಅರಿವಗಲ್ಲೆಂದು ತಿಳಿಸುತ್ತಾ ಪ್ರತಿಭಟಿಸುತ್ತಿದ್ದಾರೆ. ದಲಿತರ ಜೀವನ 'ಜಾತಿ' ಭೂತದಿಂದ ಉಂಟಾದ ಅಸ್ಪೃಶ್ಯತೆಯಿಂದ ರೋಸಿ ಹೋಗಿದೆ.

ಮನುಜನನ್ನು ಮನುಜನಂತೆ ನಡೆಸಿಕೊಳ್ಳದ ಅನಿಷ್ಟ ಪರಂಪರೆಯ ಅನಾಚಾರವನ್ನು ಬದಿಗಿರಿಸಲು 'ಸಮಾಜದ ಹಾಡು' ಕವನವದ ಸಾಲುಗಳು ಸಮಾನತೆಯನ್ನು ಆಹ್ವಾನಿಸುವಂತಿದೆ.

ನಾವು ಎಲ್ಲಾ ನಿಮ್ಮ ಒಳಗೆ
ನೀವು ಎಲ್ಲಾ ನಮ್ಮ ಒಳಗೆ
ನಾವು ನೀವು ಅರಿತ ಗಳಿಗೆ
ದಿಗ್ದಿಗಂತದ ಸೀಮೆ ಹೊರಗೆ
ನಾಡ ಗೆರೆಯ ಗಡಿಯ ಕಡಿದು
ಜಾತಿ ಮತಗಳ ಬಂಡೆಯೊಡೆದು
ಧರ್ಮ ಧರ್ಮದ ಪರಿಯ ಹರಿದು
ಹಾಲು ಹಾಲಲಿ ಬೆರತು ಹೋಗಲು

(ಅರವಿಂದ ಮಾಲಗತ್ತಿ, ಮೂರನೇ ಕಣ್ಣು, 1996, ಪುಟ 61)

'ಸಮಾನತೆ'ಯನ್ನು ಬಯಸುವ ಕವಿಯ ಸಾಲುಗಳ ಹಿಂದೆ ಅಸ್ಪೃಶ್ಯತಾ ಸಂಸ್ಕೃತಿಯ ನಡುವೆ ಬದುಕುತ್ತಿರುವ ದಲಿತ ಜೀವನದ ಭೀಕರತೆ ಆಡಗಿದೆ. 'ಅಸ್ಪೃಶ್ಯತೆ'ಯಿಂದ ಅನುಭವಿಸಿದ ದುರಂತವನ್ನು ನೆನೆದು, ಮುಂದೆ ಇಂತಹ ಅವಘಡಗಳು ಬೇಡವೆಂದು ನಿರ್ಧರಿಸಿ, 'ಸಮಾನತೆ'ಯ ಭಿಕ್ಷೆ ಬೇಡುತ್ತಿದ್ದಾರೆ. ಆದರೆ ಉಳ್ಳವರೇ ಹೆಚ್ಚಿರುವ ಸಮಾಜದಲ್ಲಿ ಇದಕ್ಕೆ ವಿರೋಧವಿರುವುದು ಕವಿಯ ಗಮನಕ್ಕೆ ಬಂದರೂ, 'ಸಮಾನತೆ'ಯನ್ನು ತಮ್ಮ ಕಾವ್ಯದ ಮಂತ್ರವಾಗಿಸಿಕೊಂಡಿದ್ದಾರೆ. ಈ ಕಾವ್ಯ ಮಂತ್ರದಿಂದಲೇ 'ವ್ಯವಸ್ಥೆ'ಯನ್ನು ಪ್ರತಿಭಟಿಸುತ್ತಿದ್ದಾರೆ.

ದಲಿತ ಸಮುದಾಯವು ಸಮಾನತೆಯಿಂದ ದೂರವಿರಲು ಕಾರಣ 'ಜೀತ' ಪದ್ಧತಿ ಇತರ 'ಜಾತಿ'ಯವರು 'ಜೀತ' ಮಾಡಿಕೊಂಡಿರುವವರ ಜೊತೆ ಯಾವ ರೀತಿಯ ಸಂಪರ್ಕ ಇಟ್ಟುಕೊಳ್ಳಲು ಬಯಸದ ಕಾರಣ ಅವರಲ್ಲಿ ಇನ್ನಷ್ಟು ಅಂತರ ಬಂದು, 'ಅಸ್ಪೃಶ್ಯತೆ'ಯ ಜ್ವಾಲೆ ಇನ್ನಷ್ಟು ಹೆಚ್ಚಾಯಿತು.

ಇದರಿಂದ ದಲಿತರು ಅನುಭವಿಸಿದ ಯಾತನೆಗೆ ಕೊನೆ ಇಲ್ಲವೆಂಬುದನ್ನು 'ರೋಮನ್ ರಾಜ್ಯದ ಗುಲಾಮನೂ ಹಂಗರ ಹಳ್ಳಿಯ ಜೀತಗಾರನೂ' ಎಂಬ ಕವನಗಳಲ್ಲಿ ಕಾಣಬಹುದು.

ಭಡಿ ಏಟಿನಿಂದ ಕಿತ್ತು ಬಿಳಿಯಾದ ಚರ್ಮ
ನೇತಾಡುವ ಚಿಂದಿ ನಿಲುವಂಗಿ
ಬೋಳಿಸಿದ ತಲೆ, ಬಾಗಿದ ಬೆನ್ನು ಮಿಗಿಲಾಗಿ
ಸರಪಳಿಯಿಂದ ಬಿಗಿದ ಕಾಲುಗಳು
ಬೆಂಕಿಯ ಬಿಸಿಗೆ ವಿರೂಪಗೊಂಡ ದೇಹ
ಹೊಗೆಯಿಡಿದ ಜಂಗು ಹಿಡಿದ ರೆಪ್ಪೆಗಳು
ಮೈತುಂಬ ಕ್ವಾರಿಯ ಧೂಳು

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 07)

ಅಸ್ಪೃಶ್ಯತೆಯ ಭೀಕರತೆ, ಜೀತಗಾರನ ಸಾಮಾನ್ಯ ಸ್ಥಿತಿ, 'ವ್ಯವಸ್ಥೆ'ಯ ಕ್ರೂರತೆಯನ್ನು ಇಲ್ಲಿನ ಸಾಲುಗಳಲ್ಲಿ ಕಾಣಬಹುದು. 'ಜೀತ' ಎನ್ನುವುದೇ ಒಂದು ಅನಿಷ್ಟ ಪದ್ಧತಿ. ಅದರಲ್ಲೂ ಜೀತದ ಹೆಸರೇಳಿ ಬಳಸಿಕೊಂಡ ರೀತಿ ಇನ್ನೂ ಅಮಾನವೀಯ ಘಟನೆ ವ್ಯವಸ್ಥೆಯ ಕ್ರೂರ ತನಕ್ಕೆ ಸದ್ದಿಲ್ಲದೇ ಒಗ್ಗಿಕೊಂಡಿರುವ ದಲಿತ ಸಮುದಾಯದ ಒಳ ಅರ್ಥವನ್ನು ಕವಿ ಖಂಡಿಸಿದ್ದಾರೆ.

'ಜಾತಿ' ವೃಕ್ಷದಡಿಯಲ್ಲೇ 'ಅಸ್ಪೃಶ್ಯತೆ'ಯ ಸಸ್ಯ ಚಿಗುರೊಡೆದಿರುತ್ತದೆ. ಮುಂದುವರಿಯುವ ಸಮುದಾಯಕ್ಕೆ, ಸಮಾಜಕ್ಕೆ, ದೇಶಕ್ಕೆ, 'ಜಾತಿ', 'ಅಸ್ಪೃಶ್ಯತೆ'ಗಳೆರಡು ಮುಳ್ಳುಗಳಿದ್ದಂತೆ. ಇವೆರಡರ ಅಸ್ತ್ರವಾಗಿ ಪಡೆದ ರಾಜಕಾರಣಿಗಳು ಇವನ್ನು ಬುಡ ಸಮೇತ ಕಿತ್ತು ಹಾಕಬೇಕೆಂದು ಭಾಷಣ ಮಾಡಿ, ನೀಡಿದ ಆಶ್ವಾಸನೆಗಳನ್ನು 'ಯಾವಾಗ' ಪದ್ಯ ಪ್ರಶ್ನಿಸುತ್ತಿದೆ.

ಆರ್ಥಿಕ–ಸಾಮಾಜಿಕ
ಅಸಮಾನರಾಗುಳಿದೆವು;
ಈ ಅಸಮತೆಯ ತೊಡೆವೆವು
ಈ ಪ್ರಭುತ್ವದೆದುರು ಸಿಡಿವೆವು
ಎಂದು ಘೋಷಿಸಿದಿರಲ್ಲಿ
ಪಾರ್ಲಿಮೆಂಟ್‌ನಲ್ಲಿ
ಅದು ಯಾವಾಗ

(ಜವರಯ್ಯ ಮ.ನ., ವಿದ್ರೋಹ, 2002, ಪುಟ 15)

'ಸಮಾನತೆ' ಎಂಬುದು ಮುಂದುವರಿದ ದೇಶಗಳ ಯಶಸ್ವಿ ಮಂತ್ರ. ಇದನ್ನು ಬಂಡವಾಳ ಮಾಡಿಕೊಂಡು ನಮ್ಮ ದೇಶದ ರಾಜಕಾರಣಿಗಳು

ಘೋಷಣೆ ಮಾಡಿದ ಆರ್ಥಿಕ, ಸಾಮಾಜಿಕ, ಸಮಾನತೆಯ ಭಾಷಣಗಳು ನೆರವೇರದ ಕಾರಣ ಕವಿ ಪ್ರಶ್ನೆ ಮಾಡುತ್ತಿದ್ದಾರೆ. ನಿಮ್ಮ ಭಾಷಣ ಬರೀ ಪಾರ್ಲಿಮೆಂಟಿಗೆ ಮಾತ್ರ ಸೀಮಿತ ಎಂದು ಅಣಕಿಸುವಂತೆ ರಾಷ್ಟ್ರ ನಾಯಕರನ್ನು ಪ್ರಶ್ನಿಸುತ್ತಿದ್ದಾರೆ.

'ವ್ಯವಸ್ಥೆ' ತೋರುವ ಅಸ್ಪೃಶ್ಯತೆಯ ಶೋಷಣೆಗೆ ಕೊಂಚ ವಿರೋಧ ವ್ಯಕ್ತವಾದರೂ, ಸಮುದಾಯಕ್ಕೆ ಹೊತ್ತಿನ ಊಟವಿಲ್ಲದೆ, ಅಥವಾ ಎಡಬಿಡದೆ ಚಾಕರಿ ಮಾಡುವ ಅಥವಾ ದೈಹಿಕವಾಗಿ ಶಿಕ್ಷಿಸುವ ಹಂತಕ್ಕೆ ನಿಲ್ಲುತ್ತಿತ್ತು. ಇನ್ನು ಹಬ್ಬ–ಹರಿದಿನಗಳಲ್ಲಿ ಇತರರು ಸಡಗರ ಸಂಭ್ರಮದಲ್ಲಿ ಕಾಲಕಳೆದರೆ, ಸಮುದಾಯಕ್ಕೆ ಇದರಲ್ಲಿ ಭಾಗವಹಿಸಲು ಅವಕಾಶಕೊಡದೆ, ಅಸಮಾನತೆಗೆ ದಲಿತ ಸಮುದಾಯದವರಷ್ಟೇ ಸೂಕ್ತ ಎಂಬ 'ಅಂಧ ಪ್ರಜ್ಞೆ' ಒಂದು ಕಡೆಯಾದರೆ, ದಲಿತ ಕವಿಗಳು ತಮ್ಮ ಮುಂದಿನ ಪೀಳಿಗೆಯವರಿಗೆ ಹಿಂದಿನವರು ಪಟ್ಟ 'ಅಸ್ಪೃಶ್ಯತೆ'ಯ ಅರಿವನ್ನು ಕಾವ್ಯಗಳ ಮೂಲಕ ತಿಳಿಸಿದ್ದಾರೆ. ಕೆಲವೊಂದು ಕಡೆ ಅಸ್ಪೃಶ್ಯತೆಯ ವ್ಯವಸ್ಥೆಗೆ ಪ್ರತಿಭಟಿಸುವ ಸಲುವಾಗಿ ಕಾವ್ಯ ರಚಿಸಿದರೆ ಇನ್ನೊಂದು ಕಡೆ ಜಾಗೃತರಾಗುವಂತಹ ಕಾವ್ಯಗಳನ್ನು ಕಾಣಬಹುದು ತನ್ನ ಸಮುದಾಯದವರು ಅನುಭವಿಸಿದ್ದು, ಮುಂದಿನ ಪೀಳಿಗೆಗೆ ತಿಳಿದಿರಬೇಕೆಂಬುದು ಹಾಗೂ 'ವ್ಯವಸ್ಥೆ'ಯ ಕೃತ್ಯವನ್ನು ಖಂಡಿಸುವುದಕ್ಕಾಗಿ ಕಾವ್ಯಗಳು ಮೂಡಿಬಂದಿವೆ.

ಈ ಅಧ್ಯಾಯದಲ್ಲಿ ಕಂಡು ಬರುವ ಪದ್ಯಗಳ ಆಧಾರದಿಂದ 'ಅಸ್ಪೃಶ್ಯತೆ' ಎಂಬುದು ಜಾತಿ ಸಂಘರ್ಷದಿಂದಲೇ ಉಂಟಾಗಿದ್ದು, ಜಾತಿಯೊಂದಿಗೆ ಅಸ್ಪೃಶ್ಯತೆಯೂ ಹುಟ್ಟುಕೊಂಡಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ. ಜಾತಿ ವಿನಾಶಕ್ಕೆ ಅಂತರ್ಜಾತಿ ವಿವಾಹವೇ ಮದ್ದು ಎಂಬುದು ಹಿರಿಯರೊಬ್ಬರ ಮಾತು ಇದರಿಂದ ಅಸ್ಪೃಶ್ಯತೆಯನ್ನು ದೂರ ಮಾಡಬಹುದೆಂಬ ಯೋಚನೆ ಇವರಲ್ಲಿ ಕಾಣಬಹುದು. ಆದರೆ ದಲಿತ ಸಮುದಾಯದವನೊಬ್ಬನನ್ನು ಮದುವೆ ಆದ ಮಗಳಿಗೆ ತಂದೆ ಚಪ್ಪಲಿ ಏಟುಕೊಟ್ಟ ಉದಾಹರಣೆಯೊಂದು ಕಾವ್ಯದಲ್ಲಿ ಹರಿದಾಡಿದೆ. ಅಂದರೆ 'ಸಮಾನತೆ' ದಲಿತ ಸಮುದಾಯದವರೊಂದಿಗಲ್ಲ ಎಂಬ ಅರ್ಥ ಇಲ್ಲಿ ವ್ಯಕ್ತವಾಗುತ್ತದೆ. 'ಜೀತ'ಕ್ಕೆ ವಯಸ್ಸಿನ ಅಂತರವಿಲ್ಲ, ದಲಿತ ಸಮುದಾಯದ ಅಸ್ಪೃಶ್ಯತೆಗೆ ಕೊನೆ ಇಲ್ಲ. ವ್ಯವಸ್ಥೆಯು ದಲಿತರನ್ನು ಯಾವ ಸ್ಥಿತಿಯಲ್ಲಿದ್ದರೂಎಷ್ಟೇ ವಯಸ್ಸಾಗಿದ್ದರೂ ತಮ್ಮ ಮನೆಯ ಸೇವೆಗೆ

ಮೀಸಲಾಗಿರಿಸಿ ಕೊಂಡು ಅಸ್ಪೃಶ್ಯತೆಯ ಪ್ರದರ್ಶನ ಮಾಡುವುದು ಕಂಡು ಬಂದಿದೆ. ಸಮುದಾಯದವರು ಜಾತಿ, ವರ್ಣ, ವರ್ಗ ಎಂಬ ಬಲೆಯಲ್ಲಿ ಸಿಕ್ಕಿ ಒದ್ದಾಡಲು ಈ ವ್ಯವಸ್ಥೆಯು ಒಂದು ರೀತಿಯಲ್ಲಿ ಕಾರಣವಾಗುತ್ತದೆ. ಅಲ್ಲದೆ ದಲಿತರ ಅಸಹಾಯಕ ಸ್ಥಿತಿಯು ಕೂಡ ಈ ವ್ಯವಸ್ಥೆಗೆ ಅಸ್ತ್ರವಾಗಿದೆ. ಅಸ್ಪೃಶ್ಯತೆಯ ರೂಪಕಗಳೆಂದರೆ ಸಮುದಾಯದವರು ವ್ಯವಸ್ಥೆಯ ಮುಂದೆ ಕೈಕಟ್ಟಿ, ತಲೆಬಾಗಿ, ದೇವರು ಪ್ರತ್ಯಕ್ಷವಾದಂತೆ ಭ್ರಮೆಯಲ್ಲಿ ಮುಳುಗಿ ಭಯ, ಭಕ್ತಿಯಿಂದ, ಇತರರು ಕೈಯಲ್ಲಿ ತೋರಿಸಿದ್ದನ್ನು ತಲೆ ಮೇಲೆ ಹೊತ್ತು ನೆರವೇರಿಸುವ, ಅಂಥ ಶ್ರದ್ಧೆಯುಳ್ಳ ಮನಸ್ಸಿಗರು ಎಂಬ ಅಂಶವು ಕಾವ್ಯದ ಒಡಲಲ್ಲಿ ಕಾಣಸಿಗುತ್ತದೆ.

## ಆ. 'ಹಸಿವು : ಪ್ರತಿಭಟನೆ'

'ಹಸಿವು' ದಲಿತ ಕಾವ್ಯದ ನೆಲೆಗಳಲ್ಲಿ ಒಂದು. ದಲಿತರಿಗಾದ ಹಸಿವು ಒಂದು ದಿನದ ಹಸಿವಲ್ಲ. ಹಸಿವಿನ ವಿಭಿನ್ನ ಮುಖಗಳ ಪ್ರತಿರೂಪವಾಗಿ ದಲಿತ ಸಮುದಾಯದವರು ನಿಲ್ಲುತ್ತಾರೆ. ಹಸಿವನ್ನು ನೀಗಿಸಿಕೊಳ್ಳಲು ಉಳ್ಳವರಲ್ಲಿ ಉದ್ಯೋಗ ಅರಸಿ ಹೊರಟ ಇವರಿಗೆ 'ಜೀತ' ಎಂಬ ಜೈಲು ಬಂಧಿಸುತ್ತದೆ. ಇದರಿಂದ ಬಿಡುಗಡೆ ಬಯಸಿದರೆ ಹಸಿವಿನ ತೀವ್ರತೆ ಹೆಚ್ಚುತ್ತದೆ ಹಾಗೂ ಈ ಬಂಧನದಲ್ಲೇ ಇದ್ದರೆ ವಂಶಪಾರಂಪರ್ಯವಾಗಿ ಹಬ್ಬುತ್ತದೆ. ಕೊನೆಗೂ ಈ ಸಂಕೋಲೆಯಿಂದ ಮುಕ್ತಿಗೊಳ್ಳದ ಸಮುದಾಯ, ಹಸಿವಿನ ಬಲೆಗೆ ಸಿಲಿಕಿ, ಹಸಿವಿನ ಭೀಕರ ಸ್ವರೂಪವಾದ 'ಜೀತ'ಕ್ಕೆ ದಾಸರಾಗಿತ್ತಾರೆ. ಉಳ್ಳವರು ದಲಿತರ ಹಸಿವಿನ ಸ್ಥಿತಿಯನ್ನು ಸದುಪಯೋಗ ಪಡಿಸಿಕೊಂಡು ಶಾಶ್ವತವಾಗಿ ಜೀತದಾಳುಗಳನ್ನಾಗಿ ಮಾಡಿಕೊಳ್ಳುತ್ತಾರೆ.

ದಲಿತರಿಗೆ ಆವರಿಸಿಕೊಂಡಿರುವ ಹಸಿವು ಯಾವ ರೀತಿಯದ್ದು ಎಂಬುದು ಒಂದು ರೀತಿಯ ಚರ್ಚೆಗೆ ನಿಲುಕುವಂಥದದ್ದು. ಕ್ಷಣದ ಹಸಿವನ್ನು ದೂರ ಮಾಡಲು ದುಡಿಮೆಯ ಹಾದಿ ಹಿಡಿದರೆ? ಅಥವಾ ಹಸಿವಿನ ನೆರಳನ್ನು ಸಂಪೂರ್ಣವಾಗಿ ದೂರವಿಡುವುದಕ್ಕೆ ಈ ದುಡಿಮೆಯ ದಾರಿ ತುಳಿದರೆ? ಹಾಗೂ ದಲಿತರು ತಮ್ಮ ದುಡಿಮೆಯಿಂದ ಹಸಿವನ್ನು ನೀಗಿಸಿಕೊಳ್ಳಬಹುದಾಗಿತ್ತೆ? ಉಳ್ಳವರು ದಲಿತರಿಂದ ದುಡಿಸಿಕೊಂಡು ಸೂಕ್ತ ರೀತಿಯಲ್ಲಿ ನಿಗದಿತ ಕೂಲಿಯನ್ನು ನೀಡುತ್ತಿದ್ದರೆ? ದುಡಿಮೆಗೆ ಸರಿಯಾದ ಕೂಲಿ ನೀಡದಿದ್ದರೆ ದಲಿತರ ಪ್ರತಿಕ್ರಿಯೆ ಏನಾಗಿತ್ತು? ಎಂಬ ಅಂಶಗಳನ್ನು 'ಹಸಿವು' ಪ್ರತಿಭಟನೆಯಲ್ಲಿ ಚರ್ಚಿಸಲಾಗಿದೆ.

ಉಳ್ಳವರಿಗೆ ದಲಿತರ ಹಸಿವನ್ನು ದೂರ ಮಾಡುವ ಸಾಮರ್ಥ್ಯವಿದ್ದರೂ ಅಥವಾ ದುಡಿತಕ್ಕೆ ಸರಿಯಾದ ಕೂಲಿ ಕೊಡುವ ಸ್ಥಿತಿ ಇದ್ದರೂ, ಕೂಲಿ ಕೊಡಲು ನಿರಾಕರಿಸಿದ್ದು 'ಅಸ್ಪೃಶ್ಯ'ರೆಂಬ ಕಾರಣಕ್ಕಾಗಿ. ಆದರೆ ಇವರಿಂದಲ್ಲೇ ದುಡಿಸಿಕೊಂಡು ಕೂಲಿ ಕೊಡುವ ಸಂದರ್ಭದಲ್ಲಿ 'ಅಸ್ಪೃಶ್ಯತೆ'ಯ ಬಣ್ಣ ಹಚ್ಚುವ ಉಳ್ಳವರ ಗುಣಕ್ಕೆ ದಲಿತ ಸಮುದಾಯವು ಒಂದು ಕಡೆ ಮೌನವಾಗಿ ವ್ಯವಸ್ಥೆಯ ಶೋಷಣೆಯನ್ನು ಒಪ್ಪಿಕೊಂಡು, ಕೊಟ್ಟಿದನ್ನು ಪಡೆದು, ಒಳಗೊಳಗೆ ಪ್ರತಿಭಟಿಸುವ ಉದಾರಣೆಗಳು ಹಾಗೂ ವ್ಯವಸ್ಥೆಯ ವಿರುದ್ಧ ನಿಂತು ಗೆಲುವು ಪಡೆಯುವುದು ಸಾಧ್ಯವಿಲ್ಲವೆಂದು ತಿಳಿದಿದ್ದರೂ, ಎದುರು ಹಾಕಿಕೊಂಡು ಶಿಕ್ಷೆ ಪಡೆದು, ಇದಕ್ಕೂ ಲೆಕ್ಕಿಸದೆ ಪ್ರತಿಭಟಿಸುವ ಕೆಲವರನ್ನು ಕಾವ್ಯದ ಒಳಗೆ ಕಾಣಬಹುದು.

ಉಳ್ಳವರು ದಲಿತರ ದುಡಿಮೆಗೆ ತಕ್ಕ ಕೂಲಿ ಕೊಡದಿರಲು ಅಥವಾ ದಲಿತರನ್ನು ವಂಚಿಸಿ ಕಡಿಮೆ ಕೂಲಿ ಕೊಡುತ್ತಿದ್ದ ಅನೇಕ ಉದಾಹರಣೆಗಳು ನಮ್ಮ ಮುಂದಿವೆ. ದಲಿತರಲ್ಲಿರುವ ಮೌಢ್ಯತೆ ಹಾಗೂ ಭಯ, ಇವೆರಡರ ಸಂಪೂರ್ಣ ಲಾಭ ಪಡೆದ ವ್ಯವಸ್ಥೆ ದಲಿತರನ್ನು ನವಿರಾಗಿ ವಂಚಿಸುವಲ್ಲಿ ಯಶಸ್ಸಿಯಾಯಿತು. ದಲಿತರ ದುರ್ಬಲ ಸ್ಥಿತಿಯನ್ನು ಅರಿತು, ಒಂದಿಷ್ಟು ಪುಡಿಗಾಸನ್ನು ಕೊಟ್ಟು ಅಲ್ಲಿ ಒಳ್ಳೆಯವರಾಗಿ, ನಂತರ ಆ ಪುಡಿಗಾಸಿನ ವಸೂಲಿಗಾಗಿ 'ಜೀತ' ಎಂಬ ಪಟ್ಟಕಟ್ಟಿ ದುಡಿಸಿಕೊಳ್ಳುವ ಕ್ರೌರ್ಯವನ್ನು ಕಂಡು ಇದರ ವಿರುದ್ಧ ನಿಂತವರು ಹಾಗೂ ಈ ಕಾರ್ಯದ ಅರಿವನ್ನು ತನ್ನ ಸಮುದಾಯದವರಲ್ಲಿ ಮೂಡಿಸಿದವರು 'ಅಕ್ಷರಸ್ಥ' ದಲಿತರು.

ದಲಿತ ಕವಿಗಳು ತಾವು ಸ್ವತಹ ಅನುಭವಿಸಿದ ಹಸಿವಿನ ಬವಣೆ ಹಾಗೂ ತನ್ನ ಸಮುದಾಯದವರು ಅನುಭವಿಸುತ್ತಿರುವ ಸಂಕಟವನ್ನು ಕಾವ್ಯವಾಗಿಸಿ, ಒಂದು ಕಡೆ ವ್ಯವಸ್ಥೆಯನ್ನು ಕವಿಗಳೇ ನೇರವಾಗಿ ಪ್ರತಿಭಟಿಸಿದರೆ, ಇನ್ನೂ ಕೆಲವು ಕಡೆ ತನ್ನ ಸಮುದಾಯದವರ ಮೂಲಕ ಪ್ರತಿಭಟಿಸಿದರು ಸಮುದಾಯ ಹಾಗೂ ಕವಿಗಳ ಉದ್ದೇಶ ಮಾತ್ರ 'ಹಸಿವು ಮುಕ್ತ' ಸಮುದಾಯದ ಕಡೆಗೆ ಮುಖ ಮಾಡಿರುತ್ತದೆ.

ದಲಿತರ ಪಾಲಿಗೆ ಹಸಿವು, ಬಡತನ, ಆರ್ಥಿಕತೆ ಎನ್ನುವುದು ರಕ್ತ ಸಂಬಂಧದಂತೆ ತಲತಲಾಂತರದಿಂದ ಬಂದ ನಂಟಿನಂತೆ ಬೆಳೆದು ಬಂದಿದ್ದು, ಈ ಹಸಿವಿನ ಬಲೆಯಲ್ಲಿ ಸಿಲುಕಿ, ಶತಮಾನಗಳಿಂದ ಸಮಾಜದ ಪ್ರಬಲ ವರ್ಗಗಳ ಆಟಿಕೆಯ ದಾಳಗಳಾಗಿ, ಅವರ ಪಾದರಕ್ಷೆಗಳಾಗಿ, ಕ್ರೌರ್ಯ, ದೌರ್ಜನ್ಯಗಳನ್ನು ಹಾಸುಂಡ ಸಮುದಾಯದ ಒಡಲಾಳದ ವಾಸ್ತವ ಚಿತ್ರಣವು 'ನನ್ನ ಜನಗಳು' ಎಂಬ ಪದ್ಯದಲ್ಲಿ ಅನಾವರಣಗೊಳ್ಳುತ್ತದೆ.

ಹಸಿವಿಂದ ಸತ್ತೋರು ಸೈಜಿಗಲ್ಲು ಹೊತ್ತೋರು
ವದೆಸಿಕೊಂಡು ವರಗಿದೋರು ನನ್ನ ಜನಗಳು
ಕಾಲುಕಯ್ಯಿ ಹಿಡಿಯೋರು ಕೈ ಮಡಿಸಿಕೊಳ್ಳೋರು
ಭಕ್ತರಪ್ಪ ಭಕ್ತರೋ ನನ್ನ ಜನಗಳು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 57)

ದಲಿತರ ನೈಜ ಸ್ಥಿತಿಯ ವರ್ಣನೆಯನ್ನು ಖಂಡಿಸಿ, ಇವರನ್ನು ದೇವರ ಮುಂದಿರುವ ಭಕ್ತರಿಗೆ ಹೋಲಿಸಿದ್ದಾರೆ.

'ದಲಿತ' ಎಂದರೆ ದುಡಿಯುವ ಸಮುದಾಯ ಅಂದರೆ ಶೋಷಿತರು. ಇವರು ಸಮಾಜಕ್ಕಾಗಿ, ಸಮಾಜದ ಅಭಿವೃದ್ಧಿಗಾಗಿ ಕೃಷಿ ಚಟುವಟಿಕೆ, ಜೀತ ಮುಂತಾದ ಅಗತ್ಯ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ದುಡಿದರೂ ಹಸಿವಿನಿಂದ ಸಾಯುತ್ತಿದ್ದಾರೆ.

ದಲಿತರಿಂದ ದುಡಿಸಿಕೊಳ್ಳುವ ಪ್ರಬಲ ವರ್ಗವು ಇವರ ಬೇಕು, ಬೇಡಗಳಿಗೆ ಬೆಲೆಕೊಡದೆ, ತಿಂದ ನಂತರ ಎಲೆ ಬಿಸಾಡುವಂತೆ ದಲಿತರನ್ನು ಉಪಯೋಗಿಸಿಕೊಂಡು, ನಂತರ ತಿರಸ್ಕಾರಿಸುತ್ತಾರೆ. ಹಸಿವನ್ನು ನೀಗಿಸಿಕೊಳ್ಳದ ಸಮುದಾಯ ಒಂದು ಕಡೆಯಾದರೆ, ಇದರ ಲಾಭ ಪಡೆದ ವರ್ಗ ಇನ್ನೊಂದು ಕಡೆ ಎಂಬ ಅಂಶವನ್ನು ಈ ಸಾಲುಗಳಲ್ಲಿ ವ್ಯಕ್ತಪಡಿಸಿ ಪ್ರತಿಭಟಿಸುತ್ತಿದ್ದಾರೆ.

ದಲಿತರು ಉಳ್ಳವರಲ್ಲಿ ತಮ್ಮ ದುಡಿಮೆಯ ಪ್ರತಿಫಲವಾಗಿ ಎರಡ್ಹೊತ್ತಿನ ಗಂಜಿಯನ್ನು ಅಪೇಕ್ಷಿಸಿ, ಅದಕ್ಕಾಗಿ ತಮ್ಮ ಇಡೀ ಜೀವನವನ್ನೇ ಉಳ್ಳವರ ಮನೆಗೆ ಧಾರೆ ಎರೆಯುತ್ತಾರೆ.ಉಳ್ಳವರು ದಲಿತರಿಂದ ದುಡಿಸಿಕೊಂಡು, ತಿನ್ನುವ ಅನ್ನ ಕೊಡಲು ಹಿಂದು-ಮುಂದು ನೋಡಿ, ತಮ್ಮ ಎಂಜಲು ಕೈಯಿಂದ ಕಾಗೆ ಓಡಿಸುವಂತಹ ಸ್ವಭಾವದಿಂದ ಬೇಸತ್ತ ದಲಿತರ ಮನದಾಳದ ಮಾತನ್ನು 'ಭೂತನ ಕತೆ' ಪದ್ಯವು ವ್ಯಕ್ತ ಪಡಿಸುತ್ತದೆ.

ತೆಂಗಿನ ಮರದುದ್ದ ಅನ್ನವ ಕೊಟ್ಟರೆ
ಆಗುವೆ ಕಾಲಾಳು ಕಯ್ಯಾಳು ನಿಮ್ಮ
ಪಾದದ ಧೂಳು ತಲೆಗಿಟ್ಟು
(ಸಿದ್ದಲಿಂಗಯ್ಯ, ಮೆರವಣಿಗೆ, 2007, ಪುಟ 136)

ದಲಿತರ ಮುಗ್ಧತೆಯನ್ನು ಇಲ್ಲಿ ಕಾಣಬಹುದು. ಹಿಡಿ ಅನ್ನಕ್ಕೆ ತಮ್ಮ ಸರ್ವಸ್ವವನ್ನೆ ಧಾರೆ ಎರೆಯುತ್ತಿರುವುದು ಕವಿಗೆ ಅನುಕಂಪ ಹುಟ್ಟಿಸಿದೆ.ಮನುಷ್ಯನಿಗೆ ಅನ್ನವೇ ಮುಖ್ಯ. ಅನ್ನದಾತನೇ ದೇವರು. ಧಣಿ ಅನ್ನದಾತನಾದರೆ ಅವನನ್ನು ಪೂಜಿಸುವೆ ಎಂಬ ಅನ್ನದ ಹಂಬಲವನ್ನು ಇಲ್ಲಿ ಕಾಣಬಹುದು. ಬಡತನದಿಂದ ಪಾರಾಗಲು ಬೇರೆಯವರಲ್ಲಿ ಬೇಡುವ ಪರಿಸ್ಥಿತಿ ಎದುರಾಗಿದ್ದು, ಹೊಟ್ಟೆ ತುಂಬ ಅನ್ನ ಕೊಟ್ಟವರಿಗೆ ಸಾಯುವ ತನಕ ಸೇವೆ ಮಾಡಿಕೊಂಡು ಜೀವ ಕಳೆಯುತ್ತೇವೆ ಎಂದು ತಮ್ಮ ಹಸಿವಿನ ಸಂಕಟವನ್ನು ಹೊರಹಾಕಿ ಇದರ ವಿರುದ್ಧ ಪ್ರತಿಭಟನೆಗೆ ನಿಂತಿದ್ದಾರೆ. ಒಂದು ತುತ್ತಿನ ಊಟಕ್ಕೆ ದಲಿತರು ವ್ಯವಸ್ಥೆಗೆ ವಿಧೇಯಕರಾಗಿ ನಿಂತರೆ, ಅದೇ ವಿಧೇಯತೆ ವ್ಯವಸ್ಥೆಗೆ ಲಾಭವಾಗುತ್ತದೆ.

ಯುವ ದಲಿತ ಅಕ್ಷರ ಕಲಿತು, ಹೊಸ ದಿಕ್ಕಿನೆಡೆಗೆ ಸಾಗ ಬಯಸಿದರೆ ವ್ಯವಸ್ಥೆಗೆ ವಿಧೇಯಕರಾದ ಹಿರಿಯ ದಲಿತ ವರ್ಗ ಆ ದಿಕ್ಕಿಗೆ ಮುಳ್ಳಾಗಿ ಪರಿಣಮಿಸಿ ತೊಡಕಾಗಿದೆ. ಈ ರೀತಿ ದಲಿತರಲ್ಲೇ ನಿಖರವಾದ ಹೊಂದಾಣಿಕೆ ಇಲ್ಲವಾದಾಗ ಅದರ ಸಂಪೂರ್ಣ ಲಾಭ ವ್ಯವಸ್ಥೆಗಾಗುತ್ತದೆ.

ಹಣದ ದಾಹ ಯಾರನ್ನೂ ಬಿಟ್ಟಿಲ್ಲ. ಬಡವ, ಶ್ರೀಮಂತ, ಪಟ್ಟಣದ ಪ್ಯಾಷನ್ ಲೋಕವನ್ನೂ ಬಿಡದೆ, ನೆಟ್ಟಗೆ ಮಲಗಿದ್ದವರನ್ನು ಕೂರುವಂತೆ, ಕೂತವನನ್ನು ನಿಲ್ಲುವಂತೆ, ನಿಂತು ನೋಡುವವರನ್ನು ಓಡುವಂತೆ, ಯಾರಿಗೂ ತಿಳಿಯದ ಹಾಗೆ ಸದ್ದಿಲ್ಲದೆ ಒಬ್ಬೊಬ್ಬರಲ್ಲೂ ಸಂಚರಿಸಿ, ಎಲ್ಲರಲ್ಲೂ ಗದ್ದಲ, ಗಲಭೆ ಎಬ್ಬಿಸಿ ನೆಮ್ಮದಿಯನ್ನು ಕೆಡಿಸಿದೆ. ಹಣಕ್ಕೆ ಬಂದವರಾರೋ, ಹೋದರವಾರೋ ತಿಳಿಯದೆ, ದೊಡ್ಡವರು, ಚಿಕ್ಕವರು ಎಂಬ ವಯಸ್ಸಿನ ಭೇಧವಿಲ್ಲದೆ, ಕಂಡ ಕಂಡವರನೆಲ್ಲಾ ಸುತ್ತಾಡಿ ಬಂದಿದೆ. ಈ ಹಣವನ್ನು ಗೆಲ್ಲುವ ಶಕ್ತಿವಂತ, ವೀರನು ಯಾರೂ ಇಲ್ಲ. ದುಡ್ಡಿನಿಂದಾಗಿ ಜಾತಿಯೋ, ಜಾತಿಯಿಂದ ದುಡ್ಡೋ ತಿಳಿಯದೆ, ಉಳ್ಳವರಿಗೆ ಹಣದ ಭೂತ ಹಿಡಿದರೆ, ದಲಿತರಿಗೆ ಹಣದ ಬರ ಆವರಿಸಿದೆ. ಆದರೆ ಇಲ್ಲಿ ದಲಿತನಿಗೂ, ಮೇಲ್ವರ್ಗವರಿಗೂ ಹಣಕ್ಕಾಗಿ, ಹಣದಿಂದ, ಹಣಕ್ಕೋಸ್ಕರ ಕಿತ್ತಾಟವಾಗುತ್ತಿದೆ. ಹಣ ಬರುವುದೆಂದು ದಲಿತ ನೂರಾರು ಕನಸಿನೊಡನೆ ದುಡಿಯ ಹೊರಟರೆ, ದುಡಿದ ದಲಿತನಿಗೆ ಸರಿಯಾದ ಕೂಲಿ ಕೊಟ್ಟರೆ, ನನ್ನನ್ನೇ ತುಳಿದು ಮೇಲೆ ಬರಬಹುದೆಂಬ ಭಯ ಉಳ್ಳವನದ್ದು. ಹೀಗೆ ಹಣದ ವಿಷಯದಲ್ಲಿ ಮುಂದೆ ಬರಲು ಇಬ್ಬರೂ ಒಳಗೊಳಗೆ ದ್ವೇಷ ಕಟ್ಟಿಕೊಂಡು ಬದುಕುತ್ತಿರುವುದನ್ನು ತಿಳಿದ ದಲಿತರು ಕೇವಲ ಹಣದಿಂದಾಗಿಯೇ ನಮ್ಮಲ್ಲಿ ಇಂಥ ದ್ವೇಷ ಎಂದು ಹಣದ ಸ್ವರೂಪವನ್ನು 'ಚಳಿಯ ಹಾಡು' ಎಂಬ ಪದ್ಯದಲ್ಲಿ ವರ್ಣಿಸಿದ್ದಾರೆ.



ಚಳಿಯು ಬಂತಲ್ಲಾ
ಇಳೆಯ ಮೇಲೆ ಚಳಿಯು ಬಂತಲ್ಲಾ
ಮಲಗಿದ್ದವರನ್ನು ಕೂರಿಸಿತು
ಕುಂತವರನ್ನು ನಿಲ್ಲಿಸಿತು
ನಿಂತವರನ್ನು ಓಡಿಸಿತು

(ಸಿದ್ದಲಿಂಗಯ್ಯ, ಮೆರವಣಿಗೆ, 2007, ಪುಟ 53)

ಇಲ್ಲಿನ ಚಳಿಯು ಹಣದ ರೂಪವನ್ನು ಕೊಡುತ್ತದೆ. ಹಣದ ದಾಸರಾದವರ ಸ್ಥಿತಿಯನ್ನು ಕಂಡ ಕವಿ ಅವರನ್ನು ಹೀಯಾಳಿಸುವ ಮೂಲಕ ಪ್ರತಿಭಟಿಸುತ್ತಿದ್ದಾರೆ.

ಹಣದ ಸಹಾಯದಿಂದ ಹಸಿವನ್ನು ನೀಗಿಸಿಕೊಳ್ಳಬಹುದೆಂದು ದಲಿತರು ತಿಳಿದುಕೊಂಡಿದ್ದಾರೆ. ಆದರೆ ಇದೇ ಹಣದಿಂದ ದಲಿತರು ನೆಮ್ಮದಿಯಿಂದ ನಿದ್ದೆ ಮಾಡಲು, ಕೂರಲು, ಶಾಶ್ವತವಾಗಿ ಒಂದು ಕಡೆ ನೆಲೆಸಲು ಸಾಧ್ಯವಾಗುವುದಿಲ್ಲ ಎಂದು ಮನಗಂಡು, ಹಣದಿಂದ ಉಳ್ಳವರು ಮಾತ್ರ ಉದ್ಧಾರವಾದರು. ಆದರೆ ನಮ್ಮ ಸ್ಥಿತಿ ಮಾತ್ರ ಇದ್ದ ಸ್ಥಿತಿಯಲ್ಲಿಯೇ ಇದೆ ಎಂಬ ವ್ಯಥೆಯು ಮುಂದಿನ ಪದ್ಯದಲ್ಲಿದೆ.

ಮನೆ, ಮಠ, ಗಿಡಗಂಟಿ, ದನಕರು, ಮನುಷ್ಯ
ಎಲ್ಲ ಎಲ್ಲವನು ಬಳಿದು ಬರಿದು ಮಾಡಿದ ಕಡಲು
ಭಯವ ಬಿತ್ತಿದೆ ಇಲ್ಲಿ ಸೂತಕದ ಕಳೆ
ಸಂಕಟದ ಸುಳಿಯಲ್ಲಿ ನೋವುಗಳ ರಾಶಿ
ಅಯ್ಯೋ! ಎಲ್ಲಿ ತುಂಬಿಡಲಿ ವಿಷಗಳಿಗೆ

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 96)

ಹಸಿವಿನ ಚಿತ್ರಣ ಇದು. ಹಸಿವನ್ನು ನಿಗಿಸಿಕೊಳ್ಳಲು ಮುಂದಾದ ದಲಿತರಿಗೆ ತನ್ನದೇಲ್ಲವನ್ನು ಕಳೆದುಕೊಂಡು ಭೀಕರಿಯಾಗುವ ಸ್ಥಿತಿಯನ್ನು 'ವಿಷ'ಗಳಿಗೆ ಎಂದು ಹಣೆ ಪಟ್ಟಿ ಕೊಟ್ಟು, ಈ ಸ್ಥಿತಿಯ ವಿರುದ್ಧ ಕವಯತ್ರಿ ಪ್ರತಿಭಟಿಸುತ್ತಿದ್ದಾರೆ. ಈ ಸಾಲುಗಳಲ್ಲಿ ದಲಿತರ ಹಸಿವಿನ ಪರಿಣಾಮವನ್ನು ಕವಯತ್ರಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇಲ್ಲಿ 'ಕಡಲು' ಹಸಿವಿನ ಸಂಕೇತವಾಗಿದ್ದು, ಹಸಿವೆಂಬ ಕಡಲು ದಲಿತರನ್ನು ಆವರಿಸಿದರೇ, ಸಂಕಟದ ಸುಳಿಯಲ್ಲಿ ಬಿದ್ದು ಒದ್ದಾಡುವ ವಾತಾವರಣ ಎದುರಾಗಿದೆ. ಇದೊಂದು ವಿಷಗಳಿಗೆ ಎಂದು ಕವಯತ್ರಿ ಅಭಿಪ್ರಾಯಿಸಿದ್ದಾರೆ.

ದಲಿತರು ಹಸಿವಿನಿಂದ ಒದ್ದಾಡಲು ಮೂಲ ಕಾರಣ ಉಳ್ಳವರಿಂದ ಪಡೆದ ಸಾಲ. ಉಳ್ಳವರು ದಲಿತರನ್ನು ಗಾಣದೆತ್ತಿನಂತೆ ದುಡಿಸಿ, ಅವರ ಬಾಳನ್ನು ಕಗ್ಗತ್ತಲೆಯಲ್ಲಿ ನಿಲ್ಲಿಸಿರುತ್ತಾರೆ. ಹುಲ್ಲಿನ ಭಾರ ಹೊತ್ತ ದಲಿತರ ಬೆನ್ನ ಹುರಿಗಳು ಸೀಳಿ ಹೋಗಿ, ಹೊಲಗದ್ದೆಗಳಲ್ಲಿ ದುಡಿದ ದಲಿತರ ಸ್ವಂತ ದುಡಿಮೆಯ ಪ್ರತಿಫಲವು ಕರಗಿ ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಉಳ್ಳವರೆದುರು ನಕ್ಕಂತೆ, ಕುಕ್ಕರುಗಾಲಿನಲ್ಲಿ ಕೂರಿ, ಮುಕ್ಕೆರೆದು ಹೊರೆ ಎಳೆಯಬೇಕು. ಇಂತಹ ಸ್ಥಿತಿಯಲ್ಲೂ ಕೂಡ ಒಂದು ರೀತಿಯ ಹಸಿವಿನ ಆಳದ ಚಿತ್ರಣವು 'ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು' ಕವನದಲ್ಲಿ ಕಂಡು ಬರುತ್ತದೆ.

ಮುಕ್ಕರೆದು ಎಳೆದ ಹೊರೆ
ಮತ್ತೆ ಗಾಣದೆತ್ತಿನಂತೆ ತಿರು
ತಿರುಗಿ ಕಗ್ಗತ್ತಲೆ ಇಳಿದಂತೆ
ತೊಡೆ ಅದುರಿ ನಿತ್ರಾಣದ ಜೀವ
ಕರಗಿ ಹೋದವು ಆಗಲೇ

(ಸುಬ್ಬು ಹೊಲೆಯರ್, ಸೂಜಿಗಾತ್ರದಕೊಳಯಿಂದ ಮನುಷ್ಯನೊಬ್ಬನ ಹಾಡು, 2003, ಪುಟ 50)

ಎಂದು ವರ್ಣಿಸಿದ್ದಾರೆ. ಇಲ್ಲಿ ದುಡಿಮೆಯ ಪ್ರತಿಫಲವನ್ನು ಸೂಚಿಸುವ ಚಿತ್ರಣವಿದೆ. ಎತ್ತಿನಂತೆ ನಿರಂತರವಾಗಿ ದುಡಿದರೂ ಉತ್ತಮವಾದ ಫಲ ಇಲ್ಲವೆಂದು ಬೇಸರಗೊಂಡು ಪ್ರತಿಭಟಿಸಿದಂತಿದೆ. ಅಂದರೆ ಗಾಣದ ಎತ್ತು ನಿರಂತರ ಕೆಲಸಕ್ಕೆ ಸೀಮಿತವಾದ ಪ್ರಾಣಿ. ದಲಿತರು ತಮ್ಮ ಹಸಿವನ್ನು ನೀಗಿಸಿಕೊಳ್ಳಲು ಉಳ್ಳವರ ಹೊಲಗದ್ದೆಗಳಲ್ಲಿ ದುಡಿದದ್ದರಿಂದ ಇವರ, ದೇಹದ ಸ್ಥಿತಿ ಶೋಚನೀಯವಾಗಿರುವ ಚಿತ್ರಣವನ್ನು ಕವಿ ಮೇಲಿನ ಸಾಲುಗಳಲ್ಲಿ ಬಿಂಬಿಸಿದ್ದಾರೆ. ದಲಿತರು ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಗಾಣದ ಎತ್ತಿನ ಹಾಗೆ ದುಡಿದರೂ ಅವರ ಜೀವನ ಕಗ್ಗತ್ತಲಾಗಿದೆ. ದುಡಿದೂ ದುಡಿದು ಹಸಿವಿನ ಬೇಗೆಯಲ್ಲಿ ಬೆಂದು, ದೇಹದ ಬಲ ಕುಂದಿ ತೊಡೆಗಳು ಶಕ್ತಿಯಿಲ್ಲದೆ ನಡುಗುತ್ತಿವೆ. ಹಸಿವಿನ ಬಲೆಗೆ ಸಿಕ್ಕ ದೇಹ, ಬೆನ್ನು ಹುರಿಗಳು ಸೀಳಿ ಜೀವ ಜರ್ಜರಿತವಾಗಿದೆ ಎಂದು ಹೇಳುವಲ್ಲಿ ಹಸಿವಿನ ಬೇಗೆಯಿಂದ ನರಳುತ್ತಿರುವ ದಲಿತರ ಚಿತ್ರಣವನ್ನು ಬಹಿರಂಗಗೊಳಿಸಿದ್ದಾರೆ. ದಲಿತರು ಹಸಿವಿನಿಂದ ನಿತ್ರಾಣರಾಗಿದ್ದರೂ, ತಮ್ಮ ಹಸಿವನ್ನು ನೀಗಿಸಿಕೊಳ್ಳಲು ಕೆಲಸಕ್ಕೆ ಸಿದ್ದರಾಗಿದ್ದಾರೆ. ಉಳ್ಳವರು ಇವರಿಂದ ಕೆಲಸವನ್ನು ಮಾತ್ರ ಬಯಸಿ, ಕೂಲಿ ತಕ್ಕಷ್ಟು ಕೊಡದೆ, ಶೋಷಣೆ ಮಾಡಿದ್ದಾರೆ.

ಇಷ್ಟಾದರೂ ದಲಿತರು ಮಾತ್ರ ತಾವು ಮಾಡುವ ಕೆಲಸದ ಮೂಲಕವೇ ಹಸಿವಿನ ಪ್ರತಿಭಟನೆ ಮಾಡುವುದನ್ನು 'ಬೂಟ್ ಪಾಲಿಶ್ ಮತ್ತು ದೇವರ ಹನಿಗಳು' ಎಂಬ ಪದ್ಯವು ಬಿತ್ತರಿಸುತ್ತದೆ.

ಮತ್ತೆ ಮತ್ತೆ ಕೇಳಿದ ಪಾಲಿಶ್ ಮಾಡಿದ ಕೂಲಿಯನ್ನು
ನೆಲವನ್ನೆ ಮೆಟ್ಟಿ ನಿಂತವನಿಗೆ ಜುಜುಬಿ ಶಬ್ದಗಳು
ಬೀಳಲಿಲ್ಲ ಕಿವಿಗೆ
ಪುಟ್ಟ ಹಕ್ಕಿ ಗುಟುರು ಹಾಕಿದಂತೆ ಕೇಳಿದ

ಅವನು 'ವಾಟ್' ಅಂದಿದ್ದು ಇವನು 'ಬೂಟ್' ಅಂದಿದ್ದು
ಎರಡು ....... ಟ ನನ್ನ ಕಿವಿಯ ಮೇಲೆ ಬಿದ್ದವು

(ಸುಬ್ಬು ಹೊಲೆಯರ್, ಎಲ್ಲರ ಬೆರಳಲ್ಲೂ ಅಂಟಿಕೊಂಡ ದುಃಖವೇ, 2013, ಪುಟ 95)

ಹಸಿವು ನಿವಾರಿಸಿಕೊಳ್ಳವವರಿಗೆ ಎದುರಾಗುವ ಸಮಸ್ಯೆಯನ್ನು ಕಟ್ಟಿಕೊಡುತ್ತದೆ. ಶ್ರಮವಹಿಸಿ ದುಡಿದು ತಿನ್ನಬೇಕೆಂದವರಿಗೆ 'ವ್ಯವಸ್ಥೆ' ಒಂದಲ್ಲಾ ಒಂದು ರೀತಿಯಲ್ಲಿ ಶೋಷಣೆ ನೀಡುವುದನ್ನು ಇಲ್ಲಿ ಕಾಣಬಹುದು. ದಲಿತರು ಬೂಟ್ ಪಾಲಿಶ್ ಮಾಡಿಕೊಂಡು ಹಸಿವನ್ನು ನೀಗಿಸುವ ದಾರಿ ಹುಡುಕಿದರೆ, 'ವ್ಯವಸ್ಥೆ' ಎನ್ನುವ ಸಮಾಜವು ಮಾಡಿದ ಕೆಲಸಕ್ಕೆ ಕೂಲಿ ಕೊಡದೆ ಶೋಷಣೆ ಮಾಡಿದೆ. ಈ ರೀತಿಯ ಶೋಷಣೆಗೆ ದಲಿತರು ತಮ್ಮ ಕೆಲಸವನ್ನು ಮಾಡುತ್ತ, ಹಸಿವನ್ನು ನೀಗಿಸಿಕೊಳ್ಳಲು ಕೂಲಿಯನ್ನು ಕೇಳುವ ಮೂಲಕವೇ ಪ್ರತಿಭಟಿಸುತ್ತಿದ್ದಾರೆ.

ಮೇಲ್ವರ್ಗದವರೊಡನೆ ಸರಿಸಮನಾಗಿ ಬೆಳೆಯಬೇಕು ಎಂದು ದಲಿತರು ವ್ಯವಸ್ಥೆಯವರಲ್ಲೇ ದುಡಿದು, ಹಸಿವನ್ನು ಮರೆತು, ನೋವನ್ನು ಅನುಭವಿಸಿ, ಸುಖ ಕಾಣದೆ, ತನ್ನ ಮನೆಯವರನ್ನೆಲ್ಲಾ ಉಳ್ಳವರ ಮನೆಯಲ್ಲಿ ಜೀತಕ್ಕೆ ಇಟ್ಟು ದುಡಿದು–ದುಡಿಸಿದರೂ ಅವರ ಎಕ್ಕಡದ ಹಣವನ್ನು ಸಂಪಾದನೆ ಮಾಡಲಾಗಲಿಲ್ಲ. ಇದರ ಬಗ್ಗೆ ದಲಿತರು ಸ್ವಲ್ಪ ಗಡುಸಾಗಿ ಕೇಳಲು ಹೋದರೆ, ಅವರ ಮನೆಯ ಕಂಬಗಳು ದಲಿತರ ಪಾಲಿಗೆ ಮರಣಗಂಬವಾಗಿ ನಿಂತಿರುತ್ತವೆ. ಹಸಿದ ಮನಸುಗಳಿಗೆ ಸೂರ್ಯ–ಚಂದ್ರರೆ ಸಾಕ್ಷಿಯಾಗಿ ನಿಂತಿದ್ದಾರೆ. ಇವರು ಹಸಿವೆಂಬ ಸೆರೆಮನೆಯಲ್ಲಿ ಬಂಧಿಯಾಗಿ ಕನಸುಗಳನ್ನು ಕಳೆದುಕೊಂಡು, ಮರಳುಗಾಡಿನಲ್ಲಿ ನೀರನ್ನು ಹುಡುಕವಂತೆ, ಜೀವನವನ್ನು ಹುಡುಕ ಹೊರಟಿದ್ದಾರೆ. ಹೀಗೆ ಹುಡುಕುವ ಆಸೆಯಲ್ಲಿ ದಿಕ್ಕು ತೋರಿದ, ರೆಕ್ಕೆ ಮುರಿದ ಒಂಟಿ ಹಕ್ಕಿಯಂತೆ ಸೂತ್ರ ಇಲ್ಲದ ಗಾಳಿಪಟದಂತೆ ನೆಲಕಚ್ಚಿದ್ದಾರೆ. ಇವರಲ್ಲಿ ಏಳುವ ಆಸೆಯ ಬಿರುಗಾಳಿಗೆ ಉತ್ತರಿಸುವವರು ಯಾರೂ ಇಲ್ಲದೆ, ಇವರ ಕನಸಿಗೆ ಬೆಲೆ ಇಲ್ಲದೆ ಇವರ ದುಡಿಮೆಗೆ, ಬೆಳೆದ ಬೆಳೆಗೆ, ಬೆವರಿಗೆ, ನಿಯತ್ತಿಗೆ ಅನ್ನದ ದಾಹಕ್ಕೆ ಯಾರೊಬ್ಬರೂ ಕೂಡ ಕವಡೆ ಕಿಮ್ಮತ್ತಿನ ಪ್ರೋತ್ಸಾಹ ಕೊಡಲಿಲ್ಲ. ದಲಿತರನ್ನು ಮೇಲೆ ಎತ್ತಿದರೆ ಖಂಡಿತವಾಗಿ ನಮ್ಮನ್ನು ದಮನ ಮಾಡುತ್ತಾರೆಂದು ಉಳ್ಳವರು ಮನದಲ್ಲೇ ಲೆಕ್ಕಾಚಾರ ಮಾಡಿರುವುದು 'ನೆಲದ ಜೋಗುಳ'ದ 'ಗರಿ ಆರರ' ಕವಿತೆ ಸೆರೆಯಾಗಿದೆ.

ಯಾರಿಗಾಗಿ ಕನಸು
ಯಾರಿಗಾಗಿ ವೈಭವ
ಯಾರಿಗಾಗಿ ಸಿರಿಯ ಮೆರವಣಿಗೆ?
ಮನದಾಳದ ಬಿರುಗಾಳಿಗೆ
ಯಾರುತ್ತರಿಸುವರು

(ಮುಳ್ಳೂರು ನಾಗರಾಜ್, ನೆಲದ ಜೋಗುಳ, 1993, ಪುಟ 70)

ಈ ಸಾಲುಗಳಲ್ಲಿ ಉಳ್ಳವರ ಸಂಪತ್ತನ್ನು ಪ್ರಶ್ನಿಸುತ್ತ, ನಿಮ್ಮ ಸಿರಿ ಸಂಪತ್ತು ನಮಗೆ ಬೇಡ. ಆದರೆ ನಮ್ಮ ಮನದಲ್ಲೆದ್ದಿರುವ ಹಸಿವಿನ ಬಿರುಗಾಳಿಯನ್ನು ನಿವಾರಿಸಿಕೊಳ್ಳಲು ತುತ್ತು ಅನ್ನ ಕೊಟ್ಟರೇ ಸಾಕು. ನೀವು ಸಂಪತ್ತು ಉಳಿಸಿಕೊಂಡು ಏನು ಮಾಡುತ್ತೀರ? ನಮಗಾದರು ಕೊಟ್ಟರೆ ಉದ್ಧಾರವಾದರೂ ಆಗುತ್ತೇವೆ. ಊರಿನ ತುಂಬ ಆಸ್ತಿ–ಪಾಸ್ತಿ ಮಾಡಿಕೊಂಡು ವೈಭವದಿಂದ ಜೀವನ ನಡೆಸುವ ಬದಲು, ನಿಮ್ಮ ಕೈ ಕೆಳಗೆ ಕೆಲಸ ಮಾಡುವ, ನಿಮ್ಮ ಮನೆಯ ಜೀತ ಮಾಡಿಕೊಂಡು ಬದುಕುವ ನಮ್ಮ ಮನದಾಸೆಯನ್ನು ಕೇಳಿ, ನಮ್ಮ ಹಸಿವನ್ನು ನಿವಾರಿಸಿ ಎನ್ನುತ್ತಿದ್ದಾರೆ.

ಹಸಿದ ದಲಿತರಿಗೆ ಮಾಮರವು ಮರಣಗಂಬವಾಗಿ, ಕೋಗಿಲೆಯ ಹಾಡನ್ನು ಕೇಳದ ಸ್ಥಿತಿ, ಹಸಿವನ್ನು ನೀಗಿಸಿಕೊಳ್ಳದ ಹೊರತು ಬೇರುವ ಸ್ಥಿತಿಯನ್ನು ಅಪೇಕ್ಷಿಸದವರಾಗಿದ್ದಾರೆ. ಹಸಿವು ದಲಿತರ ಸಾವಿನಾಚೆಯ ಲೋಕವನ್ನು ಪರಿಚಯಿಸುವಂತಾಗಿದೆ. ಇಂತಹ ಹಸಿವಿನ ನರ್ತನವು 'ನೆಲದ ಜೋಗುಳ' ಪದ್ಯದ 'ಗರಿ ಐದರಲ್ಲಿ' ವರ್ಣಿತವಾಗಿದೆ.

ಮನೆಸೆಂಬ ಸೆರೆಮನೆಯಲ್ಲಿ
ಮರುಗಿದನು ಶಂಬೂಕ
ಕನಸುಗಳ ಕಳಕೊಂಡ ಮರಳುಗಾಡಲ್ಲಿ
ಹಸಿರ ಹುಡುಕಿ ಅಲೆದನು ಶಂಬೂಕ
ದಿಕ್ಕು ತೋರದ ಹಕ್ಕಿಯಾದನು
ಹೊಲೆ ಮಾನವ ಶಂಬೂಕ

(ಮುಳ್ಳೂರು ನಾಗರಾಜ್, ನೆಲದ ಜೋಗುಳ, 1993, ಪುಟ 57)

ಶಂಬೂಕ ಹೀನ ಕುಲದ ಸಂಕೇತ. ಇವನ ಉದ್ಧಾರಕ್ಕೆ ಇವನ ಮನಸ್ಸೇ ಅಡ್ಡ ಗೋಡೆಯಾಗಿ, ಜೀವನವನ್ನು ಉತ್ತಮ ಸ್ಥಿತಿಗೆ ತರಬೇಕೆಂದು ಅಲೆದು, ಆ ಗುಂಗಿನಲ್ಲೇ ನಶಿಸಿರುವುದನ್ನು ಇಲ್ಲಿ ಕಾಣಬಹುದು.

ಊರಿಗೆ ಪಂಚಾಯತಿ ಹೇಳುವ, ನ್ಯಾಯ ತೀರ್ಮಾನ ಮಾಡುವ ಜನರ ಮನೆಯಲ್ಲೇ ದಲಿತರು ಹಸಿವಿನಿಂದ ಒದ್ದಾಡುತ್ತಿದ್ದಾರೆ. ತನ್ನ ಮನೆಯ ಕಣಜದಲ್ಲಿ ಕಾಳು, ತೆನೆ, ಖಜಾನೆಯಲ್ಲಿ ಬಂಗಾರವನ್ನೇ ತುಂಬಿ ಕೊಂಡಿದ್ದರೂ ದಲಿತರಿಗೆ ಮಾತ್ರ ದಕ್ಕದಾಗಿ ಇಲ್ಲಿನ ಸಮಾಜದ ವ್ಯವಸ್ಥೆಯಿಂದ ಹೊರಗಿದ್ದಾರೆ. ನೆಲ ಒದ್ದೆಯಾದರೆ ಬೆಳೆ, ಆದರೆ ದಲಿತರು ಬೆವರಿನಿಂದ ತಮ್ಮ ದೇಹವನ್ನು ಒದ್ದೆಯಾಗಿಸಿಕೊಂಡರೇ ಹೊರತು ಯಾವ ಸುಖವನ್ನು ಅನುಭವಿಸಲಿಲ್ಲ. ಊರು ಯಜಮಾನರಾದ ದಲಿತೇತರರಿಗೆ ಖಜಾನೆಯಲ್ಲಿಬಂಗಾರ ತುಂಬುವ ಚಿಂತೆ, ಆದರೆ ಊರ ಹೊರಗಿರುವ ದಲಿತರಿಗೆ ತನ್ನ ಮನೆಯಲ್ಲಿ ಹಸಿವನ್ನು ನೀಗಿಸಿಕೊಳ್ಳಲು ಖಜಾನೆಯೇ ಇಲ್ಲವಲ್ಲ ಎಂದು ಯೋಚಿಸಿ, ಕಷ್ಟ ನಮ್ಮದು, ಫಲ ಮಾತ್ರ ಇತರರಿಗೆ ಎಂದು, ಹಸಿದು ದುಡಿದ ದಲಿತರ ಸ್ಥಿತಿಯನ್ನು 'ಈ ವಿಚಾರಧಾರೆ' ಎಂಬ ಪದ್ಯದಲ್ಲಿ ಹೀಗೆ ಚಿತ್ರಿಸಲಾಗಿದೆ.

ಹನ್ನೆರಡು ಕಂಬದ
ತೊಟ್ಟಿ ಹಟ್ಟಿ
ಗಂಡ ಪಂಚಾಯತಿಯಲ್ಲಿ
ತೀರ್ಪುಗಾರ
ಹೊಲನೆಲ
ಆಳು-ಕಾಳು
ಗಢಾರಿಯಲ್ಲಿ ಚಿನ್ನ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2007. ಪುಟ 26)

ಒಂದು ವ್ಯವಸ್ಥೆಯ ವೈಭೋಗ ಜೀವನದ ಅನಾವರಣವನ್ನು ದಲಿತರು ಹೀಯಾಳಿಸುವ ಮೂಲಕ ಪ್ರತಿಭಟಿಸುತ್ತಿದ್ದಾರೆ. ನಮ್ಮಿಂದ ಆರ್ಥಿಕವಾಗಿ, ಸಬಲರಾಗಿ ದೊಡ್ಡಮನೆ, ಊರ ತುಂಬ ಜಮೀನು, ಮನೆ ತುಂಬ ಅಕ್ಕಿ, ಬೇಳೆ, ಕೈ-ಕಾಲಿಗೆ ಒಬ್ಬೊಬ್ಬ ಆಳುಗಳನ್ನು ಪಡೆದು ಶ್ರೀಮಂತರಾದರು. ಆದರೆ ನಮ್ಮನ್ನು ಮಾತ್ರ ಬಡತನ ಎಂಬ ಸುಳಿಯಲ್ಲಿ ಸಿಕ್ಕಿಸಿ, ಹಸಿವಿನ ಬಲೆಯಲ್ಲಿ ಒದ್ದಾಡುವಂತೆ ಮಾಡಿದ್ದಾರೆ. ಹೇಳಿಕೊಳ್ಳಲು ಊರ ನ್ಯಾಯ ತೀರ್ಮಾನ ಮಾಡುವ ತೀರ್ಪುಗಾರರು, ಆದರೆ ದಲಿತರಾದ ನಮ್ಮನ್ನು ಬಡತನದ ಕೂಪಕ್ಕೆ ತಳ್ಳುವುದು ಯಾವ ನ್ಯಾಯ ಎಂದು ದೊಡ್ಡವರ ದೌರ್ಜನ್ಯವನ್ನು ಪ್ರತಿಭಟಿಸುತ್ತಿದ್ದಾರೆ.

'ವ್ಯವಸ್ಥೆ' ಎನ್ನುವ ಸಮಾಜವು ಸದಾ ಸುವಾಸನೆ ಬೀರುವ ಪ್ರದೇಶದಲ್ಲೇ ಇದ್ದು, ಮನಸ್ಸಿಗೆ ಮುದ ನೀಡುವ ವಾತಾವರಣವನ್ನು ಬಯಸಿ, ಸುಂದರ ತಾಣಗಳಲ್ಲಿ ಅಲೆದಾಡಿ, ಹಸಿವೆಂಬ ಪದದ ಅರ್ಥವನ್ನು ತಿಳಿಯದವರಿಗೆ ದಲಿತ ಸಮುದಾಯವು ತಮ್ಮ ಬಿಡಾರಕ್ಕೆ ಆಹ್ವಾನಿಸಿ, ಸಮುದಾಯದ ನೈಜ ಸ್ಥಿತಿಯನ್ನು ಅನಾವರಣಗೊಳಿಸುತ್ತಿರುವುದು 'ರಮ್ಯ ಕವಿತೆ ಮತ್ತು ನಾನು' ಎಂಬ ಪದ್ಯದಲ್ಲಿ ಕಾಣಬಹುದು.

ಒಮ್ಮೆ ನೋಡು ದೇವಿ
ಹರುಕು ಮುರುಕುಟ್ಟ ಚಿಂದಿ ಜನರ ಕಡೆಗೆ
'ಬಣ್ಣಿಸುವೆ' ನಿನ್ನಿಂದ ಸುಟ್ಟು ಕರಕಾದ ಜನರ
ಹೊತ್ತಿಗೂಟ ಕಾಣದೆ ಸತ್ತ ನೋಟವಿತ್ತವರ
ಎಂಜಲು ತಿಂದು ಕಾಲು ತುಯ್ಯುವ ಭಿಕ್ಷುಕ ಮಂದಿಯ
ಕಸದ ಬುಟ್ಟಿಯ ಕೆದಕಿ ರುಚಿ ಹುಡುಕುವ ಬಸದಿಯವರ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2007, ಪುಟ 30)

'ವ್ಯವಸ್ಥೆ' ಎಂಬ ದೇವಿಯನ್ನು ತನ್ನ ಕೇರಿಗೆ ಕರೆದು ಹಸಿವಿನಿಂದ ಒದ್ದಾಡುವ ಕೇರಿ ಜನರ ಬಡಕಲು ದೇಹ, ಚಿಂದಿ ಬಟ್ಟೆಯ ದರ್ಶನವನ್ನು ಮಾಡಿಸಿ 'ನಿನ್ನಿಂದ ಸುಟ್ಟು ಕರಕಲಾಗಿ ಹೆಣಗಳಂತಿದ್ದಾರೆ' ಎಂದು ವ್ಯವಸ್ಥೆಯನ್ನೇ ಪ್ರತಿಭಟಿಸುತ್ತಿದ್ದಾರೆ. ದಲಿತರು ಅನ್ನಕ್ಕಾಗಿ ಬೆಳಗಿನಿಂದ ಸಂಜೆಯವರೆಗೆ ದುಡಿದರೂ ಒಪ್ಪತ್ತಿನ ಊಟಕ್ಕೆ ಗತಿ ಇಲ್ಲದ ಪರಿಸ್ಥಿತಿ ತಲೆದೋರಿ, ತಮ್ಮ ದುಡಿಮೆಗೆ ಯಾವ ರೀತಿ ಪ್ರತಿಫಲವನ್ನು ಪಡೆಯಬೇಕು ಎಂಬುದನ್ನು ತಿಳಿಯದಾದರು. ದುಡಿಯುವುದೇ ನಮ್ಮ ಕೆಲಸ, ಅದಕ್ಕೆ ತಕ್ಕ ಪ್ರತಿಫಲವನ್ನು ಒಡೆಯ ಕೊಡುತ್ತಾನೆ ಎಂಬ ನಂಬಿಕೆಯಿಂದ ದುಡಿಯುತ್ತಿದ್ದರು. ಒಡೆಯನಾದರೂ ಹತ್ತು ಜನರ ಕೆಲಸವನ್ನು ಒಬ್ಬನ ಕೈಯಲ್ಲಿ ದುಡಿಸಿ, ಒಬ್ಬನಿಗೆ ಕೊಡುವ ಕೂಲಿಯ ಹಣದಲ್ಲಿ ಅರ್ಧವನ್ನು ಕೊಟ್ಟು ಕೈ ತೊಳೆದುಕೊಳ್ಳುತ್ತಿದ್ದ. ಇವೆಲ್ಲಾ ತಿಳಿದರೂ ದಲಿತನಿಗೆ ಕಲ್ಲು ಬಂಡೆಗಳಂತೆ ಸಹನೆ ಸಹಜವಾಗಿ ಬಂದಿರುತ್ತದೆ. ಕಾಯಿಲೆ ಬಿದ್ದರೆ ಅದನ್ನು ಗುಣಪಡಿಸಿಕೊಳ್ಳಲು ಸಾಲದ ರೂಪದಲ್ಲಿ ಹಣ ಪಡೆದು, ಆ ಸಾಲವನ್ನು ತೀರಿಸಲು ಜೀವಮಾನವಿಡೀ ದುಡಿದು ಅಥವಾ ತಮ್ಮ ಮಕ್ಕಳನ್ನು ಜೀತಕ್ಕೆ ನೂಕಿ ಸಾಲವನ್ನು ತೀರಿಸಬೇಕಾಗಿತ್ತು. ಹೀಗೆ ತುತ್ತು ಅನ್ನಕ್ಕಾಗಿ ತಮ್ಮ ಮಕ್ಕಳನ್ನೇ ಮಾರುವ ದಲಿತರ ಹಸಿವಿನ ಸ್ಥಿತಿ ಅಥವಾ ಹಾಹಾಕಾರವು 'ತುತ್ತು ಅನ್ನಕ್ಕಾಗಿ' ಎಂಬ ಕವನದಲ್ಲಿ ಹೀಗೆ ವ್ಯಕ್ತವಾಗಿದೆ.

ತೆತ್ತು ಬಿಡುವುದೇ ವಾಸಿ ಈ
ಮುತ್ತಂಥ ಕೂಸನ್ನು
ಸಿಕ್ಕಿದರೆ ಕೂಳು
ಒಪ್ಪೊತ್ತಿಗೆ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 50)

'ಹಸಿವಿ'ನ ಭೀಕರತೆಯ ಅನಾವರಣ ಇಲ್ಲಿದೆ. ಹೊಟ್ಟೆ ತುಂಬಿಸಿಕೊಳ್ಳಲು ತಾಯಿ ತಾಳುವ ಕಠೋರ ನಿರ್ಧಾರವನ್ನು ಇಲ್ಲಿ ಕಾಣಬಹುದು. ಇಲ್ಲಿ ತಾಯಿ ತನ್ನ ಮಕ್ಕಳನ್ನು ಮಾರಿಬಿಡುವ ಮೂಲಕ ಪ್ರತಿಭಟಿಸುತ್ತಿದ್ದಾಳೆ. ಹೆತ್ತ ಮಕ್ಕಳನ್ನು ಮಾರುವ ಸ್ಥಿತಿಯಲ್ಲಿ ದಲಿತರಿದ್ದಾರೆಂದರೆ 'ಹಸಿವೆಂಬುದು ಇವರನ್ನು ಅಣು-ಅಣುವಾಗಿ ಶೋಷಿಸಿರುವುದನ್ನು' ಕವಿ ಕಾವ್ಯವಾಗಿಸಿದ್ದಾರೆ. ಹಸಿವಿನ ಭೀಕರತೆಯನ್ನು ಈ ಸಾಲುಗಳಲ್ಲಿ ಕಾಣಬಹುದು. ಜತೆಗೆ ಕಂದಮ್ಮಗಳು ಅತ್ತು-ಅತ್ತು ನಮ್ಮ ಮಡಿಲಲ್ಲಿ ಸಾಯುವ ಬದಲು, ಬೇರೆಯವರಿಗೆ ದತ್ತು ಅಥವಾ ಮಾರಿಕೊಂಡರೆ ಆ ಮಕ್ಕಳು ಮತ್ತು ನಾವು ಸುಖವಾಗಿ ಇರಬಹುದು ಎಂಬ ಯೋಚನೆಯು ಇಲ್ಲಿ ಅಡಗಿದೆ. ಒಟ್ಟಿನಲ್ಲಿ ಬಡತನದಿಂದ ಬೆಂದ ದಲಿತರು ಹಸಿವನ್ನು ತಾಳಲಾರದೆ, ತಾವು ಹೆತ್ತಿರುವ ಮಗುವನ್ನು ಮಾರಿಯಾದರೂ ಒಪ್ಪೊತ್ತಿನ ಹಸಿವನ್ನು ನೀಗಿಸಿಕೊಳ್ಳಬೇಕು ಎಂದು ನಿರ್ಧರಿಸುವುದರ ಮುಖಾಂತರ ತಮ್ಮ ಹಸಿವಿನ ಭೀಕರತೆಯನ್ನು ಪ್ರತಿಭಟಿಸುತ್ತಿದ್ದಾರೆ.

ಹಸಿವು ದಲಿತರನ್ನು ಬೆನ್ನತ್ತಿದ ಬೇತಾಳದಂತೆ ಊರು, ಕೇರಿ, ಬಿಡಿಸಿ ಹೆತ್ತವರನ್ನು ತಿರುಗಿ ನೋಡದಂತೆ ಮಾಡಿ, ತನ್ನ ಪರಾಕ್ರಮವನ್ನು ತೋರಿ ನಗುತ್ತಿದೆ. ಹಸಿವಿನಿಂದ ನಿತ್ರಾಣಗೊಂಡ ದೇಹದ ಮೂಳೆ ಚಕ್ಕಳಗಳು ಇತರ ಜಾತಿಯವರ ವಕ್ರ ದೃಷ್ಟಿಗೆ ಗುರಿಯಾಗಿದೆ. ಇದರಿಂದ ನೊಂದ ದಲಿತರು ಹಸಿವಿನ ಹೀನ ಪರಿಸ್ಥಿತಿಯ ವಿರುದ್ಧ ನಿಂತು, ಹಸಿವೆಯೊಂದು ಗುಪ್ತಗಾಮಿನಿಯೆಂದು ಪ್ರತಿಭಟಿಸುವುದನ್ನು ಕವಿ 'ನೀನೆಷ್ಟು ಭಯಂಕರ' ಎಂಬ ಪದ್ಯದಲ್ಲಿ ಹೀಗೆ ಸೆರೆ ಹಿಡಿದಿದ್ದಾರೆ.

ಹಸಿವೆ ನೀನೆಷ್ಟು ಗುಪ್ತಗಾಮಿನಿ
ಗೊತ್ತಿಲ್ಲದೆ ತೋರುವೆ ಮಹಿಮೆ
ಬರಿ ಬೆತ್ತಲೆ ಮಾಡಿದೆ
ಮೂಳೆ ಚಕ್ಕಳ ತೋರಿದೆ

(ಮುನಿವೆಂಕಟಪ್ಪ ವಿ., ಕಾಡು ಕಣಿವೆಯ ಹಕ್ಕಿ, 1999, ಪುಟ 44)

ಹಸಿವಿನ ನಿಜ ಸ್ವರೂಪವನ್ನು ವರ್ಣಿಸುವ ಮೂಲಕವೇ ಕವಿ ಪ್ರತಿಭಟಿಸುತ್ತಿದ್ದಾರೆ. ಹಸಿವು ಗುಪ್ತಗಾಮಿನಿಯಾಗಿ ದಲಿತರಿಗೆ ತಿಳಿಯದ ಹಾಗೆ ತನ್ನ ಮಾಯೆಯನ್ನು ತೋರಿಸಿದವರ ಪರಿಣಾಮ ದಲಿತರು ಇಂದು ಬೆತ್ತಲೆಯಾಗಿ ತಮ್ಮ ದೇಹದ ಮೂಳೆ ಚಕ್ಕಳಗಳನ್ನು ತೋರಿಸುವಂತಾಗಿದೆ. ಮೇಲಿನ ಕವನದ ಸಾಲಿನಲ್ಲಿ ದಲಿತರಿಗೆ ಎದುರಾಗಿರುವ ಹಸಿವು, ಹಸಿವಿನ ಮಹಿಮೆ ಬೇರೆಯವರಿಗೆ ವಸ್ತು ಪ್ರದರ್ಶನದ ರೀತಿ ಭಾಸವಾಗುತ್ತಿದೆ ಎಂದು ಕವಿ ಭಾವಿಸಿ ಅದರ ಭೀಕರತೆಯನ್ನು ಪ್ರತಿಭಟಿಸುತ್ತಿದ್ದಾರೆ.

ದಲಿತರು ಹಸಿವು ನೀಗಿಸಿಕೊಳ್ಳುವ ಹಂಬಲದಿಂದ ಕಾಡು-ಮೇಡುಗಳೆನ್ನದೆ ದುಡಿದು, ಅಲೆದು, ಅಲ್ಲೇ ಸಿಕ್ಕಿದ ಗೆಡ್ಡೆ-ಗೆಣಸನ್ನು ತಿಂದು, ಉರಿಬಿಸಿಲಿನಲ್ಲೆ ದಣಿದು, ಒಣಗಿದ ಎಲೆಯಾಗಿದ್ದಾರೆ. ಹಸಿದ ಒಡಲನ್ನು, ಕುದಿವ ಕರುಳನ್ನು ತಣ್ಣಗಾಗಿಸಲು ಬೋಗಸೆಗಟ್ಟಲೆ ನೀರನ್ನು ಕುಡಿದು ತೃಪ್ತರಾಗುತ್ತಿದ್ದಾರೆ. ಹಣಗಳಿಸುವ ನಂಬಿಕೆಯಿಂದ ಇವರ ಮನಸುಗಳು ಮಾಗಿ, ಒಳಗೊಳಗೆ ಅತ್ತು, ತಮಗೆ ತಾವೇ ಸಮಾಧಾನವನ್ನು ಹೇಳಿಕೊಂಡು, 'ಉತ್ತಮರೆನಿಸಿಕೊಂಡ ವ್ಯವಸ್ಥೆಯು, ನಮ್ಮ ರಕ್ತ ಬಸಿದರೇ ಹೊರೆತು ತಕ್ಕ ಬೆಲೆ ನೀಡಲಿಲ್ಲ ಎಂದು ಜಾತಿ ತಾರತಮ್ಯದಿಂದ ನಾವು ಹಸಿವಿನಿಂದ ಒದ್ದಾಡುವಂತಾಗಿರುವುದು 'ಹಸಿವು ಮತ್ತು ಅವಮಾನ' ಎಂಬ ಕವನದಲ್ಲಿ ಹೀಗೆ ಚಿತ್ರಿತವಾಗಿದೆ.

ಕಾಡು ಮೇಡುಗಳನು ಅಲೆದು
ಭೂತಾಳ ಬುಡದ ಗಡ್ಡೆಗಾಗಿ
ಉರಿಬಿಸಿಲಿನಲ್ಲಿ ದಣಿದ ದೇಹಗಳು
ಅಲ್ಲಿ ಗಿಡಗಳಲ್ಲಿ ಹಸಿರಿಲ್ಲ

(ಮುನಿವೆಂಕಟಪ್ಪ ವಿ., ಕಾಡು ಕಣಿವೆಯ ಹಕ್ಕಿ, 1999, ಪುಟ 49)

ತಮ್ಮ ಶ್ರಮಕ್ಕೆ ಎಳ್ಳಷ್ಟು ಬೆಲೆ ಇಲ್ಲ ಎಂಬ ಅಂಶವು ಇಲ್ಲಿ ವ್ಯಕ್ತವಾಗಿದೆ. ದಲಿತರು ತಮ್ಮ ಹಸಿವನ್ನು ನಿವಾರಿಸಿಕೊಳ್ಳಲು ಪಟ್ಟ ಪರಿಶ್ರಮವನ್ನು ಕವಿ ಕಾವ್ಯದಲ್ಲಿ ಚಿತ್ರಿಸಿದ್ದಾರೆ. 'ಭೂತಾಳೆ ಬುಡದ ಗಡ್ಡೆ' ಹಸಿವಿನ ಭೀರಕತೆಯ ಚಿತ್ರಣವಾಗಿದ್ದು, ಇದನ್ನು ಪಡೆಯಲು ದಲಿತರು ಹಸಿದ ಹೊಟ್ಟೆಯಲ್ಲೇ ಅಲೆಯುವ ಮೂಲಕ ತನ್ನ ಹಸಿವಿನ ಸ್ಥಿತಿಯನ್ನು ಪ್ರಕಟಿಸಿ ಪ್ರತಿಭಟಿಸುತ್ತಿದ್ದಾರೆ. ದಲಿತರಿಗೆ ಹಸಿವಿನ ಭೀಕರ ಪರಿಣಾಮವನ್ನು ಸಹಿಸಲಾಗದೆ, ದೇಹದ ಕಾಂತಿಯನ್ನೇ ಕಳೆದುಕೊಂಡು ನರಳಿ, ನಲುಗಿ ಜೀವ ತತ್ತರಿಸಿ ಹೋಗಿದೆ.

ಈ ಹಸಿವಿನ ಶೋಷಣೆಯ ನರ್ತನವನ್ನು ದಲಿತರು 'ಅನಾದಿ ಕಾಲದಿಂದಲೂ ನಮ್ಮ ಹೊಟ್ಟೆ ತುಂಬುವುದು ಕನಸಿನ ಮಾತು. ಹೀಗಿರುವಾಗ ನಾವು ದಷ್ಟ-ಪುಷ್ಟರಾಗುವುದು ಹೇಗೆ ಎಂದು ಹಸಿವಿನ ಶೋಷಣೆಯನ್ನು ಪ್ರತಿಭಟಿಸುತ್ತಿದ್ದಾರೆ. ಇದನ್ನು 'ಹೊಟ್ಟೆಗಿಲ್ಲದ ಹೊಟ್ಟೆ' ಎಂಬ ಪದ್ಯದಲ್ಲಿ ನೋಡಬಹುದು.

ಬಹುಕಾಲ ಹೊಟ್ಟೆಗಿರದ ನನಗೆ
ಹೊಟ್ಟೆ ಬರಲೇ ಇಲ್ಲ ಕೊನೆಗೆ
ಹೊಟ್ಟೆಗೇ ಇಲ್ಲದ ಈ ಬಗೆ
ಇನ್ನು ರಟ್ಟೆ ಬೆಳೆದೀತು ಹೇಗೆ?

(ಜವರಯ್ಯ ಮ.ನ., ವಿದ್ರೋಹ, 2002, ಪುಟ 315)

ದಲಿತರ ಹಸಿವಿನ ಸ್ಥಿತಿ ಇವತ್ತಿನದಲ್ಲ. ಬಹುಕಾಲದಿಂದ ಹಸಿದ ಇವರು ತಮ್ಮ ಬೆನ್ನಿಗೂ-ಹೊಟ್ಟೆಗೂ ವ್ಯತ್ಯಾಸ ಕಾಣದ ಈ ಪರಿಯು ಮುಂದಿನ ಭವಿಷ್ಯದಲ್ಲಿ ಹೇಗೆ ತಾನೇ ರಟ್ಟೆ ಬಲಿಯಲು ಸಾಧ್ಯ ಎಂದು ಹಸಿದ ದೇಹ ವರ್ಣನೆಯ ಮೂಲಕವೇ ಪ್ರತಿಭಟಿಸುತ್ತಿದ್ದಾರೆ. ದಲಿತರ ಹಸಿವಿನ ಸ್ಥಿತಿಯು ಹೀನ ಸ್ಥಿತಿಯಲ್ಲಿದೆ ಎಂದು ಹೇಳುವುದಕ್ಕೆ ಇವರ ಮನೆಯ ಸುತ್ತ ಬೆಳೆದಿರುವ ಈಚಲು ಮರ ಸಾಕ್ಷಿಯಾದರೆ, ಒಡೆಯನ ಮನೆಯ ಸುತ್ತ ಮುತ್ತ ತೆಂಗಿನ ಮರ, ರಂಗೋಲಿ ಅವರ ಉತ್ತಮತೆಯನ್ನು ಸೂಚಿಸುತ್ತದೆ. ದುಡಿದು ದಣಿದ ದಲಿತರ ಮನೆಯಲ್ಲಿ ಅಂಬಲಿ ಕುಡಿಯಲು ಮಣ್ಣಿನ ಮಡಿಕೆ ಇದ್ದರೆ, ಒಡೆಯನು ತನ್ನ ಮನೆಯ ಹಬ್ಬಕ್ಕೆ ಕಂಚು, ಹಿತ್ತಾಳೆಯ ಹೊಳಪು ಹಾಗೂ ಮೂರು ತಲೆಮಾರು ಕೂತು ತಿನ್ನುವ ಆಸ್ತಿ, ಬಂಗಲೆ ಹೊಂದಿದ್ದಾನೆ. ಹೊಲದಲ್ಲಿ ದುಡಿಯುವ ದಲಿತನಿಗೆ ಆ ದಿನದ ಗಂಜಿಗೂ ಗತಿಯಿಲ್ಲದೆ, ಗುಡಿಸಲು ಮನೆಯ ವಾಸದ ದುರ್ಗತಿಯನ್ನು 'ಕೂಲಿಗಾರನ ಮೌನಗೀತೆ' ಎಂಬ ಕವನವು ಬಿಚ್ಚಿಡುತ್ತದೆ.

ನಿಮ್ಮನೆ ಒಳಹೊರಗೆ
ತೆಂಗು ರಂಗೋಲ್ಯಾಕೊ
ನಮ್ಗುಟ್ಟಿ ಸುತ್ತೆಲ್ಲ
ಈಚಲದ ಮರವ್ಯಾತಕೊ – ತಂದೆ

ನಮ್ಮಟ್ಟಿಯ ಅಂಬಲಿಗೆ
ಮಣ್ಣಿನ ಮಡಿಕ್ಯಾಕೊ
ನಿಮ್ಮನೆಯ ಹುಗ್ಗಿಗೆ
ಕಂಚು ಹಿತ್ಯಾಳ್ಯಾಕೋ – ತಂದೆ

(ಅರವಿಂದ ಮಾಲಗತ್ತಿ, ನಾದ ನಿನಾದ, 1999, ಪುಟ 05)

'ಈಚಲು' ಶೋಷಿತರ, ನೊಂದವರ, ಹಸಿದು ಕುಸಿದವರ ಸಂಕೇತವಾಗಿದ್ದರೆ, 'ತೆಂಗು', ತಲೆ ಎತ್ತಿ ನಿಂತ ಮೇಲ್ವರ್ಗದವರ ಗೌರವದ ಸಂಕೇತವಾಗಿದೆ. ತೆಂಗಿಗಿರುವ ಗೌರವ ಈಚಲು ಮರಕ್ಕೆ ಇಲ್ಲವಾಗಿದೆ. ಮಣ್ಣಿನ ಮಡಿಕೆ ಬಡತನದ ರೇಖೆಯಂತ್ತಿದ್ದರೆ, ಕಂಚು, ಹಿತ್ತಾಳೆ ಉತ್ತಮ ಆರ್ಥಿಕತೆಯ ಪ್ರತಿಬಿಂಬವಾಗಿದೆ. ಕಷ್ಟಪಟ್ಟು ದುಡಿಯುವ ದಲಿತ ಸಮುದಾಯಕ್ಕೆ ಮಡಿಕೆ, ಕುಡಿಕೆಯಾದರೆ, ಶ್ರಮವಹಿಸದ ವ್ಯವಸ್ಥೆಗೆ ದಲಿತರು ಶ್ರಮವಹಿಸುವುದು ಎಂಥ ನ್ಯಾಯ ಎಂಬುದು ಪ್ರತಿಭಟನೆಯ ಪ್ರಶ್ನೆ.

ಹಸಿವಿನಿಂದ ಒದ್ದಾಡಿದ ದಲಿತ ಸಮುದಾಯವು ವ್ಯವಸ್ಥೆಗೆ, ಜೀವನದ ಮೆರವಣಿಗೆಯಲ್ಲಿ ನಿಮ್ಮ ಗುಲಾಮರಾಗಿ ನಾವು ದುಡಿದಿರಬಹುದು. ಆದರೆ ನಮ್ಮ ಮೇಲೆ ಸಂಪೂರ್ಣವಾದ ಹಕ್ಕು ನಿಮಗಿಲ್ಲ. ನಮ್ಮ ಹಸಿವಿಗೆ ನೀವು ಅನ್ನ ಅಥವಾ ದುಡಿದ ಕೆಲಸಕ್ಕೆ ಕೂಲಿ ಕೊಟ್ಟರೆ ಸಾಕು. ನಿಮ್ಮ ಕಂಬದ ಮನೆಯ ವಾಸ ಬೇಡವೆಂದು ವ್ಯವಸ್ಥೆಯ ವಿರುದ್ಧ ತಿರುಗಿ ಬಿದ್ದಿರುವುದು 'ಸಾಫ್ಟ್‌ವೇರ್ ಮತ್ತು ಎಮ್ಮೆ' ಎಂಬ ಪದ್ಯದಲ್ಲಿ ಕಂಡು ಬರುತ್ತದೆ.

ಈ ಮೆರವಣಿಗೆಯಲಿ
ಏರಿ ಹೊರಟ ಆನೆ ನಿನ್ನದಿರಬಹುದು
ಆದರೆ ಅಂಬಾರಿ ನಿನ್ನದಲ್ಲ
ಹಸಿವಿನ ಜೋಳಿಗೆ ಬಗಲಿಗೆ ಹಾಕಿಕೊಂಡು
ಭಿಕ್ಷೆಗೆ ಬಂಗಾರ ಕೊಟ್ಟರೂ ಹೊಟ್ಟೆ ತುಂಬುವುದಿಲ್ಲ

(ಅರವಿಂದ ಮಾಲಗತ್ತಿ, ಕಪ್ಪು ಕಾವ್ಯ, 1996, ಪುಟ 21)

ಇಲ್ಲಿನ ಸಾಲುಗಳಲ್ಲಿ ವ್ಯವಸ್ಥೆಯು ದಲಿತ ಸಮುದಾಯದ ಮೇಲೆ ದಬ್ಬಾಳಿಕೆ ನಡೆಸಿರುವ ಬಗ್ಗೆ ಹಾಗೂ ದಲಿತರು 'ನಮ್ಮ ಹಸಿವಿಗೆ ಅನ್ನ ಬೇಕೆ ಹೊರತು ಚಿನ್ನವಲ್ಲ' ಎಂಬ ಅರ್ಥ ಕಾಣಬಹುದು. ವ್ಯವಸ್ಥೆಯು ತಮ್ಮ

ಉತ್ತಮ ಜೀವನ ನಿರ್ವಹಣೆಗೆ ದಲಿತರ ಆಸರೆ ಪಡೆದಿರುವುದನ್ನು ಇಲ್ಲಿ ವಿರೋಧಿಸಿದ್ದಾರೆ. ನಮ್ಮ ಸಮಯ ನಿಮಗೆ ಮೀಸಲಾಗಿರಬಹುದು, ಆದರೆ ನಾವು ನಿಮ್ಮ ಆಸ್ತಿಯಲ್ಲವೆಂದು ಗುಡುಗಿ, ನಮ್ಮ ಕೆಲಸಕ್ಕೆ ಸರಿಯಾದ ಕೂಲಿ ಅಥವಾ ಅನ್ನ ಕೊಡುವ ಬದಲು ಬಣ್ಣದ ಮಾತಾಗಲಿ, ಬಂಗಲೆಯ ನೋಟ, ಬಂಗಾರ ಎಂದು ಸಂಬೋಧಿಸುವುದರಿಂದ ನಮ್ಮ ಹೊಟ್ಟೆ ತುಂಬುವುದಿಲ್ಲವೆಂದು ಪ್ರತಿಭಟಿಸುತ್ತಿದ್ದಾರೆ. ಇಲ್ಲಿ ದಲಿತರನ್ನು ಅಂಬಾರಿ ಹೊರುವ 'ಆನೆ' ರೀತಿ ಕಂಡರೋ ಹೊರತು, ಆನೆ ಎಂಬ ದಲಿತ ಸಮುದಾಯಕ್ಕೆ ತುತ್ತು ಅನ್ನಕ್ಕೂ ಅಲೆಸಿದ್ದಾರೆಂಬುದು ಸ್ಪಷ್ಟವಾಗಿದೆ. ದಲಿತರ ಬದುಕು ಅನಿವಾರ್ಯದ, ಅಸಹಾಯಕವಾದ ಬದುಕು. ಇವರಿಗೆ ವ್ಯವಸ್ಥೆ ಜೀವಿಸಲೂ ಬಿಡದೇ, ಸಾಯಲೂ ಬಿಡದೆ, ಜೀವಂತವಾಗಿ ದಹಿಸಲು 'ಜಾತಿ' ಭೂತ ಕಾರಣವಾಗುತ್ತದೆ. ಇದಕ್ಕೆ ಹಸಿವಿನ ಶೋಷಣೆಯೂ ಹೊರತಲ್ಲ ಎಂಬುದನ್ನು ಅರವಿಂದ ಮಾಲಗತ್ತಿಯವರ 'ಬಾಡಿಗೆ ಮನೆಯ ಕೋಳಿಗಳ ಬದುಕು' ಎಂಬ ಕವನದಲ್ಲಿ ರೂಪಿತವಾಗಿದೆ.

ದೂರದಿ ಕಾಳಿಕಾದೇವಿಯ ದನಿ ಕೇಳುತ್ತಿದ್ದಂತೆ
ಲೋಟ ತಟ್ಟೆರೊಟ್ಟಿ ಬುಟ್ಟಿ ಎಲ್ಲ ಮಂಗಮಾಯ
ಒಳಗೆ ಕಾಲಿಟ್ಟಳು ಮನೆ ಬಾಡಿಗೆ ಕೊಟ್ಟ ದೇವತೆ
ಮೂರು ಮಕ್ಕಳು, ತಾಯಿ, ಅತ್ತೆ, ಮನೆ ಯಜಮಾನ
ಮಂಗಗಳ ಕಥೆಯಂತೆ ಉಪವಾಸ
ಮನಸ್ಸಿನ ಗೋಳ ಹೊಟ್ಟೆಯ ತಾಳಕಣ್ಣು ಬಾಳ್
ಎಲ್ಲ ಹಾವಭಾವಗಳ ಮೇಳ, ಮನೆ ರಂಗಶಾಲೆ

(ಕಾವ್ಯ ಕುಂಕುಮ, ಶಶಿಕಲಾ ಎಸ್.ಡಿ. (ಸಂ), 2009, ಪುಟ 141)

ಕವಿಯ ನೈಜ ಜೀವನದ ಚಿತ್ರಣದಂತಿದ್ದರೂ, ವ್ಯವಸ್ಥೆಯ ಹಸಿವಿನ ಶೋಷಣೆಯ ಗರಗಸಕ್ಕೆ ಸಿಕ್ಕ ಚರಿತ್ರೆ ಇದೆ. ವರ್ಣ ವ್ಯವಸ್ಥೆಯ ವೈಪರಿತ್ಯಕ್ಕೆ ಸಿಕ್ಕಿ ನರಳುವ ಸಂದರ್ಭ ಇಲ್ಲಿ ಅಧಿಕವಾಗಿದೆ. ತನ್ನ ಜಾತಿಯನ್ನು ಹೇಳಿಕೊಂಡರೆ ಒಂದು ಸಂಕಟ, ಹೇಳದಿದ್ದರೆ ಇನ್ನೊಂದು ಸಂಕಟ, ಇಲ್ಲಿನ ಮನೆ ಒಡತಿಯೇ ಜಾತಿ ವ್ಯವಸ್ಥೆಯ ಕೇಂದ್ರ ಬಿಂದು ಇದಕ್ಕೆ ಹೆದರಿದ ಸಮುದಾಯವು ತಿನ್ನಲು ಪದಾರ್ಥಗಳಿದ್ದರೂ ಅದರಿಂದ ವಂಚಿತರಾಗಿ, ವ್ಯವಸ್ಥೆಯ ಮುಂದೆ ನಾಟಕದ ಪಾತ್ರಧಾರಿಗಳಾಗಿರುವುದನ್ನು ಕವಿತೆ ಕಟ್ಟಿಕೊಡುತ್ತದೆ.

ಬಡತನದ ಇನ್ನೊಂದು ಅರ್ಥ ದಲಿತ. ದಲಿತರ ಆಪ್ತ ಸ್ನೇಹಿತ ಹಸಿವು. ಹಸಿವನ್ನು ಕಾಣಬೇಕಾದರೆ ದಲಿತರನ್ನು, ದಲಿತರನ್ನು ಕಾಣಬೇಕಾದರೆ ಹಸಿವನ್ನು ಬಯಸದೇ ಪಡೆಯಬಹುದು. ಇವರ ಬಡತನದ ಜಗತ್ತು ಎಂದೂ ಮುಳುಗದ ನಾಡು. ಅನ್ನದ ದಾರಿ ಗೊತ್ತಿದ್ದರೂ ತಿನ್ನುವ ಭಾಗ್ಯವಿಲ್ಲ ಎಂಬ ಬಡತನದ ಕಠೋರತೆಯನ್ನು 'ಗಿರಿಜನರು' ಪದ್ಯವು ಬಿಚ್ಚಿಡುತ್ತದೆ.

ಹೊತ್ತು ಮೂಡುವುದಿಲ್ಲ
ಅತ್ತ ಮುಳುಗುವುದೂ ಇಲ್ಲ
ಚಿತ್ತ ಬೆಳಗುವ ದೀಪದ
ಸುಳಿವಿಲ್ಲ
ಹಸಿವು ನೀರಡಿಕೆ
ಕೂಟ, ನಿದ್ದೆಯ ಬಯಕೆ
ಪರಿಧಿಯ ಸುತ್ತುತ್ತಾ
ಕತ್ತಲ ನಡುಮನೆಯಲ್ಲಿ
ಸತ್ತು ಹೋಗುವ
ಕಾಯಗಳು

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಹಿಂಗಲಾರದ ಹುಣ್ಣು, 2004, ಪುಟ 54)

ಒಂದು ಸಮುದಾಯದವರ ಬಡತನದ ದಾರಿಯಲ್ಲಿ ಎದುರಾಗುವ ಅನೇಕ ಸಮಸ್ಯೆಗಳನ್ನು ಕವಿ ಒಂದೆಡೆ ಹಿಡಿದಿಟ್ಟಿದ್ದಾರೆ. ಇವರ ಪಾಲಿಗೆ ಎಲ್ಲಾ ಕಾಲಮಾನಗಳು ಒಂದೇ. ಎಂಥ ಸಂದರ್ಭಗಳು ಬದಲಾಗದೆ, ಅಸ್ಥಿರತೆಯ ನೋಟವನ್ನು ಬಿಟ್ಟಿರುತ್ತವೆ. ದೀಪದ ಕೆಳಗೆ ಕತ್ತಲು ಆವರಿಸಿರುವಂತಹ 'ಅವಸ್ಥೆ' ಇದೆ, ಎನ್ನುವ ಅನುಭವವನ್ನು ಕವಿ ಅರಿತು ಕಾವ್ಯವಾಗಿಸಿದ್ದಾರೆ. ದೀಪ ತನ್ನ ಕೆಳಗೆ ಕತ್ತಲಿದ್ದರೂ, ಕತ್ತಲೆಯನ್ನು ನೀಗಿಸುವ ಬೆಳಕು ಕೊಡುತ್ತದೆ. ವ್ಯವಸ್ಥೆ ತನ್ನ ಬಳಿ ಇರುವ ದಲಿತರಿಗೆ ಹಸಿವನ್ನು ನೀಗಿಸುವ ಬದಲು ತಾನೇ ತಿಂದು ತೇಗುವುದರಿಂದ ದಲಿತರು ವ್ಯವಸ್ಥೆಯ ಮಡಿಲಲ್ಲೇ ಸಾಯುವ ನಿರೀಕ್ಷೆ ಇದೆ ಎಂದು ಕವಿ ಅಭಿಪ್ರಾಯ ಪಡುತ್ತಾರೆ.

ನಮ್ಮ ಸಮಾಜದಲ್ಲಿ ಬೇರೂರಿರುವ ಅಸ್ಪೃಶ್ಯತಾ ಭಾವನೆ ದಲಿತರ ಹಸಿವಿನವರೆಗೂ ವ್ಯಾಪಿಸಿದೆ. ವ್ಯವಸ್ಥೆಯ ಹೊಟ್ಟೆ ತುಂಬಿಸುವ

ಸಮುದಾಯವು ತಮ್ಮ ಹೊಟ್ಟೆಗೆ ಮಾತ್ರ ತಣ್ಣೀರ ಬಟ್ಟೆ ಎಂಬುದನ್ನು ಖಾತ್ರಿ ಮಾಡಿಕೊಂಡಿದೆ. ಹಬ್ಬದ ಸಂದರ್ಭಗಳಲ್ಲಿ ಯಾರೋದೋ ಊಟಕ್ಕೆ ಕೈ ಚಾಚಿ ನಿಂತು, ಅವರು ಕೊಡುವ ಒಪ್ಪೊತ್ತಿನ ಊಟ ತನ್ನ ಮಕ್ಕಳಿಗೆ ಮಾತ್ರ ಸೀಮಿತವಾಗಿರುವುದನ್ನು 'ಪುಟ್ಟ ಹೊಟ್ಟೆಗಳು ಧನ್ಯವಾದವು' ಪದ್ಯದಲ್ಲಿ ಹೆಪ್ಪುಗಟ್ಟಿದೆ.

ಸುಡುವ ದೀಪಾವಳಿಯ
ಪಟಾಕಿ ಸದ್ದಿನಲಿ
ಎಳೆಗೆರೆಗಳು ಮಾಸಿದರೂ
ಪುಟ್ಟ ಹೊಟ್ಟೆಗಳು
ಒಪ್ಪತ್ತಿನೂಟವ ಕಂಡು
ಧನ್ಯವಾದವು

(ಸರಸ್ವತಿ ದು., ಜೀವ ಸಂಪಿಗೆ, 2006, ಪುಟ 50)

ಹಬ್ಬವನ್ನೇ ತೀವ್ರತರವಾಗಿ ಪ್ರತಿಭಟಿಸುವ ಅಂಶವಿದೆ. 'ದೀಪಾವಳಿ' ಬೆಳಕಿನ ಹಬ್ಬ. ಸಡಗರ, ಸಂಭ್ರಮದ ಪ್ರತೀಕ. ಕವಯತ್ರಿ ಇಲ್ಲಿ 'ಸುಡುವ ದೀಪಾವಳಿ' ಎನ್ನಬೇಕಾದರೆ ತನ್ನ ಸಮುದಾಯಕ್ಕೆ ಇದುವರೆಗೂ ಸಂಭ್ರಮದ, ಬೆಳಕಿನ ಹಬ್ಬವಾಗಿಲ್ಲ ಎಂಬುದು ತಿಳಿದು ಬರುತ್ತದೆ. ದಲಿತರಿಗೆ ಸಿಗುವ ಹಬ್ಬದೂಟದ ಫಲ ಏನಿದ್ದರೂ ಒಪ್ಪೊತ್ತಿಗೆ ಮಾತ್ರ ಸೀಮಿತ ಎಂದು ಸಂತೋಷ ಪಟ್ಟರೂ ಮೂರು ಹೊತ್ತಿನ ಊಟ ಸಿಗಲಿಲ್ಲ ಎಂಬ ಹಸಿವಿನ ನೋವು ಇಲ್ಲಿ ವ್ಯಕ್ತವಾಗಿದೆ.

'ಅನ್ನ' ದಲಿತರ ಪಾಲಿಗೆ ಬಿಸಿಲುಕುದುರೆ. ಅನ್ನದ ಹಂಬಲದಲ್ಲಿ ನರಳಿದ ಮಂದಿಯೂ ಅನ್ನಕ್ಕಾಗಿ ಅಲೆದಾಡಿ, ರಟ್ಟೆ ಮುರಿದು ದುಡಿದರೂ ತುತ್ತು ಕಾಣದ ಅತೃಪ್ತರು. ಬದುಕಲು ಅನ್ನದ ಅನಿವಾರ್ಯತೆ ಹೆಚ್ಚಾಗಿರುವಾಗ, ಅದನ್ನು ಪಡೆಯಲು ಹೋದ ಸಮುದಾಯದ ಜನರಿಗೆ ನಿರಾಶೆಯಾಗಿ ಜೀವಿಸುವುದನ್ನು 'ನನ್ನ ಜನಗಳು' ಎಂಬ ಪದ್ಯ ನುಡಿಯುತ್ತದೆ.

ಚಿನ್ನವನ್ನು ತೆಗೆಯೋರು ಅನ್ನವನ್ನು ಕಾಣದೋರು
ಬಟ್ಟೆಯನ್ನು ನೇಯೋರು ಬರಿಮೈಲೇ ಹೋಗೋರು
ಹೇಳಿದಂತೆ ಕೇಳುತ್ತಾರೆ ನನ್ನ ಜನಗಳು
ಗಾಳಿಯಲ್ಲೆ ಬಾಳುತಾರೆ ನನ್ನ ಜನಗಳು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 57)

ಕವನದ ಈ ಸಾಲುಗಳಲ್ಲಿ ದಲಿತ ಸಮುದಾಯವೂ ಕಷ್ಟಪಟ್ಟು ದುಡಿದರೂ ಅವರ ದುಡಿತಕ್ಕೆ ತಕ್ಕ ಪ್ರತಿಫಲ ಧಕ್ಕದೇ ಹೋಗಿ ಅಸಹಾಯಕ ಸ್ಥಿತಿಯಲ್ಲಿರುವುದನ್ನು ಸಮರ್ಥಿಸುವಲ್ಲಿ ಕವಿ ಯಶಸ್ವಿಯಾಗಿದ್ದಾರೆ. ಇತರರ ಏಳಿಗೆಗೆ ಶ್ರಮಿಸುವ ದಲಿತರಿಗೆ ಕನಿಷ್ಟ ಹೊಟ್ಟೆ ತುಂಬುವಷ್ಟು ಅನ್ನ, ದೇಹ ಮುಚ್ಚಲು ಬಟ್ಟೆ, ವಾಸ ಮಾಡಲು ವಸತಿ ಇಲ್ಲದೇ ಬಳಲುತ್ತಾರೆಂಬುದನ್ನು ಅರ್ಥವತ್ತಾಗಿ ಧ್ವನಿಸಿದ್ದಾರೆ. ಹಸಿವಿನ ಭಯಾನಕತೆ ಬದುಕಿನ ಸಿಂಹಾವಲೋಕನಕ್ಕೆ ತೊಡಗುತ್ತದೆ. ಹಸಿವಿನ ಬದುಕನ್ನು ಈಜುತ್ತ ತನ್ನ ಅಸ್ತಿತ್ವವನ್ನು ಸ್ಥಾಪಿಸುವ ದಲಿತ ಸಮುದಾಯದ ಮೂಲಭೂತ ಪ್ರವೃತ್ತಿಯನ್ನು 'ಹಸಿದ ಹೊಟ್ಟೆಯ ಹಾಡು' ಕವನದಲ್ಲಿ ಕಾಣಬಹುದು.

ಬರಿಗಾಲ ದಾಸಯ್ಯನ ಹಸಿದ ಹೊಟ್ಟೆಯ ಹಾಡು
ಪದಗಳ ಲಯ-ಕೊರಳಿನ ನಾದಕೆ ತಲೆದೂಗಿದ ಜನ
ಸರಸರನೆ ಸರಿದು ಬಯಲಾಗುತ್ತಿರುವರು
ಬ್ಯಾಸರಿಕೆ ಇಲ್ಲದ ದಾಸಯ್ಯ ಹಾಡುತ್ತಲಿರುವನು
ತುತ್ತಿನ ಚೀಲ ತುಂಬುವುದೆಂದು, ಹಾಡು ಹಗೆಯ
ಜಿಡ್ಡನು ಬಿಡುಸುವುದೆಂದು, ನಗೆಯ ಮಾರಿಯ ತಂದು ಹಾಡುವನು

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 41)

ಕವಯತ್ರಿ ಒಬ್ಬ ದಾಸಯ್ಯನ ಹಸಿದ ಚಿತ್ರಣವನ್ನು ಕೊಡುವುದರ ಜೊತೆಗೆ, ಇದರ ಹಿಂದೆ ತನ್ನ ಸಮುದಾಯದವರಿಗಾದ ಹಸಿವಿನ ಶೋಷಣೆಯನ್ನು ಚಿತ್ರಿಸಿ, ಹಸಿವಿನ ನಾನಾ ಮುಖವನ್ನು ತೆರೆದಿಟಿದ್ದಾರೆ. ಒಬ್ಬ ದಾಸಯ್ಯನ ಸ್ಥಿತಿ ಹೀಗಿರಬೇಕಾದರೆ, ಒಂದು ಸಮುದಾಯದ ಸ್ಥಿತಿ? ದಾಸಯ್ಯನ ಹಸಿವು ನೀಗಿಸಲು ಹಾಡು ದಾರಿಯಾದರೆ, ದಲಿತರ ಹಸಿವು ನೀಗಿಸು 'ಜೀತ'ವೇ ದಾರಿ ಎಂಬ ಅರಿವು ಇಲ್ಲ ಕಾಣದಿದ್ದರೂ ಸತ್ಯವಾಗಿದೆ.

ಮೇಲಿನ ಉದಾಹರಣಾ ದಲಿತ ಕವನಗಳಿಂದ 'ಹಸಿವು : ಪ್ರತಿಭಟನೆ' ಎಂಬ ಪ್ರತಿಭಟನೆಯ ನೆಲೆಯಲ್ಲಿ ದಲಿತರು ಹಸಿವಿನ ಭೀಕರತೆಯನ್ನು ದೂರ ಮಾಡುವ ಸಲುವಾಗಿ ನಿರಂತರವಾಗಿ ಶ್ರಮಿಸುವಲ್ಲಿ ತೊಡಗಿದ್ದಾರೆ. ಇತ್ತ ವ್ಯವಸ್ಥೆ ಎಂಬುದು ಇದರ ಸಂಪೂರ್ಣ ಲಾಭ ಪಡೆದುಕೊಂಡು ನಿಗದಿಪಡಿಸಿದ ಕೂಲಿ ಕೊಡದೆ ಮೋಸ ಮಾಡಿರುವ ಅಂಶಗಳು, ತುತ್ತು ಅನ್ನಕ್ಕಾಗಿ ತನ್ನ ಜೀವಿತಾವಧಿಯ ಸಮಯ,

ಶ್ರಮವನ್ನು ಅನ್ನಕೊಟ್ಟವರಿಗೆ ಅರ್ಪಿಸುವ ಅರ್ಪಣಾ ಮನೋಭಾವದ ದಲಿತರು, ತಮ್ಮ ದುಡಿಮೆಯಿಂದ 'ವ್ಯವಸ್ಥೆ' ಅಂದರೇ ಆಳುವ ವರ್ಗದವರು ಮಾತ್ರ ಉದ್ಧಾರವಾಗುತ್ತಿದ್ದಾರೆ, ಇದರಿಂದ ನಮಗೆ ಯಾವ ರೀತಿಯ ಲಾಭವಿಲ್ಲವೆಂದು ಗೋಳಿಡುವ ಕೆಲ ದಲಿತರು, ಹಸಿವಿನಿಂದ ಸರ್ವಸ್ವವನ್ನು ಕಳೆದುಕೊಂಡು, ಮನೆ-ಮಠ, ಹೊಲ-ಗದ್ದೆ ಎಲ್ಲಾವನ್ನು ಮಾರಿಕೊಂಡು ಬಿಕಾರಿಯಾಗುವ ಸ್ಥಿತಿ, ಹಸಿವಿನ ಕ್ರೂರತೆಗೆ ಬಲಿಯಾದ ದೇಹಗಳು ಬಲಹೀನವಾಗಿರುವ ಚಿತ್ರಣ, ಮಾಡಿದ ಕೆಲಸಕ್ಕೆ ಕೂಲಿ ಕೇಳುವ ಮೂಲಕ ಪ್ರತಿಭಟಿಸುವ ಪರಿ, ನಮ್ಮ ದುಡಿಮೆಯಿಂದ ಉತ್ತಮ ಸ್ಥಿತಿಯಲ್ಲಿರುವ ವ್ಯವಸ್ಥೆಗೆ ಧೈರ್ಯವಾಗಿ ಅವರಲ್ಲಿ ಹಸಿವು ನೀಗಿಸಿ ಎಂದು ಕೇಳುವ ಮನಸ್ಸು ಮಾಡುವ, ಹೊತ್ತು-ಗಳಿಗೆ ಇಲ್ಲದೆ ದುಡಿದ ನಮಗೆ ಹಸಿವು ನಿಗಲೇ ಇಲ್ಲವೆಂಬ ಹತಾಶೆ, ದೊಡ್ಡವರ ದೌರ್ಜನ್ಯಕ್ಕೆ ಬೆಸತ್ತು, ನಿಮ್ಮಿಂದಲೇ ಜೀವಂತ ಶವವಾಗಿರುವ ಇವರ ದೇಹ ಅಸ್ಥಿಪಂಜರದಂತೆ ಕಂಡು ಬರುತ್ತಿದೆ.

ಒಂದು ಕಡೆ ಹಸಿವಿನ ಹೊಡೆತಕ್ಕೆ ತಡೆಯದೆ ತನ್ನ ಮಕ್ಕಳನ್ನು ಇತರರಿಗೆ ಮಾರಿಕೊಂಡ ಉದಾಹರಣೆ, ಹಸಿದ ದೇಹ ಇತರರಿಗೆ ವಸ್ತು ಪ್ರದರ್ಶನವಾಗಿ ಆನೆಯಂಥ ದೇಹವು ಹಸಿವಿನಿಂದ ಕರಗಿ ಶ್ವಾನದಂತೆ ವ್ಯವಸ್ಥೆಗೆ ಬಲಿಯಾದ ಸಮುದಾಯದವು, ಇದನ್ನು ಪ್ರಶ್ನಿಸಲು ಹೆದರಿ ವ್ಯವಸ್ಥೆಗೆ ಅಂಟಿಕೊಂಡು ಶೋಷಣೆಯನ್ನು ಅನುಭವಿಸುವ ಸಂಪೂರ್ಣ ಚಿತ್ರಣವನ್ನು ತೋರಿಸುವಲ್ಲಿ ದಲಿತ ಕಾವ್ಯ ಕೆಲಸ ಮಾಡಿದೆ.ಈ ಹಸಿವಿನ ಕಡಲಿನಿಂದ ಹೊರ ಬರಲು ಪ್ರಯತ್ನಿಸಿ, ಅದು ಫಲಿಸದೆ, ವ್ಯವಸ್ಥೆಯ ಕೈಗೊಂಬೆಯಾದ ಘಳಿಗೆ ಈ ಅಧ್ಯಾಯದಲ್ಲಿ ಕಂಡುಬಂದಿದೆ. ಕವಿಗಳಿಗೆ ತನ್ನವರ ಹಸಿವಿನ ಚಿತ್ರಣವನ್ನು ಸೆರೆಹಿಡಿಯಲು ಕಾವ್ಯವೇ ಉತ್ತಮ ಅಸ್ತ್ರವಾಗಿದ್ದು, ಆ ಕಾವ್ಯಗಳ ಮೂಲಕ ಪ್ರತಿಭಟನೆಯ ಸಾರವನ್ನು ಬಿಂಬಿಸಿದ್ದಾರೆ.

## ಇ. ನೋವು : ಪ್ರತಿಭಟನೆ

ನೋವು ಮನುಷ್ಯ ಜೀವನದ ಅವಿಭಾಜ್ಯ ಅಂಗ. ನೋವು ಜೀವನದ ಅನುಭವವನ್ನು ಹೆಚ್ಚಿಸುವ ಅಸ್ತ್ರವೂ ಹೌದು. ದಲಿತರ ವಿಷಯದಲ್ಲಿ ಹೇಳುವುದಾದರೆ 'ನೋವು' ಹುಟ್ಟಿನಿಂದಲೇ ಬಂದ ನಂಟಿನಂತೆ ಬೆಳೆದು ಬಂದಿದೆ. ನೋವಿರದ ದಲಿತರಾಗಲಿ ಅಥವಾ ದಲಿತ ಕಾವ್ಯವಾಗಲಿ ಹುಡುಕುವುದು ಕಷ್ಟ ಸಾಧ್ಯ.

ಹುಟ್ಟಿನಿಂದ ಬಂದ ದಲಿತರ ನೋವಿಗೆ ಕಾರಣ 'ಸಾಮಾಜಿಕ ವ್ಯವಸ್ಥೆ' ದಲಿತರಿರುವುದೇ ನೋವು ಪಡಲು ಎಂಬ 'ಅಂಧ ಶ್ರದ್ಧೆ' ಇತರರಲ್ಲಿ ಮನೆ ಮಾಡಿರುವುದೇ ಒಂದು ನೋವಿನ ಸಂಗತಿ. ದಲಿತರಿಗೆ ವ್ಯವಸ್ಥೆಯಿಂದಾದ ಅವಮಾನ, ಮಾನಸಿಕ ನೋವಾಗಿ, ಮಾಸದೇ ಒಳಗೆ ಉಳಿಯತೊಡಗಿತು. ಇಂತಹ ಮಾನಸಿಕ ಅವಮಾನದ ನೋವನ್ನು ಅನುಭವಿಸಿದ ದಲಿತರಲ್ಲಿ ಕೆಲವರು ಅದನ್ನು ಕಾವ್ಯರೂಪದಲ್ಲಿ, ಕಥಾ ರೂಪದಲ್ಲಿ ಹೊರತಂದರು. ನೋವಿನ ಕಾವ್ಯಗಳು ಹುಟ್ಟ ಬೇಕಾದರೆ"ಅವಮಾನವನ್ನು ಯಾರೂ ಅನುಭವಿಸಿರುತ್ತಾರೋ ಅವಮಾನಿತನಾಗಿದ್ದುಕೊಂಡು ಆ ಅವಮಾನದಲ್ಲೇ ಯಾರು ಉಸಿರಾಡುತ್ತ ಜೀವಂತವಾಗಿರುತ್ತಾರೋ ಆ ವ್ಯಕ್ತಿಗಳು ಮಾತ್ರ ಆ ಪದ್ಯ ಬರೆಯಲಿಕ್ಕೆ ಸಾಧ್ಯ" (ಬಯಲ ಬೆಳಕು, ಅಪ್ಪಗೆರೆ ಸೋಮಶೇಖರ (ಸಂ.), 2007, ಪುಟ 1) ಎಂಬ ವ್ಯಾಖ್ಯೆಯನ್ನು ಚ. ಸರ್ವಮಂಗಳರವರು ಕೊಡುತ್ತಾರೆ. ಇಡೀ ದಲಿತ ಕಾವ್ಯಗಳು ನೋವಿನ ಅನುಭವದ ಆಧಾರದ ಮೇಲೆ, ತಾವು ಅನುಭವಿಸಿದ ಅವಮಾನದ ಆಧಾರವಾಗಿ ಜನ್ಮ ತಾಳಿ, ನೋವಿನ ನೆಲೆಯಿಂದಲೇ ಆರಂಭವಾದ ಕಾವ್ಯಗಳಾಗಿವೆ.

ದಲಿತರು ತಮ್ಮ ಜೀವಿತಾವಧಿಯಲ್ಲಿ 'ಮಾನಸಿಕ' ಹಾಗೂ 'ದೈಹಿಕ' ನೋವುಗಳನ್ನು ಅನುಭವಿಸಿರುವುದುಂಟು. ತನಗೆ, ತಮ್ಮವರಿಗೆ ಇತರರಿಂದಾದ ತೊಂದರೆಗೆ ಪ್ರತಿರೋಧ ತೋರದೆ, ಎಷ್ಟೇ ನೋವಾದಾರೂ ಮನಸ್ಸಿನಲ್ಲೇ ಇಟ್ಟುಕೊಂಡು ಜೀವನ ಸಾಗಿಸಿದ ಅನೇಕ ಉದಾರಹಣೆಗಳು ಹಾಗೂ ಯಾವುದೋ ಸಣ್ಣ ತಪ್ಪಿಗೆ ಘೋರ ಶಿಕ್ಷೆ ಅನುಭವಿಸಿ, ಅಳಿಸದ ಗಾಯಗಳು ದೇಹದಲ್ಲಿ ಪದಕಗಳಂತೆ ಇದ್ದ ಉದಾಹರಣೆಗಳು ಕಂಡು ಬರುತ್ತವೆ. ಇಂಥ ಅಂಶಗಳಿಗೆ ತಕ್ಕ ಮಟ್ಟಿನ ಪ್ರತಿರೋಧ ತೋರುವ ಅಸ್ತ್ರವೆಂದರೆ 'ದಲಿತ ಕಾವ್ಯ'ಗಳು ಮಾತ್ರ. ದಲಿತ ಕಾವ್ಯಗಳು ದಲಿತ ಸಮುದಾಯದವರ ನೋವಿಗೆ ನಿವಾರಣೆ ಹುಡುಕುತ್ತ

ತನ್ನವರಲ್ಲಿ ಸ್ವಾಭಿಮಾನ, ಪ್ರತಿರೋಧದ ಭಾವನೆ ಉಂಟು ಮಾಡುವಲ್ಲಿ ಶಕ್ತವಾಗಿ ಹೊರಹೊಮ್ಮಿತು. ಒಟ್ಟಿನಲ್ಲಿ ಸಮಾಜದ ಅತ್ಯಂತ ತಳ ಸಮುದಾಯದಿಂದ ಬಂದ ದಲಿತರು ಶತ-ಶತಮಾನಗಳಿಂದ ಕಾಡುತ್ತ ಬಂದಿರುವ ಅಸ್ಪೃಶ್ಯತೆ, ಅಸಮಾನತೆ, ಅನಕ್ಷರತೆಗಳ ಜೊತೆಗೆ 'ನೋವು' ಬದುಕಿನ ಭಾಗವೆಂದೇ ಭಾವಿಸಿದ ಅಪರೂಪದ ವ್ಯಕ್ತಿಗಳಾಗಿದ್ದಾರೆ. ದಲಿತರಲ್ಲಿ ವ್ಯಕ್ತವಾದ ನೋವನ್ನು ಮಾನಸಿಕ, ದೈಹಿಕ, ಲೈಂಗಿಕ ನೋವುಗಳೆಂದು ವಿಂಗಡಿಸಿ ಚರ್ಚೆಗೆ ಒಳಪಡಿಸಲಾಗಿದೆ.

ದಲಿತರ ನೋವಿನ ಸ್ಪಂದನಗಳಾದ ಕವಿತೆಗಳನ್ನು ರಚಿಸುವುದರೊಂದಿಗೆ ದಲಿತ ಕವಿಗಳು ಗುರುತಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಸಮಾಜದ ತುಳಿತಕ್ಕೊಳಗಾದ, ಕೆಳವರ್ಗದಿಂದ ಬಂದವರಿಗೆ ಮೇಲ್ಜಾತಿ ವರ್ಗದ ಜನರ ಬಗ್ಗೆ ಅಸಹನೆ, ಸಿಟ್ಟು, ಅಕ್ರೋಶವಿರುವುದು ಸಾಮಾನ್ಯ. ಆದರೆ ದಲಿತ ಕವಿಗಳು ಸಿಟ್ಟಿನ ಜೊತೆಗೆ ಸಹನೆ, ದ್ವೇಷದ ಜತೆಗೆ ಮಾನವೀಯತೆಯನ್ನು ತಮ್ಮ ಕವಿತೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಶತಮಾನಗಳಿಂದ ನೋವಿನ ಅಗ್ನಿ ಕುಂಡದಲ್ಲಿ ನೊಂದು, ಬೆಂದವರ ನಡುವಿನಿಂದ ಸಿಡಿದು, ಆ ಸಮುದಾಯದ ಅನುಭವವನ್ನು ದೊಡ್ಡ ದನಿಯಾಗಿ 'ಒಂದು ಪದ' ಪದ್ಯವು ಗುಡುಗಿದೆ.

ನಮ್ಮನ್ನು ಉದ್ಧಾರ ಮಾಡ್ತೀವಿ ಅಂತ ಪೇಪ್ರೇಲಿ
ಮೈಕೇಲಿ ಜೋರಾಗಿ ಕೂಗ್ತಾ ಅವ್ರಲ್ಲಪ್ಪೋ
ನಾವ್ ಮಾತ್ರ ಇಸ್ಕೋಲ್‌ಗೋಗಾಂಗಿಲ್ಲ ಜೀತಕ್ಕೋಗ್ಬೇಕು
ತಲೆ ಎತ್ತಾಂಗಿಲ್ಲ ಬಗ್ಗುಸ್ಬೇಕು
ಈ ನನ್ನ್ ಮಕ್ಳು ಕಳ್ಳಾಟ ಆಡ್ತಾ ಅವ್ರೆ ಅದಕ್ಕೇನೆ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 59)

'ವ್ಯವಸ್ಥೆ'ಯ ಬಣ್ಣದಾಟದ ಬದುಕನ್ನು ಹೀಯಾಳಿಸುವ ಮೂಲಕ ಪ್ರತಿಭಟಿಸುತ್ತಿದ್ದಾರೆ. ಕವಿ ತನ್ನವರ ನೋವಿನ ನಡುವೆಯು ನೈತಿಕ ಎಚ್ಚರವನ್ನು, ತಾರ್ತಿಕ ವಿವೇಚನಾ ಶಕ್ತಿಯಿಂದ ನೋವಿನಿಂದಾದ ಆಕ್ರೋಶವನ್ನು ಹೊರಹಾಕಿದ್ದಾರೆ. ಕವಿತೆಯ ಸಾಲುಗಳಲ್ಲಿ ವಸಾಹತುಶಾಹಿ ಶಿಕ್ಷಣ ನೀಡದೆ ನೋಯಿಸಿದರ ಪರಿಣಾಮದಿಂದ ಸಮುದಾಯದ ಆಕ್ರೋಶವನ್ನು ಕಾವ್ಯದ ಮೂಲಕ ಹರಿಸಿದ್ದಾರೆ.

ಸಾಮಾಜಿಕ ಕೀಳರಿಮೆಯಿಂದ ನೊಂದು ಅರಿವಿನ ಎಚ್ಚರದಲ್ಲಿ ಕಳೆದುಕೊಂಡ ನೈತಿಕಾಂಶದ ಮೇಲರಿಮೆಯಾಗಿ, ಸಮುದಾಯದ ನೋವಿನ ದನಿಯಾಗಿ ಕಾವ್ಯ ಹುಟ್ಟುಕೊಂಡಿದೆ.

ದೇಶದ ವರ್ಣಾಶ್ರಮ ನೀತಿಯ ಅಮಾನವೀಯ ಅಸಹ್ಯಗಳಿಗೆ ನೊಂದ ಸಮುದಾಯವು ನಾನಾ ರೀತಿಯ ತೊಂದರರೆಗೆ ಒಳಗಾಗಬೇಕಾಯಿತು. ಕೆಲವರು ಹಸಿವಿನಿಂದ ನೊಂದು ಮಾನಸಿಕವಾಗಿ ನರಳಿದರೆ. ಇನ್ನೂ ಕೆಲವರು ವದೆಸಿಕೊಂಡು, ದೈಹಿಕ ನೋವಿಗೆ ತುತ್ತಾಗಬೇಕಾಗಿತ್ತು. ಇಂತಹ ನೋವಿನ ಕಾವ್ಯವು 'ಹಕ್ಕಿಗಳು' ಕವನದಲ್ಲಿ ಹಾರಿದೆ.

ಕುರಿಗಳ ಕಾಯ್ದು ದನಗಳ ಮೇಯಿಸಿ
ಹಾಲನು ಕುಡಿಯದೆ ಹೋದವರು
ಓದುವ ಬರೆಯುವ ಭಾಗ್ಯವು ಸಿಗದೆ
ಗಿಡಗಳ ಜೊತೆಯಲಿ ಬೆಳೆದವರು

(ಸಿದ್ದಲಿಂಗಯ್ಯ, ಮೆರವಣಿಗೆ, 2007, ಪುಟ 34)

ಅವಕಾಶ ವಂಚನೆಯಿಂದ ನೋವು ಅನುಭವಿಸಿದವರ ಪರವಾಗಿನಿಂತು ಕವಿ ಪ್ರತಿಭಟಿಸುತ್ತಿದ್ದಾರೆ. ಇದು ನೋವಿನ ಕಾರಣಗಳನ್ನು ಹೇಳುವ ಕಾವ್ಯವಾಗಿದೆ. ಈ ಕವನದ ಆಳದಲ್ಲಿ ತೀವ್ರವಾದ ನೋವಿನ ಅನುಭವ ಹೆಪ್ಪುಗಟ್ಟಿರುವುದರಿಂದ ಸಮುದಾಯಕ್ಕೆ ನೋವಿನ ಸಾವಿಲ್ಲ. ಹುಟ್ಟಿನಿಂದ ಬಂದ ನೋವಿನ ಅನುಭವವನ್ನು ಅರ್ಥೈಸುವಲ್ಲಿ ಈ ಸಾಲು ಪ್ರಭಾವ ಬೀರಿದೆ. ಇಲ್ಲಿ ಉದ್ಭವಿಸಿರುವ ನೋವು ವೈಚಾರಿಕ ಆಕೃತಿಗೆ ನೇರವಾಗಿ, ಸ್ಪಷ್ಟವಾಗಿ, ಖಚಿತವಾಗಿ, ನಿಶ್ಚಿತ ಅರ್ಥದ ನೆಲೆಯಲ್ಲಿ ಧ್ವನಿ ಪಡೆದಿದೆ.

ದಲಿತ ಸಮುದಾಯವನ್ನು ವ್ಯವಸ್ಥೆಯು ನಾಯಿಯಂತೆ ಅಥವಾ ನಾಯಿಗಿಂತಲೂ ಕಡೆಯಾಗಿ ಕಾಣುವುದು 'ಜೀವ' ಕುದಿಯುತ್ತಿರುವಂತೆ ಭಾಸವಾಗುತ್ತದೆ. ವ್ಯವಸ್ಥೆಯ ಕೀಳರಿಮೆ ಸಮುದಾಯದ ನೋವಿನ ಸಂಕಟ ಹೆಚ್ಚಾಗುವಂತೆ ಮಾಡುತ್ತದೆ. ಸಮಾನತೆಯ ಆಶಯ ಬಯಸುವ ಇವರ ಹಂಬಲವನ್ನು 'ನಲವತ್ತೇಳರ ಸ್ವಾತಂತ್ರ್ಯ'ದಲ್ಲಿ ರೂಪ ಪಡೆದಿದೆ.

ಬಡವರ ಮನೆಗೆ ಬರಲಿಲ್ಲ
ಬೆಳಕಿನ ಕಿರಣ ತರಲಿಲ್ಲ

ಗೋಳಿನ ಕಡಲನು ಬತ್ತಿಸಲಿಲ್ಲ
ಸಮತೆಯ ಹೂವನು ಅರಳಿಸಲಿಲ್ಲ
ಯಾರಿಗೆ ಬಂತು ಸ್ವಾತಂತ್ರ್ಯ
ನಲವತ್ತೇರಳ ಸ್ವಾತಂತ್ರ್ಯ
(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 138)

'ವ್ಯವಸ್ಥೆ'ಯ ವ್ಯವಸ್ಥೆಯನ್ನೇ ಕವಿ ಪ್ರತಿಭಟಿಸುತ್ತಿದ್ದಾರೆ. ನೋವು ನಿವಾರಿಸುವ ಆಶ್ವಾಸನೆಗಳು ಬರೀ ಆಶ್ವಾಸನೆಗಳಾಗಿಯೇ ಉಳಿಯಿತೆಂದು ಗುಡುಗಿದ್ದಾರೆ. ದಲಿತರ ನೋವಿನ ಪರಿಣಾಮ ಪ್ರಶ್ನಿಸುವ ಹಂತಕ್ಕೆ ಈ ಕಾವ್ಯ ತಲುಪಿದೆ.

ದೇಶಕ್ಕೆ ಸ್ವಾತಂತ್ರ್ಯ ಬಂದು ಹಲವಾರು ವರ್ಷಗಳಾದರೂ ನೊಂದ ದಲಿತರಿಗೆ ಯಾವ ರೀತಿಯ ಅಭಿವೃದ್ಧಿಯ ಬೆಳಕು ತಲುಪಿಲ್ಲವೆಂದು ನೊಂದಿದ್ದಾರೆ. ನಮ್ಮಂತೆ ನೋವಿನಿಂದ ನರಳಿದವರಿಗೆ ಯಾವ ರೀತಿಯಿಂದಲೂ ಸಮಾಧಾನವನ್ನು ಅದು ನೀಡಲಿಲ್ಲ. ದುಡಿಯುವ ವರ್ಗ ದುಡಿಯುತ್ತಲೇ ಇದ್ದು, ದುಡಿಸಿಕೊಳ್ಳುವವರು ಹಾಗೆ ದುಡಿಸಿಕೊಳ್ಳುತ್ತಿದ್ದಾರೆಂಬ ಭಾವನೆಯ 'ನೋವೇ' ಬದುಕಾಗಿದೆ. ದಲಿತ ಕಾವ್ಯದ ಸ್ಥಾಯಿ ಭಾವ ನೋವು. ಇದನ್ನು ವ್ಯಕ್ತಪಡಿಸಲು ಬಳಸಿಕೊಂಡ ಒಳ್ಳೆ ಕ್ರಮವೆಂದರೆ ಕಾವ್ಯದ ವೈಶಿಷ್ಟ್ಯ. ದಲಿತ ಕಾವ್ಯದಲ್ಲಿ ವ್ಯಕ್ತವಾಗಿರುವ ನೋವು ದಲಿತ ಸಮುದಾಯದ ಕಠೋರ ವಾಸ್ತವಗಳನ್ನು ಬಿಚ್ಚಿಡುವ ಮೂಲಕ ಹಳೆಯ ಭ್ರಮೆಯ ಪೊಳ್ಳುತನವು 'ರೋಮನ್ ರಾಜ್ಯದ ಗುಲಾಮನೂ ಹಂಗರಿಹಳ್ಳಿಯ ಜೀತಗಾರನೂ' ಪದ್ಯದಲ್ಲಿ ಪ್ರಕಟಗೊಂಡಿದೆ.

ಮುಟ್ಟಬಾರದವರೆಂಬ ಕಳಂಕ ಬೇರೆ
ಗಾಯದ ಮೇಲಿನ ಬರೆ
ಒಳಚಡ್ಡಿ ಉಡಬಾರದೆಂಬ
ಉಪ್ಪನ್ನೂ ಸುರಿದಿದ್ದಾರೆ ಮೇಲೆ
ಕಮಕ್ ಕಿಮಕ್ ಎಂದರೆ
ಸರಪಳಿಯಿಂದ ಬಿಗಿದ
ಕೀವು ತುಂಬಿದ ಗಾಯದ ಕಾಲಿಗೆ
ಸಿಹಿ ನೀರು ಸುರಿದು
ಇರುವೆಗಳನ್ನು ಬಿಡುತ್ತಾರಂತೆ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 08)

ದಲಿತರ ವಿಭಿನ್ನ ಮುಖ ಇಲ್ಲಿ ವ್ಯಕ್ತಗೊಂಡಿದೆ. ಇದು ಗಾಯದ ಮೇಲೆ ಬರೆ ಎಳೆದಂಥ ಅನುಭವವನ್ನು ಕೊಡುತ್ತದೆ. ಇದನ್ನು ವರ್ಣನೆ ಮಾಡುತ್ತಲೇ ಕವಿ ವ್ಯವಸ್ಥೆಯನ್ನು ಪ್ರತಿಭಟಿಸುತ್ತಿದ್ದಾರೆ. ಇಲ್ಲಿನ ಸಾಲುಗಳಲ್ಲಿ ದಲಿತ ಸಮುದಾಯದವರ ಸಂಕಟವನ್ನು ವಿಶ್ಲೇಷಿಸಿದ್ದಾರೆ. ಇಲ್ಲಿನ ಸಂಕಟ ಕೇವಲ ಒಂದೆರಡು ದಿನದಲ್ಲ, ಸಹಸ್ರ ಶತಮಾನಗಳಷ್ಟು ಹಳೆಯ ಸಂಕಟವೆಂಬುದು ಗೋಚರಾಗುತ್ತದೆ. ತನ್ನ ಸಮುದಾಯದ ಸಂಕಟ, ನೋವನ್ನು ತಿಳಿಸುವ ಮಾಧ್ಯಮವಾಗಿ ಕವಿ ಕೆಲಸ ಮಾಡಿ, ಪ್ರತಿಯೊಂದು ಶಬ್ದಗಳನ್ನು, ನೋವಿನ ತೀವ್ರತೆಯನ್ನು ಹಿಡಿದಿಟ್ಟು, ನೋವಿನ ತೀವ್ರ ಅಭಿವ್ಯಕ್ತಿಯಲ್ಲಿ ಕಾವ್ಯವಾಗಿಸಿದ್ದಾರೆ. ದಲಿತ ಸಮುದಾಯದ ನೋವು ಕೇವಲ ಮಾತಿಗೆ ನಿಲ್ಲದೇ, ಅನುಭವಿಸಿದ ನೋವು, ಅಪಮಾನಗಳು ಕಾವ್ಯದ ಮೂಲಕ ಕರಗತವಾಗಿವೆ. ಚಾಟಿಯ ಏಟಿಗಿಂತ ತೀವ್ರತರವಾದ, ಹರಿತವಾದ ನೋವು ಮನಸ್ಸಿಗೆ ಮೊಳೆ ಬಡಿದಂತೆ ಅಂತಃಕರಣವನ್ನು ತಟ್ಟುತ್ತವೆ. ಈ ರೀತಿಯ ಅಂತಃಕರಣದ ಬವಣೆಯು 'ಚಪ್ಪಲಿ ಮತ್ತು ನಾನು' ಪದ್ಯದಲ್ಲಿ ಭಿತ್ತರಗೊಂಡಿದೆ.

ನಾನು ದೇವಸ್ಥಾನಕ್ಕೆ ಹೋದಾಗ
ಚಪ್ಪಲಿಯನ್ನು ಹೊರಗೆ ಬಿಡುವುದಿಲ್ಲ
ನಾನೇ ಹೊರಗಿರುತ್ತೇನೆ
ಚಮ್ಮಾರನ ಕಾಲುಗಳಲ್ಲಿ ಕಂಡ ಚಪ್ಪಲಿ
ಮನುಷ್ಯ ನಾಯಿಯನ್ನು ಕಚ್ಚಿದಾಗ ಆಗುವಂತೆ
ಸುದ್ಧಿಯಾಗುತ್ತದೆ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 03)

ದಲಿತನ್ನೊಬ್ಬ ದೇವಸ್ಥಾನಕ್ಕೆ ಪ್ರವೇಶಿಸಿದರೆ, ಅದರ ಭೀಕರ ಪರಿಣಾಮವನ್ನು ಕವಿ ಇಲ್ಲಿ ಅನಾವರಣಗೊಳಿಸಿ ಪ್ರತಿಭಟಿಸುತ್ತಿದ್ದಾರೆ.

ಇಲ್ಲಿನ ಪದ್ಯದ ಸಾಲುಗಳು ದೇವಾಲಯದ ಒಳಗೆ ಹೋಗುವವರ ಮಂದಹಾಸ ಹಾಗೂ ಒಳಗೆ ಹೋಗಲಾರದೆ ನಿಷಿದ್ಧಗೊಂಡವರ ನೋವಿನ ವ್ಯಂಗ್ಯವನ್ನು ವಿಶ್ಲೇಷಿಸಿದ್ದಾರೆ. 'ಅಸ್ಪೃಶ್ಯ'ರ ದೇವಾಲಯ ಪ್ರವೇಶದ ನಿಷೇಧವೇ ಒಂದು ನೋವಿನ ಪ್ರತಿಭಟನೆ. ಇಲ್ಲಿ ಜಾತಿಯ ಅಮಾನುಷ ಲೋಕದ ಅರೆಕೊರೆಗಳು ಅನಾವರಣ ಹೊಂದಿದೆ.

'ಅಸ್ಪೃಶ್ಯ'ರು ತಮ್ಮ ಇಡೀ ನೋವಿನ ಲೋಕವನ್ನು ಪ್ರಕೃತಿಯ ಸಹನೆಯಂತೆ ತಡೆದುಕೊಂಡಿದ್ದಾರೆ. ಅಂದರೆ ಪ್ರಕೃತಿಯ ಇನ್ನೊಂದು ಭಾಗವಾಗಿ ನೊಂದು, ಮಿಡಿಯುವ ಮನಸ್ಸು, ಸ್ಪೃಶ್ಯರು ಮಡಿ, ಮೈಲಿಗೆ ಎಂದು ನೀರನ್ನು ಚುಮುಕಿಸಿ ಶುದ್ಧ ಮಾಡುವ ಇಂತ ವ್ಯವಸ್ಥೆಯಲ್ಲಿ ಸಮುದಾಯ ಅನುಭವಿಸಿದ ನೋವನ್ನು, ಆತಂಕ, ತಲ್ಲಣಗಳನ್ನು ತೆರೆದಿಡುವ, ತಣ್ಣಗೆ ಪ್ರಶ್ನಿಸುವ ಸಾಲುಗಳನ್ನು 'ನಾನೊಂದು ಮರವಾಗಿದ್ದರೆ'ಯಲ್ಲಿ ಕಾಣಬಹುದು.

ನಾನೊಂದು ಮರವಾಗಿದ್ದರೆ
ಹಕ್ಕಿ ಗೂಡು ಕಟ್ಟುವ ಮುನ್ನ
ಕೇಳುತ್ತಿರಲಿಲ್ಲ ನೀನು ಯಾವ ಕುಲ;
ಬಿಸಿಲು ನನ್ನ ಅಪ್ಪಿಕೊಂಡಾಗ
ನೆರಳಿಗಾಗುತ್ತಿರಲಿಲ್ಲ ಮೈಲಿಗೆ
ತಂಬೆಲರ ಕೂಡ ಎಲೆಗಳ ಸ್ನೇಹ
ಮಧುರವಾಗಿರುತ್ತಿತ್ತು.

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 09)

ವರ್ಣಾವಸ್ಥೆಯ ಘೋರ ಕ್ರೌರ್ಯದ ಅನಾವರಣ ಇಲ್ಲಿದೆ. 'ಅಸ್ಪೃಶ್ಯ'ರ ನೆರಳನ್ನು ಮೈಲಿಗೆ ಎಂದು ಭಾವಿಸಿ, ಮಡಿ ಎಂದು ಸ್ನಾನ ಮಾಡಿಕೊಳ್ಳುವ ಮಂದಿಗೆ ಉತ್ತರವಾಗಿ ಈ ಪದ್ಯ ಸೃಷ್ಟಿಗೊಂಡಿದೆ. ಪ್ರಕೃತಿಯ ಭಾಗವಾದ ಹಕ್ಕಿ, ಮೋಡ, ಮಳೆ, ಮರದಲ್ಲಿ ಇಲ್ಲದ ಮಡಿ, 'ವ್ಯವಸ್ಥೆ' ಎಂಬ ಕಟ್ಟುಪಾಡುಗಳಲ್ಲಿ ಬೆಳೆದ ನೀವೇಕೆ ಮಡಿ, ಮೈಲಿಗೆ ಎಂದು ಕೂಪ ಮಂಡೂಕವಾಗಿ ಕುಪ್ಪಳಿಸುತ್ತಿದ್ದಿರ ಎಂದು ಪ್ರಶ್ನಿಸುತ್ತಲ್ಲೇ ಕವಿ ಪ್ರತಿಭಟಿಸುತ್ತಿದ್ದಾರೆ.

ದಲಿತ ಸಮುದಾಯದ ನೋವುಗಳಲ್ಲಿ ದೇವದಾಸಿ ಪದ್ಧತಿಯು ಒಂದು. ಇದು ಕ್ರೂರ, ಅನಿಷ್ಟ ಪದ್ಧತಿಯಾಗಿದ್ದು, ಅಶಿಕ್ಷಿತ ದಲಿತರಿಗೆ ದೇವರ ಭಯ ಹುಟ್ಟಿಸಿ, ಉತ್ತಮರು ದೇವದಾಸಿಯ ಪಟ್ಟಕಟ್ಟಿ, ದಲಿತ ಹೆಣ್ಣು ಮಕ್ಕಳನ್ನು ಮಾನಸಿಕವಾಗಿ ನೋಯಿಸಿದರ ಕಾರ್ಯವನ್ನು 'ಯಲ್ಲವ್ವನ ಬಗುತಿ' ಎಂಬ ಪದ್ಯದಲ್ಲಿ ಹೀಗೆ ಅಂಕುರವಾಗಿದೆ.

ಊರ ಉತ್ತಮರಿಗೆ ಸೆರಗ ನಾ ಹಾಸಬೇಕು
ಉಳ್ಳವರ ಮೈಯಾಸೆಯ ತೀರಿಸಲೂ ಬೇಕು
ನೂರು ಕಾಲದ ಜಾತರೆ ನಡೆದು ಬಂದೈಯ್ತೆ
ಅದೇ ಕಾಣೋ ಯಲ್ಲವ್ವನ ಬಗುತಿ ಅಣ್ಣಯ್ಯ

(ಜವರಯ್ಯ ಮ.ನ., ವಿದ್ರೋಹ, 2002, ಪುಟ 39)

ದಲಿತರ ಮೇಲೆ ದೇವರ ಹೆಸರಲ್ಲಿ ನಡೆಯುವ ದೌರ್ಜನ್ಯವನ್ನು ತೆರೆದಿಟ್ಟಿದ್ದಾರೆ. 'ವ್ಯವಸ್ಥೆ' ದೇವರ ಹೆಸರೇಳಿ ಧಂಧೆ ನಡೆಸುವುದನ್ನು ಕವಿ ಪ್ರತಿಭಟಿಸುತ್ತಿದ್ದಾರೆ. ನೊಂದ ದಲಿತ ಹೆಣ್ಣು ತನ್ನ ನೋವನ್ನು ಸಂಭಾಷಣೆಯಂತೆ ವಿವರಿಸುತ್ತಿದ್ದಾಳೆ. ಇಲ್ಲಿನ ಅಣ್ಣಯ್ಯ ಮತ್ತು ತಂಗ್ಯಮ್ಮ ದಲಿತ ಸಮುದಾಯದ ಕೇಂದ್ರ ಬಿಂದುಗಳು. ವ್ಯವಸ್ಥೆಯ ಬಲೆಗೆ ಬಿದ್ದು ನರಳಿದ ದಲಿತ ದೇವದಾಸಿಯರ ಧಾರುಣ ಚಿತ್ರಣ ಇಲ್ಲಿ ಮೂಡಿದೆ. ದಲಿತ ಸಮುದಾಯಕ್ಕಾದ ಸಾಮಾಜಿಕ ನೋವಿನ ತೀವ್ರತೆಯ ಪರಿಣಾಮವನ್ನು ಪ್ರಕೃತಿಯ ವೈಚಿತ್ರದೊಂದಿಗೆ ವಿವರಿಸುವುದು ಕಾವ್ಯದ ಲಕ್ಷಣಗಳಲ್ಲೊಂದು. ಇಂಥ ಪ್ರಯತ್ನವು 'ಆ ಮುಗಿಲು ಈ ನೆಲ' ಪದ್ಯದಲ್ಲಿ ರೂಪುಗೊಂಡಿದೆ.

ಭುಗಿಲೆದ್ದ ಸಂಕ್ರಾಂತಿ
ದಳ್ಳುರಿಯಲ್ಲಿ
ಕೊಂಬೆರೆಂಬೆಗಳ
ಹಸಿರೆಲ್ಲ ಉದರಿದಂತೆ
ಎದೆಯಾಸೆಗಳು
ಸುಟ್ಟು ಕರಕಾದ ಈ
ನೆಲದ ಬದುಕಿನಲ್ಲೂ

(ಜವರಯ್ಯ ಮ.ನ., ವಿದ್ರೋಹ, 2002, ಪುಟ 72)

'ಸಂಕ್ರಾಂತಿ' ಕಾಲದಲ್ಲಿ ಮರದ ಎಲೆ ಉದುರುವುದು ವಸಂತನ ಆಗಮಕಾಲದ ಸೂಚನೆ. ಅಂದರೆ ಹೊಸ ಋತುವಿನ ಶುಭಾರಂಭ. ಆದರೆ ಕವಿ ತನ್ನವರು ಎಷ್ಟೇ ವಸಂತಗಳು ಕಳೆದರೂ ಅವರಲ್ಲಿ ಹೊಸ ಋತು ಅವರಿಸಲೇ ಇಲ್ಲ ಎಂಬ ನೋವನ್ನು ಇಲ್ಲಿ ಬಿಚ್ಚಿಟ್ಟಿದ್ದಾರೆ. ಉದುರುವ ಹಣ್ಣೆಲೆ, ಚಿಗುರುಲೆಗೆ ಅವಕಾಶ ಮಾಡಿಕೊಡುವುದು ಪ್ರಕೃತಿಯ ನಿಯಮ, ಇದು ನಲಿವಿನ ವಿಷಯವೂ ಹೌದು.

ದಲಿತರ ಪಾಲಿಗೆ ತಮ್ಮಲ್ಲಿರುವ ಆಸೆಗಳು ಎಲೆಯಂತೆ ಉದುರಿದರು ಮತ್ತೇ ಚಿಗುರಿದೆ. ವ್ಯವಸ್ಥೆಯ ಅಸಮಾನತೆಯಲ್ಲಿ ಕರಕಲಾಗಿರುವ ನೋವಿನ ಆಳವನ್ನು ತಿಳಿಸಿ ಪ್ರತಿಭಟಿಸುತ್ತಿದ್ದಾರೆ. ದಲಿತರು ವ್ಯವಸ್ಥೆಯ ಘೋರ ವರ್ತನೆಯಿಂದ ಅಕ್ಷರ ವಂಚಿತರಾಗಿದ್ದು ಇಂದಿಗೆ ಇತಿಹಾಸ. ಅದೇ ದಲಿತರು ವ್ಯವಸ್ಥೆಯನ್ನು ಹಿಂದಿಕ್ಕಿ ಅಕ್ಷರ ಕಲಿತದ್ದು ಇಂದಿಗೆ ಪವಾಡ. ಆದರೆ ಅಕ್ಷರ ಕಲಿತ ಸಮುದಾಯವು ಸರ್ಕಾರಿ ಕೆಲಸಕ್ಕೆ ಅಲೆದು ಅಲ್ಲಿ ಅನುಭವಿಸಿದ ನೋವು 'ಬಂದದ್ದು ಬರಲಿ' ಎಂಬ ಪದ್ಯದಲ್ಲಿ ಹೀಗೆ ಚಿತ್ರಿತವಾಗಿದೆ.

ಪದವಿ ಪ್ರಶಸ್ತಿಗಳ ಸಾಲನ್ನೇ ಪಡೆದೆ
ಸಾಲ ನೀಡುವ ಇಲಾಖೆಗಳಿಗೆ
ದಣಿವರಿಯದೆ ದಣಿದೂ ದಣಿದೆ
ಲಂಚ ನೀಡುವ ರೀತಿ ತಿಳಿಯದೆ
ಬಾಗಿಲ ಬಳಿಯ ಅಧಿಕಾರಿಯಿಂದ ಹಿಡಿದು
ಬಾಗಿಲೊಳಗಿನ ಅಧಿಕಾರಿಯವರೆಗೂ
ಒಂದೇ ಥರ ಕೈ ಮುಗಿದೆ
ನಾನು ಮುಗಿದ ಬರೀಕೈಗೆ
ಬೆಲೆಯಿಲ್ಲದ್ದನ್ನು
ಅವರ ಕಣ್ಣುಗಳಲ್ಲೇ ಕಂಡೆ

(ಜವರಯ್ಯ ಮ.ನ., ವಿದ್ರೋಹ, 2002, ಪುಟ 318)

ವಿದ್ಯಾವಂತನಾದರೂ ಕವಿಗೆ ಅಸಮಾನತೆಯ ಸಂಕಟ ಎದುರಾಗಿರುವುದು ಇಲ್ಲಿ ಗೋಚರಿಸುತ್ತಿದೆ. ಇಲ್ಲಿ ಒಂದು ಸಮುದಾಯದ ಅಸಹನೆ, ಹೀನ ಆರ್ಥಿಕತೆಯ ನೋವು, 'ವ್ಯವಸ್ಥೆ' ಎಂಬ ಇಲಾಖೆಯ ಬೇಜವಾಬ್ದಾರಿ ವರ್ತನೆಯನ್ನು ಬಿಂಬಿಸಿದ್ದಾರೆ. ಕವಿ ನೋವನ್ನು ಮರೆಯಲು ಕೆಲಸಕ್ಕೆ ಅಲೆದರೆ, ಆ ಕೆಲಸಕ್ಕೆ ಹಣ ಬೇಕೆಂಬುದನ್ನು ಅರಿಯದೆ, ಓದಿದ್ದೆ ನೋವಿಗೆ ಕಾರಣವಾಯಿತ್ತಲ್ಲ ಎಂಬ ಭ್ರಮೆ ಅವರಿಸಿಕೊಂಡು ವ್ಯವಸ್ಥೆ ವಿರುದ್ಧ ಪ್ರತಿಭಟಿಸುತ್ತಿದ್ದಾರೆ.

ದಲಿತ ಕಾವ್ಯಗಳು ಬರೀ ಆವೇಶ, ಆಕ್ರೋಶ, ಅಬ್ಬರ ಎಂಬ ಭ್ರಮೆಯ ಸಂಕೇತಗಳಾಗದೇ, 'ಹೊಲೆಯ' ಎಂಬ ಜಾತಿಯ ನೋವನ್ನು ಕಡಿದು, ಮಾನವತೆಯ ನಾಡನ್ನು ಸೃಷ್ಟಿಸಲು ಹವಣಿಸುತ್ತಿದ್ದವು.

ಇಂಥ ಸಾಲುಗಳನ್ನು 'ಮೌಂಸದ ಕೋಟೆ' ಎಂಬ ಕವನವು ಕಟ್ಟಿಕೊಡುತ್ತದೆ.

ಆಗಸ್ಟರ ಹದಿನೈದು
ನೀವ್ಹೇರ್ರುದು ಧ್ವಜವಲ್ಲ
ನಾವೇರುವ ನೇಣುಗಳು
ನಿಮ್ಮ ಸೂತ್ರದ ಬೊಂಬೆಗಳು
ಈ ನಾಡು ನಮ್ಮದೆನಲೇ
ನಮ್ಮದಿದ್ದರೆ ಈ ನೆಲದಲ್ಲಿ
ಮಾವೇಕೆ ಬರಲಿಲ್ಲ

(ಅರವಿಂದ ಮಾಲಗತ್ತಿ, ಕಪ್ಪು ಕಾವ್ಯ, 1985, ಪುಟ 113)

'ಮಾವು' ಅಭಿವೃದ್ಧಿಯ ಸಂಕೇತ. ಮಾವಿನ ಬೆಳೆಯಂತೆ ಎಲ್ಲರೂ ಬೆಳೆಯ ಬೇಕೆಂದು ಹಂಬಲಿಸುವುದು ಸಹಜ. ನಮ್ಮ ಬಾಳು ಮಾವಿನಂತೆ ಸಮೃದ್ಧವಾಗಲಿಲ್ಲ ಎಂಬ ನೋವು ಅನುಭವಿಸಿದ, ಕಷ್ಟಗಳನ್ನು ತಣ್ಣಗೆ ನುಂಗಿ, ನಮ್ಮದೇ ನಾಡಿನಲ್ಲಿ, ಇತಿಹಾಸದ ಹಾದಿಯಲ್ಲಿ ನಾವು ಇಲ್ಲವೆಂದರೇ ಸ್ವಾತಂತ್ರ್ಯದ ಅರ್ಥವೇಕೆ ಎಂದು 'ನೋವಿ'ನಿಂದ ವ್ಯವಸ್ಥೆಯನ್ನು ಪ್ರಶ್ನೆ ಮಾಡುತ್ತ ಪ್ರತಿಭಟಿಸುತ್ತಿದ್ದಾರೆ.

ದಲಿತ ಸಮುದಾಯಕ್ಕೆ ಜಾತಿ ಅಸಮಾತೆಯ ನೋವಿನಾಳದ ಪರಿಣಾಮ ಹೇಗಿದೆ ಎಂದರೇ, ವ್ಯವಸ್ಥೆಯು ಆಂತರಿಕವಾಗಿ ದಲಿತರ ಶೀಲದ ಮೇಲೆ ಅಗಾಧವಾದ ನೋವುಂಟು ಮಾಡುವ, ಆಶ್ಲೀಲ ಮಾತುಗಳಿಂದ ಹೀಯಾಳಿಸುವ ಸಾಲುಗಳು 'ಚಟ್ಟ ತೊಟ್ಟಿಲ ಭೂಮಿ'ಯಲ್ಲಿ ಅನಾವರಣಗೊಂಡಿದೆ.

ಕುಡಗೋಲಿನ ಆ ಕೆಂಪು ಸೀರೆಯಲ್ಲಿ
ನಿನ್ನ ಮುಟ್ಟಿನ ರಕ್ತ ಯಾವುದು, ನಿನ್ನ ರಕ್ತ ಯಾವುದು
ನಿನ್ನ ಮಕ್ಕಳ ರಕ್ತ ಯಾವುದು
ಮಲ ಮಕ್ಕಳ ರಕ್ತ ಯಾವುದು ಹೇಳಬಲ್ಲೇಯೇನು?
ತಾಯೇ, ಇದು ಕ್ಲಾಸ್‌ವಾರ್ ಅಲ್ಲ; ಕ್ಯಾಸ್ಟ್‌ವಾರ್
ಕಡಲು ಬತ್ತಿದರೂ ಕಡಲ ನೆಲ ಬತ್ತದು

(ಅರವಿಂದ ಮಾಲಗತ್ತಿ, ಮೂರನೆಯ ಕಣ್ಣು, 1996, ಪುಟ 03)

ಇಲ್ಲಿನ ಸಾಲುಗಳಲ್ಲಿ ಆರೋಗ್ಯಕರ ಮನಸ್ಸುಗಳ ಆತಂಕ, ನೋವು, ವಿಷಾದ, ಗಂಭೀರತೆ, ತನ್ನ ಸಂಕಟ ಹೇಳಿಕೊಳ್ಳಲು ತಾಯಿ ಮಡಿಲು,

ಎಲ್ಲಾ ಕೊಂಡಿಯಂತೆ ಬೆಸೆದುಕೊಂಡಿದೆ. ಒಂದು ಕಡೆ ಸಲ್ಲದ ವಿಷಯಕ್ಕೆ ಗೊಂದಲವಿದ್ದರೆ, ಮತ್ತೊಂದೆಡೆ ಜಾತಿ, ಮತಗಳೆಂಬ ಅನಿಷ್ಟಗಳು ಅಪಾಯಕಾರಿ ಪರಿಣಾಮ ಬೀರಿರುವುದು ಗೋಚರಿಸುತ್ತದೆ. ವ್ಯವಸ್ಥೆಯಿಂದ ಸಮುದಾಯಕ್ಕೆ ಕನಸು ಕಾಣಲು ಬಿಡದೆ, ನಿರಂತರ ಹೊಸಕಿ ಹಾಕುವುದರ ಮೂಲಕ ಶೋಷಿಸಿ, ಕನಸು ಕಾಣುವ ಶಕ್ತಿಯನ್ನು ಕಸಿದುಕೊಂಡು, ಅವರನ್ನು ನಿರ್ವಿಕಾರಗೊಳಿಸಿತು. ಒಂದರ್ಥದಲ್ಲಿ ಕನಸು ಕಾಣುವುದೊಂದು ಕನಸಾಗಿಯೇ ಉಳಿದು ಬಿಟ್ಟಿರುವುದನ್ನು 'ಕನಸು ಕಾಣಲು ಬಿಡಿ' ಎಂಬ ಕವಿತೆಯಲ್ಲಿ ಮುದ್ರಿತವಾಗಿದೆ.

ಕನಸುಗಳ ನಿಷೇಧಿಸಬೇಡಿ, ಇವು ನಾಳಿನ ವಾಸ್ತವಗಳು
ಕನಸು ಕಾಣುವ ಕಣ್ಣುಗಳ ಕೀಳಬೇಡಿ, ಸೂರ್ಯೋದಯ
ಸೂರ್ಯಾಸ್ತವಾದೀತು
ಕನಸುಗಳ ಕತ್ತರಿಸಬೇಡಿ, ಪರಿಮಳದ ಪ್ರಪಂಚ
ಬರಡಾಗುತ್ತದೆ. ಬೆಳೆಯಲು ಬಿಡಿ ಕನಸುಗಳ
ಬೆಳೆದ ವನಗಳು ನೆರಳು ನೀಡುತ್ತವೆ
ನನ್ನ ಕನಸು ಕಾಣಲು ಬಿಡಿ

(ಹನುಮಂತಯ್ಯ ಎಲ್., ಕಳ್ಳಿ ಹಾಡಿನ ಕಡಲು, 2009, ಪುಟ 174)

ದಲಿತರಿಗೆ ಭವಿಷ್ಯದ ಬಗ್ಗೆ ಚಿಂತಿಸುವ ಅವಕಾಶಗಳನ್ನು ಕಿತ್ತುಕೊಂಡಿದ್ದರೆಂಬ ಅಂಶ ಇದರಿಂದ ಬಯಲಾಗುತ್ತದೆ. ಭವಿಷ್ಯದಲ್ಲಿ ನಾವು ಉನ್ನತ ಸ್ಥಾನಕ್ಕೆರಿದರೆ ಅದರಿಂದ ಉತ್ತಮ ಸಮಾಜ ಕಾಣಲು ಸಾಧ್ಯವೆಂದು ಕಾವ್ಯದ ಮೂಲಕ ಹೇಳಿದ್ದಾರೆ. ಇಲ್ಲಿ ವ್ಯವಸ್ಥೆಯ ನೀಚ ಕೃತ್ಯ, ಭಾವುಕ ನೆಲೆಯಲ್ಲಿ ಅಲಕ್ಷಿತ ಸಮುದಾಯದ ನೋವು, ಆದ ನೋವಿಗೆ ಆಕ್ರೋಶದೊಳಗೆ ಸೌಜನ್ಯವಾಗಿ ಮತ್ತೊಂದು ಆಕಾಂಕ್ಷೆಯ ಕುಡಿಯಾಗಿ ಒಡಮೂಡಿದೆ. ಕವಿ ಸಮುದಾಯದ ಸ್ಥಿತಿ–ಭವಿಷ್ಯದ ಬಗ್ಗೆ, ಹೀನ ಸ್ಥಿತಿಗೆ ದೂಡಿದ ಚರಿತ್ರೆಯ ಬಗ್ಗೆ ಗಾಢವಾಗಿ ಚಿಂತಿಸಿದಂತೆ ಭಾಸವಾಗಿದೆ.

ಜೀವನವೆಂಬ ರಣರಂಗದಲ್ಲಿ ವ್ಯವಸ್ಥೆಯ ಯುದ್ಧ ಬಾಣಗಳು 'ಜಾತಿ' ಎಂಬ ವಿಷ ಬೆರೆಸಿ, ಅಮಾನುಷವಾಗಿ ಸಮುದಾಯದವರ ಮೇಲೆ ಪ್ರಯೋಗಿಸಿದಾಗ, ಅದರ ಫಲಿತಾಂಶ 'ಜೀತ' ಎಂಬ ಕುಣಿಕೆಗೆ ತಲೆಕೊಟ್ಟು,

ಸಾಯದೇ ನೋವಿನ ಬಾಂಡಲಿಯಲ್ಲಿ ಬೇಯುವುದನ್ನು 'ಅಪ್ಪಾ ಎಂಬ ಜೀತ ಕವಚ'ದಲ್ಲಿ ಹೆಪ್ಪುಗಟ್ಟಿದೆ.

ರಣರಂಗದಲ್ಲಿ ಅವರೆಂದೂ
ಯುದ್ಧ ನೀತಿಯ ಪಾಲಿಸಿದವರಲ್ಲ
ಅವರೆಸೆಯುತ್ತಿದ್ದ ಬಾಣಗಳು ಚುಚ್ಚಿ
ದೇಹ ತೂತುಗಳಾಗಿ ರಕ್ತ ಸೋರುತ್ತಿದ್ದಾಗ
ಪ್ರತಿತೊಟ್ಟನು ಹೆಪ್ಪುಗಟ್ಟಿಸಿ ಜೀವ ಉಳಿಸಿದ
ಜೀವಂತ ಹೆಪ್ಪುಮುನಿ ನೀನು

(ಹನುಮಂತಯ್ಯ ಎಲ್., ಕಳ್ಳಿ ಹಾಡಿನ ಕಡಲು, 2009, ಪುಟ 26)

'ವ್ಯವಸ್ಥೆ'ಯ ವರ್ತನೆ, ಅನೀತಿ ಅಂಶಗಳನ್ನು ಕವಿ ವಿವರಣೆ, ಉದಾರಣೆ ಕೊಡುತ್ತ ಪ್ರತಿಭಟಿಸುತ್ತಿದ್ದಾರೆ. ವ್ಯವಸ್ಥೆಯ ಮಾನವತೆಯ ಧರ್ಮವನ್ನು ಬಾಯಿ ಮಾತಲ್ಲಿ ಮಾತ್ರ ಪಠನ ಮಾಡಿ, ಒಳಗೆ ದಲಿತರನ್ನು ಅಮಾನುಷವಾಗಿ, ಹೀನವಾಗಿ, ನರಮೇಧ ಮಾಡಿರುವುದನ್ನು ಈ ಸಾಲುಗಳು ತಿಳಿಸುತ್ತವೆ. ಇಂಥ ಸಂದರ್ಭದಲ್ಲಿ ನೊಂದು, ಬೆಂದು, ನರಳಿದರೂ ತಮ್ಮ ಜೀವವನ್ನು ಬಿಗಿ ಹಿಡಿದು, ತಮ್ಮ ಮಕ್ಕಳ ಕಾಲಕ್ಕೆ ನೋವಿನ ಮಾದರಿಗಳಾಗಿ ನಿಂತಿದ್ದಾರೆ.

ದಲಿತರ ಹೊರತು ಇತರರಿಗೆ 'ನೋವು' ಎಂಬುದು ಕೇವಲ ಜೀವನದ ಒಂದು ಬಿಡಿ ಅಂಶದಂತೆ ಭಾಸವಾಗಿದ್ದರೆ, ದಲಿತರ ಪಾಲಿಗೆ ಜೀವನವೇ ನೋವಾಗಿತ್ತು. ವ್ಯವಸ್ಥೆಯ ಬಗೆಗಣ ಅಸಮಾಧಾನವೆ ಇದಕ್ಕೆ ಕಾರಣವಾಗಿದೆ. ದಲಿತರ ನೋವು ಸಂಪ್ರದಾಯಕವಾಗಿ, ಇಂದಿಗೂ ಆಧುನಿಕಾರ್ಥದ ರೂಪಪಡೆದು ನಿಂತಿದೆ. ಈ ಯಾತನಾಮದ ಬದುಕಿನ ನೋವನ್ನು 'ಎಷ್ಟು ದಿನ ಕಾಯೋಣ? ಎಂಬ ಕವಿತೆ ಶೋಧಿಸುತ್ತದೆ.

ನಮ್ಮ ತಾತ ಮುತ್ತಾತರು
ಮಣ್ಣಿನ ಕಣಕಣದ ಕಣ್ಣೀರಲಿ
ಕಲಸಿ, ಎಂಟೆ ತೊಂಟೆಗಳ ಬೆರೆಸಿ
ಕಟ್ಟಿರುವ, ಇಪ್ಪತ್ತೈದು ಅಂಕಣದ
ಎಂಟು ಬಾಗಿಲಿನ ಈ ಮನೆಯ
ಜಂತೆ ಜಂತೆಗಳಲ್ಲಿ ತೊಲೆಗಂಬ

ರಿಪೀಸುಗಳಲ್ಲಿ ನಮ್ಮದೂ ಪಾಲಿದೆ
ಅದಕ್ಕೆ ತಲೆಬಾಗಿಲು ತಳ್ಳಿ
ಅಂಗಳದಿ ಬಂದು ನಿಂತಿದ್ದೇವೆ.
ಹೇಳು! ಇನ್ನೆಷ್ಟು ದಿನ
ಕಾಯುತ್ತಾ ನಿಲ್ಲೋಣ

(ಹನುಮಂತಯ್ಯ ಎಲ್., ಕಳ್ಳಿ ಹಾಡಿನ ಕಡಲು, 2009, ಪುಟ 174)

ದಲಿತರ ನೋವು ಆಧುನಿಕ ಯುಗಕ್ಕೆ ಸಂಪ್ರದಾಯಿಕವಾಗಿ ಬಂದಿದ್ದರಿಂದ, ಇದನ್ನು ಪ್ರಶ್ನೆಸುವ ಮೂಲಕ ಪ್ರತಿಭಟನೆಗೆ ತಿರುಗಿದೆ. ನಾಡನ್ನು ಕಟ್ಟುವಲ್ಲಿ ನಮ್ಮ ಪಾಲು ಅಪಾರವಾಗಿದ್ದು, ಶ್ರಮ ನಮ್ಮದಾಗಿದ್ದು, ಏನು ಮಾಡದ 'ವ್ಯವಸ್ಥೆ'ಗೆ ಏಕೆ ಪಾಲು? ಎಂದು ಸಾಮಾಜಿಕವಾಗಿ, ನೊಂದವರಿಗಾಗಿ ಈ ಕವಿತೆ ಪ್ರತಿಭಟಿಸುತ್ತದೆ. ಸಾಮಾಜಿಕ ಜೀವನದಲ್ಲಿ 'ವ್ಯವಸ್ಥೆ'ಯ ನ್ಯಾಯವೇ ಅಂತಿಮವಾಗಿದ್ದು, ಅವರು ಹೇಳಿದ್ದನ್ನು ಸ್ವೀಕರಿಸುವುದರಲ್ಲಿಯೇ ವ್ಯವಸ್ಥೆ ಅಡಕವಾಗಿರುವಾಗ, ಇದನ್ನು ಪ್ರತಿಭಟನೆಯ ಮೂಲಕ, ಪ್ರಶ್ನಿಸುವ ಪ್ರಯತ್ನ ಈ ಸಾಲುಗಳಲ್ಲಿ ನಡೆದಿದೆ.

ತನ್ನ ಅನುಭವಕ್ಕೆ ದಕ್ಕದ ಶೋಷಣಾ ವಿವರಗಳನ್ನು ಬೇರೆಯವರಿಗೆ ತಿಳಿಯಪಡಿಸುವುದೊಂದೇ ದಲಿತ ಕವಿಗಳ ಜವಾಬ್ದಾರಿಯಾಗಿರದೆ, ನೋವುಂಡವರ, ಕೆಳಗೆ ಬಿದ್ದವರ ದನಿಯಾಗುವ ಜವಾಬ್ದಾರಿ ಹೊತ್ತಿರುವುದು 'ಬೆಳಕು ಹೊತ್ತವರ ಕಾಲು ಕತ್ತಲೆ' ಎಂಬ ಕವನದಲ್ಲಿ ಕಂಡು ಬರುತ್ತದೆ.

ಬೆಳಕಿನ ದಾರಿ ಹಿಡಿದು
ನಡೆಯುವವರೆಗೆ ಕಣ್ಣು ಕತ್ತಲೆ
ಬೆಳಕು ಹೊತ್ತವರ ಬರಿಗಾಲು
ಮುಂದೆ ಮುಂದೆ
ಚಪ್ಪಲಿ ಮೆಟ್ಟಿದ ಗೌಡನ ಕಾಲು
ಹಿಂದೆ ಹಿಂದೆ

(ಸುಬ್ಬು ಹೊಲೆಯರ್, ಸೂಜಿಗಾತ್ರದ ಕೊಳವಯಿಂದ ಮನುಷ್ಯನೊಬ್ಬನ ಹಾಡು,2003, ಪುಟ 13)

ಯಜಮಾನ ಸಂಸ್ಕೃತಿಯೊಂದು ತನ್ನ ಕಣ್ಣ ಕತ್ತಲು ಮಾಡಿಕೊಂಡು ಶೋಷಣೆ ಮಾಡಿರುವುದು, ದಲಿತ ಸಮುದಾಯವು ಬರಿಗಾಲಿನಲ್ಲಿ ಯಜಮಾನನಿಗೆ ಬೆಳಕು ಹಿಡಿದು ಅನುಭವಿಸಿದ ನೋವಿನ ಶೋಷಣೆಯನ್ನು ಇಲ್ಲಿ ಕಾಣಬಹುದು.

ಇಲ್ಲಿ ಪ್ರತಿಭಟನೆಯ ಅಬ್ಬರವಿಲ್ಲದಿದ್ದರೂ, ತನ್ನವರ ಸ್ಥಿತಿಯ ಬಗ್ಗೆ ಪಿಸುಗುಡುತ್ತಿದ್ದಾರೆ. ಚಪ್ಪಲಿ ಯಜಮಾನ ಸಂಸ್ಕೃತಿಯ, ಬರಿಗಾಲು ದಲಿತ ಸಂಸ್ಕೃತಿಯ ಸಂಕೇತಗಳಾಗಿದ್ದು, ಬೆಳಕು ಎನ್ನುವುದು ನೋವನ್ನು ಮರೆಸುವ ಅಸ್ತ್ರವಾಗಬೇಕೆಂಬ ಆಶಯ ಕಾಣಬಹುದು. ದಲಿತ ಕಾವ್ಯಗಳ ಗುಣವೆಂದರೆ, ಕೆಳ ಸಮುದಾಯವರಿಗೆ ಜಾತಿಯಿಂದಾದ ನೋವಿನ ದಟ್ಟ-ಧಾರುಣ ಸ್ಥಿತಿಯನ್ನು ಶಮನಾ ಭಾವವಾಗಿ, ಅದೇ ಸಮುದಾಯದಲ್ಲಿ ಅಡಗಿರುವ ನೈತಿಕ ಶಕ್ತಿ, ಕನಸುಗಳನ್ನು ಹೊರತಲು ಮಾಡುವ ಯತ್ನ, ಇದನ್ನು 'ಆಕಾಶವನ್ನು ಅಳೆಯಲು ಹೆಜ್ಜೆಗಳನ್ನು ಬಳಸಬೇಡಿ' ಎಂಬ ಕವಿತೆಯಲ್ಲಿ ಸಾಕಾರಗೊಂಡಿದೆ.

ಕಾರಣಗಳಿಲ್ಲದೆ ಗದರ ಬೇಡ ದರ್ಪವೇ
ವಿನಯದ ಲೋಕವಿದೆ ಸದಾ ನೋಯುವ ಪಾದದ ಹಾಗೆ
ಮಾತು ಮುಕ್ಕಳಿಸಿ ಉಗಿಯ ಬೇಡ
ಮಲಿನವಾಗುತ್ತದೆ ಗಾಳಿ
ತಲೆ ತಗ್ಗಿಸಿ ಕೈ ಕಟ್ಟಿಸಬೇಡ
ಮೇಲು ಪಂಚಾಯ್ತಿಕೆಯನ್ನು ನಿಲ್ಲಿಸುವ
ಸುನಾಮಿ ಬಂದರೂ ಬರಬಹುದು

(ಸುಬ್ಬು ಹೊಲೆಯರ್, ಎಲ್ಲರ ಬೆರಳಲ್ಲೂ ಅಂಟಿಕೊಂಡ ದುಃಖವೆ, 2013, ಪುಟ 16)

ವಿನಾಕಾರಣ ಶೋಷಣೆ ನೀಡಿದ 'ವ್ಯವಸ್ಥೆ'ಗೆ ಎಚ್ಚರಿಕೆಯನ್ನು ನೀಡುವ ಸಾಲುಗಳಿವು. ದಲಿತರು ರೊಚ್ಚಿಗೆದ್ದರೆ 'ಸುನಾಮಿ'ಯಂತೆ ಇಲ್ಲವನ್ನು ನಾಶಮಾಡುತ್ತರೆಂಬ ಸೂಚನೆಯನ್ನು ನೀಡುತ್ತಿದ್ದಾರೆ. ಇಲ್ಲಿನ ಸಾಲುಗಳು ಮೌನವನ್ನು ಬಿಟ್ಟು ಮಾತನ್ನು, ಉಸಿರನ್ನು ಬಿಗಿ ಹಿಡಿದ ಶಬ್ದವನ್ನು ಅಪ್ಪಿಕೊಳ್ಳುವಲ್ಲಿ, ನೋವು ಮರೆತು ಎಚ್ಚರಿಕೆ ನೀಡುವಲ್ಲಿ ಸಮರ್ಥವಾಗಿವೆ. ತನ್ನ ಬಳಗಕ್ಕಾದ ನೋವಿನ ನಡುವೆಯು ವ್ಯವಸ್ಥೆಯನ್ನು ಧಿಕ್ಕರಿಸಿ, ಹಿಂದೆ ಕಾರಣಗಳಿಲ್ಲದೆ ಮಾಡಿದ ಶೋಷಣೆಯ ಅನಾವರಣಕ್ಕೆ ಇಲ್ಲಿನ ಸಾಲುಗಳು ವೇದಿಕೆಯಾಗಿವೆ.

ದಲಿತ ಕವಿಗಳೋ ಅಥವಾ ದಲಿತ ಕಾವ್ಯಗಳೋ ಕೇವಲ ಬೈಯುವುದಕ್ಕೆ ಸೀಮಿತವಾಗದೆ, ದಲಿತ ಲೋಕದ ಒಳಗಿನ ಸಂಗತಿಯನ್ನು ಅನಾವರಣ ಮಾಡುವಂತಾಗಿ, ತಮಗಾದ ನೋವಿನ ಅನುಭವ,

ಅಭಿವ್ಯಕ್ತಿಯನ್ನು ಕ್ರಾಂತಿಕಾರಿಯಾಗಿ ಜೋಡಿಸಲು 'ಅದುಮಿಟ್ಟ ಕೊರಳು' ಎಂಬ ಕವಿತೆ ಉದಾಹರಣೆಯಾಗಿದೆ.

ದುಡಿಯಲಿಲ್ಲ ದಣಿಯಲಿಲ್ಲ
ದಾನವಂತೂ ಕೂಡಲೇ ಇಲ್ಲ
ಜನ–ಜಾನುವಾರುಗಳ ಮುಟ್ಟಿ ಮೈದಡವರಿಲ್ಲ
ಮೇಲು ಕೀಳುಗಳ ಮೆಟ್ಟಿ ನಿಲ್ಲಲಿಲ್ಲ
ತುಳಿದು ಆಳಿದ್ದು ಸಾಕು
ಆಳಿಸಿ ಬಾಳಿದ್ದು ಸಾಕು

(ಲಲಿತಾ ನಾಯಕ್ ಬಿ.ಟಿ., ಒಡಲ ಬೇಗೆ, ಪುಟ 23)

ತನ್ನವರ ನೋವಿಗೆ ಮೇಲ್ಜಾತಿ ಅಥವಾ ಮೇಲ್ವರ್ಗವೇ ಕಾರಣವೆಂದು ಪ್ರತಿಕ್ರಿಯಿಸುವುದರಲ್ಲಿ ಮಗ್ನರಾಗುವಂತೆ ಕಂಡು ಬಂದಿದೆ. ವ್ಯವಸ್ಥೆಯು ನೋವು ಪಡದೇ, ಸಮುದಾಯಕ್ಕೆ ನೋವಿನ ಸರಪಣಿಯನ್ನೇ ಬಿಗಿದು, ಸಂಕಟ ಕೊಟ್ಟಿರುವುದು, ದಲಿತರನ್ನು ಜಾನುವಾರುಗಳಿಗೆ ಸಮ ಮಾಡಿ, ಜಾತಿ ತಾರತಮ್ಯದ ಬಲೆಯಲ್ಲಿ ಸಿಲುಕಿಸಿದ್ದನ್ನು ತಡೆಯಲು 'ತುಳಿದು ಆಳಿದ್ದು ಸಾಕು, ಅಳಿಸಿ ಬಾಳಿದ್ದು ಸಾಕು' ಎಂದು ವ್ಯವಸ್ಥೆಯಿಂದಾದ ನೋವನ್ನು ಪ್ರತಿಭಟಿಸುತ್ತಿದ್ದಾರೆ.

ಇಂದಿನ ಶತಮಾನದ ಜಾಗತೀಕರಣದ ಸನ್ನಿವೇಶದಲ್ಲಿ ದೇಶ ಅಗಾಧವಾಗಿ ಮುಂದುವರೆದು, ಬದಲಾವಣೆಯ ಅಂಕಿ ಅಂಶದಲ್ಲಿದ್ದರೂ, ದಲಿತ ಸಮುದಾಯಕ್ಕೆ ಹಿಂದಿನಿಂದ ಬಂದ ಸಂಕಟಗಳು ಮಾತ್ರ ಕಡಿಮೆಯಾಗಿಲ್ಲ ಎಂಬ ಕಟು ವಾಸ್ತವದ ಮನೋ ವೇದನೆ 'ಊಟ ಮತ್ತು ಕಂಬಾಲಪಲ್ಲಿ' ಎಂಬ ಪದ್ಯದಲ್ಲಿ ನಿರೂಪಿಸಲಾಗಿದೆ.

ಗೂಳಿಯಂತೆ ನುಗ್ಗಿದರು, ಚಿಲಕ ಹಾಕಿ
ಬೆಂಕಿಯಂತೆ ಚೆಲ್ಲಿದರು ಮನೆಗಳಿಗೆ
ಕಾದು ಕೆಂಪಾದ ಹಂಚಿಗೆ ನೀರು ಬಿದ್ದಂತೆ
ಉರಿಯೊಡನೆ ಉರಿಯ ತೊಡಗಿದರು ನನ್ನ ಬಳಗ

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 82)

ನೋವಿನ ಸಂಗತಿಗಳ ಅನಾವರಣವನ್ನು, ನೈಜತೆಯೊಂದಿಗೆ ಕಟ್ಟುಕೊಟ್ಟು, ಇದಕ್ಕೆ ಕಾರಣರಾದವರನ್ನು ಪ್ರತಿಭಟಿಸುತ್ತಿದ್ದಾರೆ.

ನೈಜ ಘಟನೆಯೊಂದರಲ್ಲಿ ನರಳಿದ, ಸಮುದಾಯಕ್ಕಾದ ದೌರ್ಜನ್ಯದ ಚಿತ್ರಣವನ್ನು ಕಾವ್ಯವಾಗಿಸಿದ್ದಾರೆ.

ಸಂಕಟದ, ವಿಷಾದದ, ಆತಂಕದ, ಭಾವ ತೀವ್ರತೆ ಇಲ್ಲಿ ಹೆಪ್ಪುಗಟ್ಟಿದೆ. ತನ್ನ ಸಮುದಾಯದವರು ದೌರ್ಜನ್ಯಕ್ಕೀಡಾದರೂ, ತಮ್ಮನ್ನು ಸುಡುವ ಬೆಂಕಿಯನ್ನೇ ಪ್ರತಿರೋಧದ ಕಾವಾಗಿ ಸಂಕೇತಿಸಿದ್ದಾರೆ. ದಲಿತರ ನೋವಿಗೆ ದಲಿತರಲ್ಲಿರುವ ಅಸಹಾಯಕತೆ ಮೂಲ ಕಾರಣವಾಗುತ್ತದೆ. ದಲಿತ ಎಂಬ ಶ್ರಮಿಕರ ಬದುಕು, ಭೂ ಮಾಲೀಕರ ಹೊಲಗದ್ದೆಗಳಲ್ಲಿ ಬಿಸಿಲು, ಮಳೆ, ಚಳಿ ಎನ್ನದೆ, ಬೆವರು, ರಕ್ತ ಬಸಿದು ದುಡಿದರೂ ಕೊನೆಗೆ ಅವರಿಗೆ ಸಿಕ್ಕ ಪ್ರತಿಫಲವೆಂದರೆ ನಿಟ್ಟುಸಿರೊಂದೆ. ಬದುಕಿನ ಅಸ್ತಿತ್ವಕ್ಕಾಗಿ ಕೂಲಿ ಮಾಡುವ ದಲಿತ ಸಮುದಾಯ ಬೆಳ್ಳಿ ಬೆಳೆ ಬೆಳೆದರೂ, ಹಸಿವಿನಿಂದ ನರಳಿ ನೋವನ್ನು ಹಾಸಿ ಮಲಗಿದ ದುರಂತವನ್ನು 'ಹಗಲುಗನಸಿನ ಕೂಸು ಹಡೆದವ್ವ'ದಲ್ಲಿ ಕಾಣಸಿಗುತ್ತದೆ.

ಉಳ್ಳವರ ಹೊಲ ಗದ್ದೆಗಳಲ್ಲಿ ಗೇದು
ಇರುಳೆಲ್ಲ ಮೈನೋವಿಗೆ ನೊಂದು
ಉತ್ತಮರ ಕಣಜಗಳ ತುಂಬಿದವಳು
ಸೆರೆಗೊಡ್ಡಿ ಬೇಡಿ ಹೊಟ್ಟೆ ಹಿಡಿದವಳು

(ಮುನಿವೆಂಕಟಪ್ಪ ವಿ., ಕಾಡು ಕಣಿವೆಯ ಹಕ್ಕಿ, 1999, ಪುಟ 23)

ಕವಿ ದಲಿತ ಸಮುದಾಯದ ದುರಂತ ಸ್ಥಿತಿಯನ್ನು ಹೆಣ್ಣಿನ ಪ್ರತಿಮೆಯ ಮೂಲಕ ಕಟ್ಟಿಕೊಡುತ್ತಾರೆ. ಶ್ರಮಿಕರು ಎಂಬ ಹಣೆ ಪಟ್ಟಿ ಪಡೆದ ದಲಿತರು ನೋವು, ಸಂಕಟ ಅನುಭವಿಸಿದನ್ನು ಕವಿ ತಮ್ಮ ತಣ್ಣನೆಯ, ವಿಷಾದದ ಮಾತುಗಳಿಂದ ಸ್ವಾಭಿಮಾನತೆಯನ್ನು ಎಚ್ಚರಿಸುವ ಪ್ರಯತ್ನ ಮಾಡಿದ್ದಾರೆ.

ಜೀತ ಪದ್ಧತಿ, ಸಾಲದ ಶೋಷಣೆ, ನೋವಿನ ನೊಗ ಹೊತ್ತ ದಲಿತನೊಬ್ಬ ಮೇಲಿನವರ ಶೋಷಣೆ, ದಬ್ಬಾಳಿಕೆ, ಅಸಹನೀಯ, ಅಸಹಾಯಕ ತನದಿಂದ ಬದಲಾವಣೆ ಬಯಸುತ್ತ, ತನ್ನ ನೋವಿನ ನಿವಾರಣೆಗೆ ಹೊಸ ವಸಂತವನ್ನು ಬಯಸುತ್ತಿರುವುದು 'ಪಲ್ಲವಿಸು ಬಾ ವಸಂತ' ಎಂಬ ಪದ್ಯದಲ್ಲಿ ಬಿಂಬಿತವಾಗಿದೆ.

ಎದೆ ತುಂಬ ನೋವುಗಳ
ಹೊತ್ತವರ ಅಂಗಳಕೆ
ಮೈ ತುಂಬ ನೋವುಗಳ

ಉಂಡವರ ಬಾಗಿಲಿಗೆ
ಪಲ್ಲವಿಸು ಬಾ ವಸಂತ
ಬದುಕೆಲ್ಲ ಸವೆಸಿ
ಹೋದವರ ಅಂಗಳಕೆ
ಹಸಿ ಹಸಿ ಕನಸುಗಳ
ಹೊತ್ತವರ ಬಾಗಿಲಿಗೆ
ಪಲ್ಲವಿಸು ಬಾ ವಸಂತ
(ಮುನಿವೆಂಕಟಪ್ಪ, ಸ್ವಾಭಿಮಾನದ ಬೀಡಿಗೆ, 1996, ಪುಟ 27)

'ವಸಂತ' ಹೊಸತನ್ನು ತರುವ ಸಂಕೇತ. ತನ್ನವರು ಜೀವನ ಪೂರ್ತಿ ಅನುಭವಿಸಿದ ನಾನಾ ಶೋಷಣೆಯನ್ನು ಹೊರ ಹಾಕುವಂತ ವಸಂತ ಬರಲೆಂದು ಕವಿ ಬಯಸುತ್ತಿದ್ದಾರೆ. ಇಲ್ಲಿ ನೋವುಂಡವರ ಪರವಾಗಿ ನಿಂತು ಪ್ರತಿಭಟಿಸುತ್ತಿದ್ದಾರೆ. ಇಲ್ಲಿನ ಸಾಲುಗಳಲ್ಲಿ ಎಂಥ ನೋವಿದ್ದರೂ, ಉಳ್ಳವರು ಎಂಥ ಶೋಷಣೆ ಕೊಟ್ಟರೂ ಕಣ್ಣೀರೊರಸಿಕೊಂಡು ಹೊಸ ಬದುಕಿನ, ಬೆಳಕಿನ ಆಶಾಕಿರಣವನ್ನು ಚಿಮ್ಮಿಸುವ ಸಾಹಸದ ಸಾಲುಗಳಿವೆ. ಬದುಕು, ದುಡಿತ, ಒಲವು, ಚೆಲುವಿನ, ಅಂತರಾಳದಲ್ಲಿ ಹರೆಯ, ದಟ್ಟವಾದ ಅನುಭವಗಳ ಜೊತೆ ಏನಾದರೂ ಹೊಸದನ್ನು ಕಟ್ಟುವ ಆಶಾವಾದ, ಹಂಬಲ, ಬಯಕೆ ಈ ಕವನದ ಸಾಲುಗಳಲ್ಲಿ ಅಭಿವ್ಯಕ್ತಗೊಂಡಿದೆ.

ಮನುಷ್ಯರನ್ನು ಕಿತ್ತು ತಿನ್ನುವ ಕ್ರೂರ ಪದ್ಧತಿ ಎಂದರೆ 'ಜಾತಿ'. ನಗರಗಳಲ್ಲಿ ಕೊಳಚೆ ಪ್ರದೇಶದ ಶ್ರಮ ಜನರ ಬದುಕಿನ ಗತಿಯನ್ನು, ಅಸಹಾಯಕರ ಮೇಲೆ ನಡೆದ ದೌರ್ಜನ್ಯವನ್ನು 'ಆಕಾಶದ ಏಕಾಂತ ಧ್ವನಿ' ಎಂಬ ಪದ್ಯದಲ್ಲಿ ಕಾಣಬಹುದು.

ಅದೋ ನಿನ್ನ ಹೃದಯದಲ್ಲಿ ಚೀರಿಡುತ್ತಿವೆ ದುಃಸ್ವಪ್ನರಾಶಿ
ಎಲ್ಲೆಲ್ಲು ಕೊನರುತ್ತಿವೆ ದುಃಖ ದಾರಿದ್ರ್ಯದ ಶಾಪಗ್ರಸ್ತ ಹೊಗಲು
ಈಗ ಅರಳುತ್ತಿವೆ ನಿನ್ನ ಕಣ್ಣಿನ ತುಂಬ
ಪಾರ್ಕುಗಳು, ಗಲ್ಲಿಗಳು, ನಿನ್ನೊಡಲ 'ಸ್ಲಮ್'ಗಳು
ಹಿಡಿ ಅನ್ನಕ್ಕೆ "ಸೂಳೆಯ'ರಾಗಿ ಯಾರದೋ ಹಾಸಿಗೆಗಳಲ್ಲಿ
ಕೊಳೆತು ನಾರುತ್ತಿರುವ ಹೂಮೊಗದ ಹುಡುಗಿಯರು
ಓಹ್! ಇದು ಮುಗಿಯದ ನೋವಿನ ಮೆರವಣಿಗೆ
(ಮುಳ್ಳೂರು ನಾಗರಾಜ್, ದಾಖಲೆ, 1987, ಪುಟ 47)

ದಲಿತರ ನೋವಿಗೆ ಸರಿಯಾದ ಕಾರಣ ಸಿಗಬಹುದು.

ಅದರೆ ನೋವಿಗೆ ಸರಿಯಾದ ನಿವಾರಣೆ ಸಾಧ್ಯವಿಲ್ಲವೆಂದು ಕವಿ ಉದಾಹರಣೆ ಕೊಡುತ್ತ ಪ್ರತಿಭಟಿಸುತ್ತಿದ್ದಾರೆ. ಉರಿಯುವ ಬೆಂಕಿಗಿಂತ ಸೂಕ್ಷ್ಮ, ತೀಕ್ಷ್ಣವಾದದ್ದು 'ಜಾತಿ'. ಇದರ ನೋವಿನಲ್ಲಿ ನಲುಗಿದವರಿಗೆ ಇದು ಎಂದು ಮುಗಿಯದು ಎಂದಿದ್ದಾರೆ. ಈ ಕವಿತೆಯ ಆಯಾಮವು ವಸ್ತುನಿಷ್ಠವಾಗಿ ಪರಿಚಯಿಸಿ, ವ್ಯವಸ್ಥೆಯು ಸ್ವಾರ್ಥಕ್ಕಾಗಿ ಸೃಷ್ಟಿಸಿರುವ ಜಾತಿ ವ್ಯವಸ್ಥೆಯ ಒಳ ಸುಳಿಗಳ ಕ್ರೂರವನ್ನು ಅನಾವರಣಗೊಳಿಸಿದ್ದಾರೆ. ಹುಟ್ಟಿನಿಂದ ಹೊಲೆ ಮಾದಿಗರಾದವರ ಬದುಕು ಕೊಳೆತ ಹೂವ ನಾರಿನಂತಾಗಿರುವುದನ್ನು ನೋವಿನಿಂದ ಹೇಳುತ್ತಾರೆ. 'ಸ್ಪೃಶ್ಯ'ರ ಶೋಷಣೆಯಿಂದ ಉರಿಬಿಸಿಲಿನಲ್ಲಿ ದುಡಿದ ಅಸ್ಪೃಶ್ಯರ ಸ್ಥಿತಿ ಕೆಟ್ಟು ನಿಂತ ಕಾರಿನಂತಾಗಿದೆ. ಕಾಲ ಬದಲಾದರೂ ವ್ಯವಸ್ಥೆಯ ಅಸಮಾನತೆಯ ಮಾನದಂಡಗಳು ಮಾತ್ರ ಬದಲಾಗದೇ, ದಲಿತ ಸಮುದಾಯವನ್ನು ದುಡಿಸಿ, ದುಡಿಸಿ ನರಳಿಸಿದೆ. ಈ ನರಳುವಿಕೆಗೆ 'ಕಾರು ನಿಂತಲ್ಲೇ ನಿಂತಿದೆ' ಎಂಬ ಕವನದಲ್ಲಿ ದನಿಯಾಗಿದೆ.

ಬದಲಾದ ಚಾಲಕರ ಚಾಲಾಕಿಗೆ
ಚಲಿಸುತ್ತಾ ಚಲಿಸಿ ಉರುಳುತ್ತಾ
ಬೇಸಿಗೆಯಲಿ ಬೇವರುತ್ತಾ
ಚಳಿಗಾಲದಲ್ಲಿ ನಡುಗುತ್ತಾ
ಮಳೆಗಾಲದ ಹನಿಗಳನ್ನೆಲ್ಲಾ
ಒಂದೊಂದಾಗಿ ನುಂಗುತ್ತಾ
ಹಿಂಬದಿಯ ಮುಂಬದಿಯ
ನಂಬರುಗಳ ನಾಚಿಸುತ್ತಾ
ಬಂದವರ ಬೇಡುತ್ತ ಕುಂತವರ
ಕೇಳುತ್ತಾ ಚಾಲನೆಗೆ ಕಾದು
ಕಾರು ನಿಂತಲ್ಲೇ ನಿಂತಿದೆ

(ಹನುಮಂತಯ್ಯ ಎಲ್., ಕಳ್ಳ ಹಾಲಿನ ಕಡಲು, 2009, ಪುಟ 269)

'ಕಾರು ನಿಂತಲ್ಲೇ ನಿಂತಿದೆ' ಎನ್ನುವಾಗ ವ್ಯವಸ್ಥೆ ಎನ್ನುವುದು ಬದಲಾಗಲೇ ಇಲ್ಲ ಎಂಬ ಅರ್ಥವನ್ನು ಉಂಟುಮಾಡಿದೆ. ಈ ಅರ್ಥದ ಜಾಡು ಹಿಡಿದು ಹೊರಟಾಗ ವ್ಯವಸ್ಥೆಯ ಶೋಷಣೆಗೆ ದಲಿತ ಸಮುದಾಯವು ಬೆವರಿ, ನಡುಗಿ, ಹನಿಗಳಾಗಿ ತತ್ತರಿಸಿರುವುದು ಕವಿಗೆ ಗೋಚರಿಸಿದೆ.

'ಬಂದವರ ಬೇಡುತ್ತ ಕುಂತವರ ಕೇಳುತ್ತಾ' ಇದು ದಲಿತರ ಯಥಾಸ್ಥಿತಿಯ, ಅಸಮಾನತೆಯ ನೆರಳನ್ನು ಪ್ರದರ್ಶಿಸಿದೆ. ಒಟ್ಟಿನಲ್ಲಿ ದಲಿತ ಸಮುದಾಯಕ್ಕೆ ವ್ಯವಸ್ಥೆಯಿಂದ ಯಾವುದೇ ಗುರುತರ ಬದಲಾವಣೆಗಳಾಗದೇ ಅಸಮಾನತೆಯ ಒಡಲಲ್ಲಿ ಸಂಕಟ ಪಡುವವರಾಗಿದ್ದಾರೆ.

ದಲಿತರ ನೋವುಗಳಿಗೆ ಕೆಲವೊಂದು ಬಾರಿ ಸರಿಯಾದ ಕಾರಣಗಳೇ ಇರುವುದಿಲ್ಲ. ಸಾಗರದಾಳದಲ್ಲಿ ನೀರು ಬತ್ತಬಹುದು. ಆದರೆ ದಲಿತರ ನೋವಿನ ಸಾಗರ ಎಂದೂ ಬತ್ತುವುದಿಲ್ಲವೆಂಬುದು 'ಬೆಳಕಿಗೇನು ತೀಟೆಯೆ' ಎಂಬಲ್ಲಿ ಕಾಡಿದೆ.

ಮೊಗೆದಷ್ಟು
ಮುಗಿಯದ ನೋವಿನ ವರತೆಗಳು
ಎಣೆ ಇಲ್ಲದ ಸಂಕಟಕೆ
ಹೊಣೆ ಯಾರು?
ಕಾಣುವುದೆಂತು ಕೊನೆ?
ಚಿತ್ತಾರವಾಗಿ ಹೆಣೆದು
ಚಾದರ ಮಾಡಿ ಹೊದೆಯ ಲೋದರೆ
ಥರ ಥರ ನಡುಕ

(ಸರಸ್ವತಿ ದು., ಜೀವ ಸಂಪಿಗೆ, 2006, ಪುಟ 13)

ನೋವಿನ ತೀವ್ರತೆಯನ್ನು ಬಿಚ್ಚಿಟ್ಟಿದ್ದಾರೆ. ನೋವಿಗೆ ಹಿಂದೆ-ಮುಂದೆ, ಮೊದಲು ಕೊನೆ ಎಂಬುವುದಿಲ್ಲ. ಇದರ ಬಂಧ ಮುಕ್ತವನ್ನು ಬಯಸಲು ಸಾಧ್ಯವಿಲ್ಲವೆಂದು, ನೋವನ್ನೇ ಪ್ರತಿಭಟಿಸುತ್ತಿದ್ದಾರೆ. ಕವಿತೆಯ ಹೆಸರಲ್ಲೇ ಕವಯತ್ರಿಗೆ ನೋವಿನ ಶೋಷಣೆ ಉಂಟಾಗಿದೆ. ಸಾಮಾನ್ಯವಾದ ಬೆಳಕು ಕೂಡ ನಮ್ಮ ಬಳಿ ಬರಲು ಹಿಂಜರಿಯುತ್ತಿರುವುದು ನೋವಿಗೆ ಕಾರಣವಾಗಿದೆ. ಕಾರಣವಿಲ್ಲದೆ ಬಂದ ಸಂಕಟಕ್ಕೆ ಅಂತ್ಯವಿಲ್ಲ. ಇಂಥ ಸಂಕಟಕ್ಕೆ ಬಲಿಯಾದ ನಮ್ಮ ಸಮುದಾಯ ಇದರಿಂದ ಬಿಡುಗಡೆ ಸಿಗದಿದ್ದರೇ ಸಂಕಟದಲ್ಲೇ ನರಳ ಬೇಕೆಂಬ ನೋವು ಇಲ್ಲಿ ವ್ಯಕ್ತವಾಗಿದೆ. 'ಅಸ್ಪೃಶ್ಯ' ಎಂಬ ಪದವು ಮುಟ್ಟಬಾರದೆಂಬ ಅರ್ಥವನ್ನು ಸೂಚಿಸುತ್ತದೆ.

ಪದ ಸೌಮ್ಯವಾಗಿದ್ದರೂ ಅದರ ಅರ್ಥ ಭೀಕರವಾಗಿದೆ. ಇದು ಸಾಮಾನ್ಯವಾಗಿ ಕೆಳ ಸಮುದಾಯದವರಲ್ಲಿ ನೋವನ್ನುಂಟು ಮಾಡುತ್ತಿರುವುದಕ್ಕೆ 'ಗಲ್ಲೆಬಾನಿ'ಯಲ್ಲಿ ಒಂದು ನಿರ್ಧಾರಕ್ಕೆ ಬರುತ್ತಾರೆ.

ಈ ದೇಹ ನನ್ನ ದೇಹ ಇಡೀ ದೇಹ
ಮುಟ್ಟಬಾರದೆಂದು ಕೇಳಿ
ಕೇಳಿ ಕೇಳಿ ಕಟ್ಟಕಡೆಗೆ
ಮುಟ್ಟಬೇಕೆಂದು ಅರಿತು
ಕಾಯವನ್ನು ಕಾಯಕದಿಂದ
ವಿಸರ್ಜಿಸಿದೆ
ಮಲಮೂತ್ರ ವಿಸರ್ಜಿಸಿದಂತೆ

(ಸಿದ್ಧಯ್ಯ ಕೆ.ಬಿ., ಗಲ್ಲೆ ಬಾನಿ, 2009, ಪುಟ 01)

ಯಾವ ಉದ್ದೇಶದಿಂದ, ಯಾವ ಕಾಯಕದಿಂದ ನಮ್ಮ ಮೇಲೆ ನಿಷೇದ ಹೇರಿದೆಯೋ ಈ ವ್ಯವಸ್ಥೆ, ಅದಕ್ಕೆ ಒಂದು ತಕ್ಕ ಪಾಠ ಕಲಿಸಬೇಕೆಂದು ನಿರ್ಧಾರಿಸಿ ತಾವು ಮಾಡುವ ಕೆಲಸಕ್ಕೆ ವಿದಾಯ ಹೇಳಬೇಕೆಂದು ಈ ರೀತಿ ಪ್ರತಿಭಟಿಸುತ್ತಿದ್ದಾರೆ.

ವ್ಯವಸ್ಥೆಯು ದಲಿತರನ್ನು ಮುಟ್ಟಿಸಿಕೊಂಡರೆ ಹೇಸಿಗೆ ಪಡುತ್ತಿತ್ತು. ಈ ಸಂಕಟಕ್ಕೆ ವ್ಯಥೆ ಪಟ್ಟು, ಮುಟ್ಟಿದರೆ ಏನಾಗುತ್ತದೆ ಎಂದು ಅರಿತು, ತಮ್ಮ ಕಸುಬನ್ನು ಬಿಡ ಬೇಕೆಂದು ಕವಿ ನೋವಿನಲ್ಲೂ ಅರಿವಿನ ಜಾಗೃತಿ ಮೂಡಿಸಿದ್ದಾರೆ.

ದಲಿತರ ಕಾಯಕವೆಂದರೇ 'ಜೀತ' ಇದನ್ನು ಶಾಶ್ವತವಾಗಿ ಬಿಡಬೇಕು, ನಮ್ಮನ್ನು ಮುಟ್ಟಲು ಹಿಂಜರಿಯುವವರಲ್ಲಿ ನಮ್ಮ ಕೆಲಸ ಏನೂ ಇಲ್ಲವೆಂದು ಈ ನಿರ್ಧಾರಕ್ಕೆ ಬಂದಿದ್ದಾರೆ. ಹುಟ್ಟಿನಿಂದ ಜಾತಿಯ ಕಾರಣಕ್ಕಾಗಿ ಕೀಳಾಗಿ ಕಾಣಲ್ಪಡುವ ದಲಿತರ ಶೋಚನೀಯ ಸ್ಥಿತಿಗೆ ಯಾವುದೇ ತಡೆಗೋಡೆ ಇಲ್ಲ. ಈ ಅಸ್ಪೃಶ್ಯತೆಯನ್ನು ತೊಳೆದುಕೊಳ್ಳಲು ಹೋದಷ್ಟು, ಅದು ಇನ್ನಷ್ಟು ಸಂಕಟ ಕೊಡುವುದನ್ನು 'ಸಂಕಟಕೆ ಗಡಿ ಇಲ್ಲ' ಎಂಬಲ್ಲಿ ಸಾಮಾಜಿಕ ಉದಾಹರಣೆ ಕೊಡುವ ಮೂಲಕ ಸಂಕಟಕ್ಕೆ ಸ್ಪಷ್ಟತೆ ನೀಡುತ್ತದೆ.

ಎರಡೂ ಕಡೆ
ಹರಿದ ನೆತ್ತರೊಂದೆ

ಆದರೂ
ಗಡಿಯ 'ಮ್ಯಾಜಿಕ್'ನಿಂದ
ಜೀವತೆತ್ತವರು
'ವೀರ ಮರಣ' ಹೊಂದಿದರು
ಜೀವ ತೆಗೆದವರು
'ವೀರಯೋಧ'ರಾದರು
ಒಡಲು ಅನುಭವಿಸುವ
ಸಂಕಟಕೆ
ಗಡಿಯೂ ಇಲ್ಲ
ಆಚೆ ಈಚೆಯೂ ಇಲ್ಲ

(ಸರಸ್ವತಿ ದು., ಜೀವ ಸಂಪಿಗೆ, 2006, ಪುಟ 48)

ಇಲ್ಲಿನ ಗಡಿ ದೇಶದ ಗಡಿಯಲ್ಲ. 'ಜಾತಿ'ಯ ಗಡಿ. ಜಾತಿಯ ವಿಚಾರವಾಗಿ ನೋವು ನೀಡಿದವರು ವೀರರಾದರೆ, ನೋವಿನಲ್ಲೇ ಮಡಿದವರು 'ವೀರ' ಮರಣ ಹೊಂದಿದವರ ಸಾಲಿಗೆ ದಲಿತರು ಹೋಗಿದ್ದಾರೆಂದು ಕವಯತ್ರಿ ವಿಷಾದದಲ್ಲಿ ಪ್ರತಿಭಟನೆ ಮಾಡುತ್ತಿದ್ದಾರೆ. ಅಸ್ಪೃಶ್ಯತೆಯ ಕರಾಳತನವನ್ನು ಅನುಭವಿಸಿದ ವ್ಯಕ್ತಿಯ ಮನಸ್ಸಿನ ತಾಕಲಾಟ, ಕವಯತ್ರಿಯ ಕಾವ್ಯದ ವಸ್ತುವಾಗಿದೆ. ಜೀವನದಲ್ಲಿ ಸೋಲು-ಗೆಲುವಿನ ಲೆಕ್ಕಾಚಾರವಿದ್ದು, ಮಂತ್ರವಿದ್ಯೆಯಂತೆ ಅದು ಬದಲಾಗುತ್ತದೆ ಎಂಬ ಜೀವನ ತತ್ತ್ವವನ್ನು ಬಲವಾಗಿ ನಂಬಿದ್ದರು. ಅಸ್ಪೃಶ್ಯರು ಅನುಭವಿಸುವ ನೋವಿಗೆ ಬದಲಾವಣೆ, ಮಂತ್ರಗಾರಿಕೆ ಯಾವುದೂ ಇಲ್ಲ ಎಂಬುದು ಕವಯತ್ರಿಯ ಸಂಕಟವಾಗಿದೆ. ದಲಿತರಿಗೆ ನೋವು ಪವಾಡವೆಂಬಂತೆ ಬಂದುದೇನಲ್ಲ, ಇವರು ಅನುಭವಿಸಿದ ದೈಹಿಕ ನೋವಿಗಿಂತ, ಮಾನಸಿಕ ನೋವು ಅಗಾಧವಾಗಿದೆ. ಪಡೆದ ನೋವು ಹೊರ ನೋಟಕ್ಕೆ ಸಾಮಾನ್ಯದಂತೆ ಕಂಡು, ಅದು ಮನಸಿನಾಳದಲ್ಲಿ ಬೇರಿಟ್ಟಂತಿರುವುದು 'ಸೂಜಿಗದ ಜಗ' ಎಂಬಲ್ಲಿ ವರ್ಣಿತವಾಗಿದೆ.

ಒಪ್ಪತ್ತಿನೂಟಕ್ಕೆ ತಿಂಗಳಿಪ್ಪತ್ತು ದಿನವೂ
ದಣಿದ ದೇಹಕೆ ನೀರುಕಾಯಿಸಿ ಗರಿಕೆ ಬೆರಸಿ
ನೆನೆದ ಮನಸ ತಬ್ಬಿ ಹಿಂಡಿ ಒಣಗಿಸಿ
ನರನರದ ನೋವುಗಳ ಮುರಿದು ಮಾಯಿಸಿದ್ದೆ

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 46)

ಪಟ್ಟ ಕಷ್ಟಕ್ಕೆ, ನೋವಿಗೆ ಮುಲಾಮು ಹಚ್ಚಿ ಸಮಾಧಾನ ಪಡಿಸುವ ಪರಿ ಇಲ್ಲಿದೆ. ಇಲ್ಲಿನ ನೋವು ದಲಿತರ ಮನಸ್ಸಿನಲ್ಲಿ ಮನೆ ಮಾಡಿ ಕೊಲ್ಲುತ್ತಿದೆ ಎಂಬುದು ಕಂಡು ಬರುತ್ತದೆ. ಒಂದೊತ್ತಿನ ಊಟಕ್ಕೆ ವ್ಯವಸ್ಥೆಯ ಮುಂದೆ ಏನ್ನೆಲ್ಲಾ ಕಸರತ್ತು ಮಾಡಬೇಕು ಎಂಬುದು ಕವಿಯ ನೋವು. ತನ್ನ ಸಮುದಾಯದವರು ವ್ಯವಸ್ಥೆಯ ಮುಂದೆ ಪಡುವ ನಾನಾ ಮಾನಸಿಕ ನೋವುಗಳನ್ನು ಇಲ್ಲಿ ಭಿತ್ತರಿಸಿದ್ದಾರೆ. ದಲಿತರಿಗೆ ಇಂತ ನೋವು ಸರ್ವೇ ಸಾಮಾನ್ಯ ಎಂಬ ಅಂಶ ಒಂದು ಕಡೆಯಾದರೆ, ನೋವು ದಲಿತರಿಗಾಗಿ ಮೀಸಲಾಗಿದೆ ಎಂಬುದು ಕವಿಯ ಭಾವನೆಯಾಗಿದೆ. ನೋವಿನ ಅಭಿವ್ಯಕ್ತಿಯಾಗಿ ದಲಿತ ಕಾವ್ಯ ನಿಂತಿದೆ. ಮನುಕುಲ ಮಾಡಿದ ಆಳದ ಗಾಯ, ಆದರ ನೋವು ಘನೀಭವಿಸಿ ಕಲೆಯಾಗಿ ಕಾವ್ಯದ ರೂಪ ಪಡೆದುಕೊಂಡಿದೆ. ದಲಿತ ಸಮುದಾಯದ ನೋವಿನ ಪಾಡು ಹಾಡಾಗಿದೆ. ದಲಿತರ ನೋವಿನ ಒಡಲು, ಕಡಲ ಹಡಗು ಒಂದೇ ಎನ್ನುತ್ತದೆ 'ಒಡಲ ಕಡಲು' ಎಂಬ ಕವನ.

ಭಾವಗಳ ಬಳ್ಳಿಗಳು ನೋವುಗಳ ನೆರಳ ಬಿಲ
ಚಿಗುರು ಭರವಸೆ ಬೇಲಕಾಲ ಒಗರಿನ ಚೀಲ
ದೋಣಿ ಪಯಣದ ದಣಿವು ಬೆವರ ಹರಳಿನ ಶೋಧ
ಸುಳಿಯ ತಿರುಗಣಿಯೊಳಗೆ ತೆರಗಳುಬ್ಬರ ವೇದ
ಧ್ಯಾನ ಗಂಗೆಯಲೀಗ ನಿಜಶರಣ ಕರುಳಿಲ್ಲ
ಭುವಿಯು ಭವಿಗಳ ಮಡಿಲು ನೆತ್ತರಲಿ ಕಡಲು

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 76)

ನೋವಿದ್ದರೂ ಚಿಗುರಬೇಕೆಂದು ಹಂಬಲಿಸಿ, ನೋವಿನ ಪಯಣದಲ್ಲಿ ದಣಿದರೂ, 'ಜಾತಿ' ಸುಳಿಯಲ್ಲಿ, ಶೋಷಣೆಯ ಅಬ್ಬರದಲ್ಲಿ ಸಿಕ್ಕಿದರೂ, ತಮ್ಮ ಬಗ್ಗೆ ಗಮನಿಸುವ ಕರುಳಿಲ್ಲ. ನೋವಿನ ಕಡಲಿನಲ್ಲೇ ನಮ್ಮ ಮಡಿಲು ಎಂಬ ವೇದನೆಯಲ್ಲಿ ಪ್ರತಿಭಟಿಸುತ್ತಿದ್ದಾರೆ.

ಕಡಲು ಮೇಲು ನೋಟಕ್ಕೆ ಅಪ್ಪಿ ಮುದ್ದಾಡುವಂತೆ, ಸೌಜನ್ಯದಂತೆ ಕಂಡರೂ, ಕಡಲ ಒಳ ಹೊಕ್ಕಾಗ ಮಾತ್ರ ಅದರ ನಿಜ ರೂಪ ಅರ್ಥವಾಗುವಂತೆ, ದಲಿತರ ನೋವಿನ ಆಳವು ಕಡಲಿನ ಆಳದಷ್ಟೇ ನಿಗೂಢ ಎಂಬುದು ಕವಿಯ ಭಾವನೆ.

ವ್ಯವಸ್ಥೆ ದಲಿತ ಸಮುದಾಯದವರನ್ನು ಪ್ರತ್ಯಕ್ಷವಾಗಿ ನೋಯಿಸಿದರೆ, 'ಜಾತಿ' ಎಂಬ ಪೆಡಂಭೂತ ಅಪ್ರತ್ಯಕ್ಷನಾಗಿ ನೋವು ನೀಡಿದೆ. ಕಾಡನ್ನು ಭೇದಿಸುವುದು ಎಷ್ಟು ಕ್ಲಿಷ್ಟವೋ, ಹೀನಾ ಜಾತಿಯಲ್ಲಿನ ಸಂಕೀರ್ಣವಾದ ಬದುಕನ್ನು ಸಾಗಿಸುವುದು ಅಷ್ಟೇ ಕ್ಲಿಷ್ಟ ಎಂಬುದನ್ನು 'ಆಸೆ' ಪದ್ಯದಲ್ಲಿ ವ್ಯಕ್ತಗೊಂಡಿದೆ.

ಬಿಸಿಲು ಬಿರುಗಾಳಿಯಲಿ ಕಂಗೆಡುವ ಧಗೆಯಲ್ಲಿ
ಅನುಗಾಲ ಜೊತೆಗೂಡಿ ಸಾಗಿದವರು
ಯಾರು ವಿಷ ಹಿಂಡಿದರೋ ಯಾವ ಮಾಟದ ಫಲವೋ
ದ್ವೇಷ ದಳ್ಳುರಿಯಲ್ಲಿ ಬೀಳಬೇಕೆ

(ಸಿದ್ದಲಿಂಗಯ್ಯ, ಮೆರವಣಿಗೆ, 2007, ಪುಟ 48)

ಪ್ರಕೃತಿಯ ಭೀಕರ ವಾತಾವರಣದಲ್ಲೇ, ಅದಕ್ಕೆ ಹೊಂದಿಕೊಂಡು ಹೋದವರಿಗೆ ಅಂದು ಶಾಪ ಕರುಣಿಸಿದ 'ವ್ಯವಸ್ಥೆ'ಗೆ ಹಿಡಿ ಶಾಪ ಹಾಕಿ ಪ್ರತಿಭಟಿಸುತ್ತಿದ್ದಾರೆ. ಜಾತಿ ಹೀನಾವಾದ್ದರಿಂದ ವ್ಯವಸ್ಥೆಯು, ಬಿಸಿಲು ಬಿರುಗಾಳಿಯ ಮಾರಕ ವಾತವರಣದಲ್ಲಿ ಸೇಡಿನ ಕಾವನ್ನು ಕಡಿಮೆ ಮಾಡಿಕೊಳ್ಳುವ ಚಿತ್ರಣ ಇಲ್ಲಿ ಬಿಂಬಿತವಾಗಿದೆ. ಆದರೆ ಕವಿ ನಮ್ಮ ಈ ಭೀಕರ ಸ್ಥಿತಿಗೆ 'ಜಾತಿ' ವಿಷ ಹಿಂಡಿ, ಮಾಟ ಮಾಡಿಸಿದೆ ಎಂಬುದನ್ನು ಸೂಕ್ಷ್ಮವಾಗಿ ಅರಿತು ನಮ್ಮ ಮೇಲೇಕೆ ಇಂತಹ ದ್ವೇಷವೆಂದು ನೊಂದು ನುಡಿದಿದ್ದಾರೆ. ಶೋಷಣೆಯನ್ನೇ ಅಂಥ ಪಥವಾಗಿ ಉಪಯೋಗಿಸಿಕೊಂಡು ಮುನ್ನಡೆಯುವ ಉಳ್ಳವರು ದಲಿತರ ಪರ ಮಾತನಾಡುವ, ದಲಿತರ ಉದ್ಧಾರಕರಾಗಿ ಪಣತೊಟ್ಟು, ಹುಸಿ ಮಾತುಗಳನ್ನಾಡುವ ಸಮಯ ಸಾಧಕರನ್ನು ಲಘುವಾಗಿ ಬಿಡದೆ, ಉಗ್ರವಾಗಿ ಖಂಡಿಸಲು ಅರವಿಂದ ಮಾಲಗತ್ತಿಯವರ 'ನರ್ತಿಸಲೆ ಶಾರದೆ' ಎಂಬ ಪದ್ಯವು ಬಲವಾಗಿ ನಿಂತಿದೆ.

ನರ್ತಿಸು ನರ್ತಿಸಲೆ ಶಾರದೆ
ನೀನೆನ್ನ ನಾಲಿಗೆಯ ಮೇಲೆ ನರ್ತಿಸು
ಬಿಸುಡದಿರು ವೀಣೆಯನು
ಮೀಟದಿರು ತಂತಿಯನು
ಮದಾಂಧರ ನೋವಿಗೆ
ನಾವು ಕುಣಿ ಕುಣಿದು ಪರಿಹರಿವ ನಾದಕೆ

(ಕಾವ್ಯ ಕುಂಕುಮ, .ಶಶಿಕಲಾ ಡಿ.ಎಸ್. (ಸಂ.), 2009, ಪುಟ 24)

ಸಾವಿರಾರು ವರ್ಷಗಳಿಂದ ಅನ್ಯಾಯ ಮತ್ತು ಅಸಮಾನತೆಗಳ ಶೋಷಣೆಯನ್ನು ಅನುಭವಿಸುತ್ತ ಬಂದ ದಲಿತ ಸಮುದಾಯಕ್ಕೆ ನಾಲಿಗೆಯನ್ನು ಸರಿಯಾಗಿ ಬಳಸುವ ಗತ್ತನ್ನು ಕವಿ ಕೇಳಿಕೊಳ್ಳುತ್ತ ಪ್ರತಿಭಟಿಸುತ್ತಿದ್ದಾರೆ.

ತನ್ನ ಜನಾಂಗದ ಅಸ್ಪೃಶ್ಯತೆಯ ನೋವನ್ನು, ಅಮಾನವಿಯ ಚರಿತ್ರೆಯನ್ನು ಅನಾಮತ್ತಾಗಿ ತೆರೆದಿಡುವ ಕವಿ, ಉಳ್ಳವರ ರೀತಿ-ಪದ್ಧತಿ, ಮತಾಂಧ, ಧರ್ಮಾಂಧದ ವರ್ಗವನ್ನು ತರಾಟೆ ತೆಗೆದುಕೊಳ್ಳಲು ಕಾತರದಿಂದ ಕಾಯುತ್ತಿದ್ದಾರೆ. ವ್ಯವಸ್ಥೆಯು ತೋರಿದ ಜಾತಿಯ ಕ್ರೂರತನವು ದಲಿತರ ನೋವಿಗೆ ಸ್ಪಷ್ಟ ಉದಾರಹಣೆಯಾಗಿದೆ. ದಲಿತರಿಗೆ ವ್ಯವಸ್ಥೆ ನೀಡುವ ಜಾತಿ ಶೋಷಣೆಯ ನೋವು ಹೊಸತಲ್ಲ. ಆದರೇ ಇದನ್ನು ಸಹಿಸಿ, ಸುಧಾರಿಸಿಕೊಂಡು ಮನುಷ್ಯರಂತೆ ಬಾಳ ಬೇಕೆಂಬುದು 'ಸಂಗಮ' ಪದ್ಯದಲ್ಲಿ ವ್ಯಕ್ತಗೊಂಡಿದೆ.

ಏಸು ಕಾಲ ಕಳೆದರೇನು
ನಮ್ಮ ನಾವು ಮರೆತೆವೇನು
ಕೊಳೆತ ಬಳ್ಳಿ ಕಲಿತ ಹಣ್ಣು
ಯಾವ ಮರದ ಆಸರೆ
ಬರದ ಧರೆಗೆ ಆಡುಮೋಡ
ಋತುವು ಋತುಗಳಾಸರೆ

(ಅರವಿಂದ ಮಾಲಗತ್ತಿ, ನಾದ ನಿನಾದ, 1999, ಪುಟ 76)

ತಮ್ಮ ಸಮುದಾಯವನ್ನು ಕವಿ ಅನೇಕ ವಿಧದಲ್ಲಿ ಎಚ್ಚರಿಸುತ್ತಾರೆ. ಹಿಂದೆ ಆಗಿರುವ ಶೋಷಣೆಗಳನ್ನು ನೆನೆದು, ಸುಧಾರಿಸಿಕೊಂಡು, ನಮಗೆ ನಾವೇ ಆಸರೆಯಾಗಿ ನಿಂತು, ನೋವನ್ನು ಮರೆತು ಹೊಸ ಬದುಕನ್ನು ತಾವೇ ರೂಪಿಸಿಕೊಳ್ಳಬೇಕೆಂಬ ಹಿತ ನುಡಿ ನೀಡಿ, ವೈಚಾರಿಕ ಬದುಕಿಗೆ ಕರೆ ನೀಡುತ್ತಿದ್ದಾರೆ. ನೋವು ಸಹಜ, ಇದರ ನಡುವೆಯೂ ಪುಟಿದೇಳುವುದೇ ಜೀವನ ಎಂಬ ಸೂತ್ರವನ್ನು ಸಮುದಾಯಕ್ಕೆ ಧಾರೆ ಎರೆಯುತ್ತಿದ್ದಾರೆ. ಪಶು ಸಮಾನವಾದ ಮನಸ್ಸುಳ್ಳ ದಲಿತರ ಸಮುದಾಯಕ್ಕೆ ವ್ಯವಸ್ಥೆ ಎಂಬ ಧಣಿ ನೋವಿನ ಶೋಷಣೆ ನೀಡಿ, ಉಪಕಾರದ ಹಣೆ ಪಟ್ಟಿ ಕಟ್ಟುತ್ತದೆ. ತನ್ನ ದರ್ಪದ ಗುರುತಾದ ದಲಿತರನ್ನು ಉಪಯೋಗಿಸಿಕೊಂಡು, ಸಮಾಜ

ಸುಧಾರಕರೆಂದು ತೋರ್ಪಡಿಸಿರುವುದು 'ಒಂದು ದನದ ಪದ' ದಲ್ಲಿ ವ್ಯಂಗ್ಯವಾಗಿ ಚಿತ್ರಿತವಾಗಿದೆ.

ಗೊಂತಿನ ಮುಂದೆ ನಿಲಿಸುವರೆ
ಗೂಟಕೆ ನನ್ನ ಕಟ್ಟವರೆ
ಹಿಡಿ ಹಿಡಿ ಒಣಹುಲ್ಲು ಹಾಕಿ ತಾನೆ
ಮುಚ್ಚಿಕೊಳ್ಳುತ್ತಾನೆ
ದೇವರಂಥ ಮನುಷ್ಯ ನನ್ನೊಡೆಯ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 81)

'ಹಸು' ಪ್ರಾಣಿ ವರ್ಗದಲ್ಲೇ ತುಂಬಾ ಸೂಕ್ಷ್ಮ ಹಾಗೂ ಸಾಧು ಪ್ರಾಣಿ. ಇಷ್ಟೇ ಸೂಕ್ಷ್ಮ ಸಾಧುಗಳಾದ ದಲಿತರು ಹಸುವಿಗಿಂತ ಕಡೆಯಾಗಿ ಜೀವನ ನಡೆಸಿದ್ದಾರೆಂಬುದು ಕವಿಯ ನೋವು. ಇಲ್ಲಿನ ಸಾಲುಗಳಲ್ಲಿ ಕವಿ ನೇರವಾಗಿ ದಲಿತರನ್ನು ಕಾವ್ಯಕ್ಕೆ ತರದಿದ್ದರೂ, ಹಸು ಮನಸ್ಸಿನ ನನ್ನವರಿಗೆ ವ್ಯವಸ್ಥೆ ನೀಡಿದ ಶೋಷಣೆಯನ್ನು ಹಸುವಿನ ರೂಪದಲ್ಲೇ ಸ್ವೀಕರಿಸಲು ಶಕ್ತರಾಗಿದ್ದಾರೆ. ದಲಿತ ಸಾಹಿತ್ಯ 'ನೋವಿ'ನ ಒಂದು ಭಾಗ. ಸಾಹಿತ್ಯ ಲೋಕದಲ್ಲಿ ಮೊದಲ ಬಾರಿಗೆ ನೋವು-ಸಂಕಷ್ಟಗಳಿಂದ, ದುಗುಡ-ದುಮ್ಮಾನಗಳನ್ನು ಕಾವ್ಯಕ್ಕೆ ತಂದಿರುವುದು 'ಸಂಪಿಗೆಯ ಮರದಲ್ಲಿ' ಬಿಂಬಿತವಾಗಿದೆ.

ಬಡಜನರ ಗುಡಿಸಲಿಗೆ ಬೆಂಕಿಯನು ಇಟ್ಟವರು
ರಾಜರಾದರು ದೆಹಲಿ ನಾಡಿನಲ್ಲಿ
ಎಳೆಯ ಮಕ್ಕಳ ಕೊರಳ ದನಿಕಿತ್ತು ನಕ್ಕವರು
ರಕ್ತವನು ಹಂಚಿದರು ಅಮಲಿನಲ್ಲಿ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 143)

ಇಲ್ಲಿನ ಸಾಲುಗಳು, ನೈಜ ಘಟನೆಯಲ್ಲಿ ಅನುಭವಿಸಿದ ನೋವು, ನೋವು ಕೊಟ್ಟವರು ಇದಕ್ಕೆ ಪರಿಹಾರ ಕೊಡದೇ, ಗದ್ದುಗೆಯ ವ್ಯಾಮೋಹಿಗಳಾಗಿರುವುದು, ಶೋಷಣೆಗೆ ವಯೋಮಾನವನ್ನು ಲೆಕ್ಕಿಸದೇ ನಿಮ್ನ ವರ್ಗದವರನ್ನು ಅಧೋಗತಿಗೆ ತಳ್ಳಿರುವ ಚಿತ್ರಣವನ್ನು ಕವಿ ಚಿತ್ರಿಸಿದ್ದಾರೆ. ಸರ್ವಾಧಿಕಾರದ ದಮನಕಾರಿ ಪ್ರವೃತ್ತಿಯಿಂದ ದಲಿತರು ದುಃಖ-ದುಮ್ಮಾನದ, ನೋವು, ಸಂಕಟದ ಸ್ಥಿತಿಯಲ್ಲಿ ಬಳಲುತ್ತಾರೆಂಬುದನ್ನು ಅರ್ಥವತ್ತಾಗಿ ಧ್ವನಿಸುತ್ತವೆ.

'ದಲಿತ' ಎಂದರೆ ಹೀಗಿರಬೇಕು ಎಂದು ಅವರ ಇರುವಿಕೆಯನ್ನು ತೀರ್ಮಾನಿಸುವ ಈ ವ್ಯವಸ್ಥೆಯಿಂದ ಸಮುದಾಯದವರು ತನ್ನ ತನವನ್ನು ಕಳೆದುಕೊಂಡಿದ್ದೇ ಹೆಚ್ಚು. ಪರಂಪರಾಗತವಾದ ಸಿದ್ಧ ಮಾದರಿಗಳಲ್ಲಿ ದಲಿತರ ಇರುವಿಕೆಯನ್ನು ಬಯಸುವ 'ವ್ಯವಸ್ಥೆ' ಅವರ ಇರುವಿಕೆಯನ್ನು ಇನ್ನಿಲ್ಲದಂತೆ ಹತ್ತಿಕ್ಕುತ್ತಲೇ ಬಂದಿದೆ.

ಬಾಲ್ಯ, ಯೌವನ, ಮುಪ್ಪು ಹೀಗೆ ಬದುಕಿನ ಘಟ್ಟಗಳನ್ನು ವ್ಯವಸ್ಥೆಯಲ್ಲೇ ಅವಲಂಬಿತವಾಗುವಂತೆ ಮಾಡಿ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟು ಮಾಡಿದ್ದನ್ನು 'ಉರಿಗಣ್ಣಿನವರು' ಪದ್ಯದಲ್ಲಿ ತನ್ನವರಿಗೆ ಆದ ನೋವಿನ ನಡುವೆಯೂ ಆತ್ಮ ಸ್ಥೈರ್ಯ ತುಂಬುತ್ತಿದ್ದಾರೆ.

ಕೋಟಿ ಕೋಟಿ ನೋವು ನುಂಗಿ
ಹಸಿವು ಜೀವ ಸುಲಿದು
ದೇಹ ಮುದುರಿರುವ
ಪುಕ್ಕದ ಕೋಳಿಯಂತೆ
ಜೀವ ಜೀವನದ
ಮುದುರಿ ಬಿಗಿದಂತೆ
ಕೊಕ್ಕರಿಸಿ ಕುಂತು
ತುಟಿ ಬಿಡಲಾರದೆ ಬಿಕ್ಕಳಿಸಿ
ದಣಿಯ ದರ್ಪವ ನೋಡುತ್ತಲೇ
ಜೀವ ಬಿಡುವಂತಿರುವ
ಕೆಣಕಿ ಕೆರಳಿರುವ
ಕರಿಸರ್ಪಗಳು ನೀವು

(ಜವರಯ್ಯ ಮ.ನ., ವಿದ್ರೋಹ, 2002, ಪುಟ 23)

ಕವಿ ತನ್ನವರಲ್ಲಿರುವ ಆತ್ಮ ಶಕ್ತಿಯನ್ನು ಹೊರ ತೆಗೆಯುವ ಪ್ರಯತ್ನ ಮಾಡುತ್ತಿದ್ದಾರೆ. ಅದಕ್ಕಾಗಿ ಇವರನ್ನು ಕರಿ ಸರ್ಪಗಳು ಎಂದು ಕರೆದು, ಇಲ್ಲಿವರೆಗಿನ ನೋವುಗಳಿಗೆ 'ವ್ಯವಸ್ಥೆ'ಯೇ ಕಾರಣ ಇರಬಹುದು, ಇದನ್ನು ದೂರ ಮಾಡುವ ಶಕ್ತಿ ನಿಮ್ಮಲ್ಲಿದೆ ಎಂದು ಹುರಿದುಂಬಿಸುತ್ತಿದ್ದಾರೆ. ಅಂದರೇ 'ವ್ಯವಸ್ಥೆ'ಯನ್ನು ಅಂತರಿಕವಾಗಿ ಪ್ರತಿಭಟಿಸುತ್ತಿದ್ದಾರೆ. ವ್ಯವಸ್ಥೆಯ ವರ್ತನೆಗೆ ನಲುಗಿದ ದಲಿತ ಸಮುದಾಯಕ್ಕೆ ಕವಿಯ ಬರಹಗಳು ಸ್ವಲ್ಪ ಮಟ್ಟಿಗೆ ಚೇತರಿಸಿಕೊಳ್ಳಲು ಅವಕಾಶಕೊಟ್ಟಂತಿದೆ.

ಜೀವಮಾನವಿಡಿ ಬೇರೆಯವರ ಕಪಿ ಮುಷ್ಟಿಯಲ್ಲಿ ಬೆಂದು, ಬಳಲಿ, ಜೀವದ ಹಂಗನ್ನೇ ತೊರೆದ ಸಮುದಾಯಕ್ಕೆ ಕವಿಯ ಸಾಲುಗಳು ಸಂಜೀವಿನಿಯಂತೆ ಭಾಸವಾಗುತ್ತದೆ. ನೋವಿನಲ್ಲೂ ಪುಟಿದೇಳುವ ಶಕ್ತಿಯನ್ನು ತುಂಬುತ್ತಿದ್ದಾರೆ. ನಿಮ್ಮ ಇರುವಿಕೆಯ ಅರಿವನ್ನು, ನಿಮ್ಮ ಅಗತ್ಯತೆಯನ್ನು ತೋರಿಸುವ ಸಮಯ ಬಂದಿದೆ ಎನ್ನುವ ಕವಿ, ಈ ವರೆಗೂ ಆಗಿರುವ ನೋವನ್ನು ಸಹಿಸಿಕೊಂಡು 'ಬಲ'ಗೊಳ್ಳಿ ಎನ್ನುತ್ತಿದ್ದಾರೆ.

## ಈ. ಲೈಂಗಿಕ ಶೋಷಣೆ: ಪ್ರತಿಭಟನೆ

ದಲಿತ ಸಮುದಾಯವು ಎದುರಿಸಿದ ಅನೇಕ ಶೋಷಣೆಗಳಲ್ಲಿ 'ಲೈಂಗಿಕ' ಶೋಷಣೆಯ ಪಾತ್ರ ಹೊರ ಜಗತ್ತಿಗೆ ಗೊತ್ತು ಗೊತ್ತಿಲ್ಲದಂತಿದೆ. ಅಂದರೆ ದಲಿತ ಸಂವೇದನೆ ಉಳ್ಳವರೂ ಇದನ್ನು ಅಲ್ಲೆಗಳೆಯಲು ಮರೆಮಾಚಿದರೆ, ದಲಿತ ಸಮುದಾಯದವರು ತಮಗೆ ಮುಜುಗರವಾದರೂ ಅದರಿಂದ ಮುಕ್ತರಾಗಬೇಕೆಂದು, ತಮ್ಮವರಲ್ಲಿ ಅರಿವು ಮೂಡಿಸಬೇಕೆಂದು ನಿರ್ಧಾರಿಸಿ, ಕಾವ್ಯದ ನೆಲೆಯಲ್ಲಿ ತಮ್ಮ ಪ್ರಯತ್ನಕ್ಕೆ ನೀರೆರೆದರು.

ದಲಿತ ಸಮುದಾಯದ ಹೆಣ್ಣಿಗೆ ಪುರುಷ ಪ್ರಧಾನ ಸಮಾಜವು 'ಜಾತಿ' ಹೆಸರಲ್ಲಿ ಲೈಂಗಿಕ ಶೋಷಣೆ ನೀಡಿ, ಅದಕ್ಕೆ ಸಂಪ್ರದಾಯ, ಧಾರ್ಮಿಕತೆಯ ಹೆಸರೇಳಿ, 'ಜಾತಿ' ಸಂಕೋಲೆಯಲ್ಲಿ ಬಂಧಿಸಿ, ಅವರ ಅನುಕೂಲಗಳಿಗೆ ಬೇಕಾಗಿರುವುದನ್ನು ಕೊಡುವುದಾಗಿ ನಂಬಿಸಿ, ಆಮಿಷಕ್ಕೆ ಒಳಪಡಿಸಿ, ತಮ್ಮ ಗಂಡಸ್ಥನವನ್ನು, ಪೌರುಷವನ್ನು, ಕ್ರೌರ್ಯವನ್ನು ನಡೆಸುತ್ತಲೇ ಇದೆ. ದಲಿತ ಸಂವೇದನೆ ಇರುವ ಇತರ ಸಾಹಿತ್ಯ ಪ್ರಕಾರದಲ್ಲಿ 'ದಲಿತರ ಲೈಂಗಿಕ ಶೋಷಣೆ'ಯ ಸ್ಥಿತಿಯನ್ನು ಯಥಾವತ್ತಾಗಿ ಸೆರೆ ಹಿಡಿಯುವ ಪ್ರಯತ್ನ ನಡೆದಿದೆ ಎನ್ನುವುದನ್ನು ಬಿಟ್ಟರೆ, ಶೋಷಣಾ ಮುಕ್ತ ಕಾರ್ಯದ ಕುರುಹುಗಳು ಕಾಣ ಬರುವುದಿಲ್ಲ.

ತಮ್ಮ ಕಥೆ, ಕಾದಂಬರಿಗಳಲ್ಲಿ ಊರಿನ ಪರಿಸ್ಥಿತಿಗೆ ತಕ್ಕ ರೀತಿಯಲ್ಲಿ ದಲಿತ ಹೆಣ್ಣು ಮಕ್ಕಳನ್ನು ಬಳಸಿಕೊಳ್ಳುವುದು ಸರ್ವೇ ಸಾಮಾನ್ಯವೆಂಬಂತೆ ಬಿಂಬಿಸಲಾಯಿತು. ಇಂಥ ಶೋಷಣೆಯಿಂದ ಸಮುದಾಯದ ಪರಿಸ್ಥಿತಿ, ಶೋಷಣೆ ಅನುಭವಿಸಿದ ಹೆಣ್ಣಿನ 'ವ್ಯವಸ್ಥೆ'ಯನ್ನು ಪರಿಗಣನೆಗೆ ತೆಗೆದುಕೊಳ್ಳುವ ಗೋಜಿಗೆ ದಲಿತ ಸಂವೇದನಾ ಸಾಹಿತ್ಯ ಪ್ರಯತ್ನಿಸಲಿಲ್ಲ. ಇವರು ತಮ್ಮ ಕಥಾ ಪರಿಸರದಲ್ಲಿ ದಲಿತ ಎಂಬ ಸಮುದಾಯ ಇತ್ತು, ಅದಕ್ಕೆ ಇತರ ಜಾತಿಯವರು ಕಂಡ ರೀತಿಯನ್ನು ಮಾತ್ರ ಪ್ರತಿಬಿಂಬಿಸುವ ಕೆಲಸ ಮಾಡಿದರು. ಇದರ ಜತೆಗೆ ದಲಿತರು ಮನುಷ್ಯ ಜಾತಿಗೆ ಸೇರಿದವರು, ಅವರಿಗೂ ಬದುಕಲು ಅವಕಾಶ ಕೊಡಬೇಕೆಂಬ ಪ್ರಜ್ಞೆ ಇವರಲ್ಲಿ ಬೆಳೆಯಲಿಲ್ಲ. ಆದರೆ ದಲಿತ ಸಾಹಿತ್ಯ ಇಂಥ ಶೋಷಣಾ ಸಹಿತ ಸಮಾಜದೊಂದಿಗೆ ಒಟನಾಟವಿಟ್ಟುಕೊಂಡಿರುವ ತನ್ನವರಿಗೆ ಸಾಮಾಜಿಕ ನ್ಯಾಯ ದೊರಕಿಸಿ ಕೊಡಬೇಕೆಂದು ನಿರ್ಧಾರಿಸಿ ಸಾಹಿತ್ಯ ಕ್ಷೇತ್ರದಲ್ಲಿ, ಅದರಲ್ಲೂ ಕಾವ್ಯದ ನೆಲೆಗಟ್ಟಿನಲ್ಲಿ ಮುನ್ನಡೆದರು.

ಕಾವ್ಯದ ನೆಲೆಯಲ್ಲಿ ದಲಿತ ಹೆಣ್ಣಿಗೆ ಬರೀ ಉಳ್ಳವರಿಂದಲೇ ಶೋಷಣೆ ಉಂಟಾಯಿತಾ? ದಲಿತ ಪುರುಷರಿಂದಲೂ ಲೈಂಗಿಕ ಶೋಷಣೆ ಉಂಟಾಯಿತಾ? ಲೈಂಗಿಕ ಶೋಷಣೆಗೆ ಪರಿಹಾರ, ಪ್ರತಿಭಟನೆ ಇತ್ಯಾದಿ ಅಂಶಗಳನ್ನು ಹೆಕ್ಕಿ ತೆಗೆಯುವ ಪ್ರಯತ್ನವೇ ಈ ಅಧ್ಯಾಯದ ಭಾಗವಾಗಿದೆ. ಯಾವ-ಯಾವ ಕಾರಣಗಳಿಗೆ ಶೋಷಣೆ ಅನುಭವಿಸಬೇಕಾಗಿತ್ತು, ಆ ಸಮಯದಲ್ಲಿ, ಆ ಹೆಣ್ಣಿನ ಮನಸ್ಥಿತಿ, ಆಕೆ ಅಥವಾ ಆಕೆಯ ಸಮುದಾಯದವರ ಅಥವಾ ಆಕೆಯ ಲೈಂಗಿಕ ಶೋಷಣೆಯ ಅನಾವರಣಗೊಳಿಸಲು ಕವಿ ತೋರಿದ ಕಾವ್ಯದ ಪ್ರತಿಕ್ರಿಯೆಯನ್ನು ದಾಖಲಿಸುವ ಪ್ರಯತ್ನ ಇದಾಗಿದೆ.

ಸಾಮಾಜಿಕವಾಗಿ ದಲಿತ ಸಮುದಾಯದವರನ್ನು 'ಜಾತಿ' ಹೆಸರಲ್ಲಿ, ಊರಿನ ಹೊರ ಭಾಗದಲ್ಲಿ ಇಟ್ಟ ಶೋಷಣೆಯನ್ನೇ ಸಹಿಸಲಾಗುವುದಿಲ್ಲ. ಇದರ ಜತೆಗೆ ಗಂಡಸರು ಬಹಿಷ್ಕಾರಕ್ಕೆ ಒಳಗಾದ ಅಸ್ಪೃಶ್ಯ ಹೆಣ್ಣನ್ನು ತಮ್ಮ ಕಾಮ ತೃಷೆಗೆ ಬಳಸಿಕೊಳ್ಳವ ರೀತಿಯನ್ನು ಅರವಿಂದ ಮಾಲಗತ್ತಿರವರು 'ಓಕಳಿ' ಪದ್ಯದಲ್ಲಿ ಪ್ರತಿಬಿಂಬಿಸಿದ್ದಾರೆ.

ವರ್ಷಕ್ಕೊಮ್ಮೆ ಹನುಮಂತನ ಹೆಸ್ರಲ್ಲಿ
ಓಕುಳಿ ಆಡಾಕ ಹಚ್ಚತಾರ
ಹೊಂಡದಾಗ ನೀರು ತುಂಬಿ
ದೇವ್ರು ಹೆಸ್ರಲೆ ಅರ್ಷಿಣ-ಕುಂಕುಮ ಹಾಕಿ
ಚೌಪಿ ಜೋಳಗ್ಯಾಗ ನೀರ ತುಂಬಿ
ಮಾರಿಗೆ ಹೊಡ್ದು, ಮೈಯಿ ತೋಯ್ಸಿ
ಮಲಿ ದಡ ನೋಡತಾರ
ಲಕ್ಕಿ ಜಬರಿಲೆ ನಾಲ್ಕ ಥಳಿಸಿಕೊಂಡ
ಎಂಟ ದಿನ ಅರ್ಷಿಣ ಹಚ್ಚಿ
ಉಸಗಲೆ ಕಾಸಗೊಂದ್ರು ಪರವಾಯಿಲ್ಲ

(ಕಾವ್ಯ ಕುಂಕುಮ, ಶಶಿಕಲಾ ಎಸ್.ಡಿ.(ಸಂ.), 2009, ಪುಟ27)

ಸಾಮಾಜಿಕವಾಗಿ ತನ್ನವರ ಸಂಬಂಧವನ್ನು ಅವಹೇಳನ ಮಾಡುವ ಉಳ್ಳವರು, ದೇವರ ಹೆಸರಲ್ಲಿ ತನ್ನವರನ್ನೇ ಬಳಸಿಕೊಂಡು, ತಮ್ಮ ಕಾಮ ದಾಹ ತೀರಿಸಿಕೊಳ್ಳುವವರ ವಿರುದ್ಧ ಕವಿ ಪ್ರತಿಭಟಿಸುತ್ತಿದ್ದಾರೆ.

ಪ್ರತಿಭಟಿಸಲು ಕಾರಣ ತನ್ನವರಿಗೆ ದೇವಸ್ಥಾನಕ್ಕೆ ಸೇರಿಸಲು ಅನುಮತಿ ಕೊಡದವರು 'ಹೋಳಿ' ಹಬ್ಬಕ್ಕೆ ಮಾತ್ರ ನನ್ನವರ ಬಳಿ ಬಂದು ದೇಹ ಸುಖ ಪಡೆಯುವ ವ್ಯವಸ್ಥೆಯ ಗಂಡಸ್ಥನದ ವಿರುದ್ಧ ಪ್ರತಿಭಟಿಸುತ್ತಿದ್ದಾರೆ. 'ಹೋಳಿ' ಹಬ್ಬ ಎಲ್ಲಾ ಜನರು ಆಚರಿಸುವ ಹಬ್ಬ. ಆದರೆ ಇಲ್ಲಿ ಬರೀ ದಲಿತ ಸಮುದಾಯದ ಹೆಣ್ಣುಗಳನ್ನು ಮಾತ್ರ ದೇವರ ಹೆಸರಲ್ಲಿ ಭಯ, ಭಕ್ತಿ ಉಂಟು ಮಾಡಿ ಬಳಸಿಕೊಳ್ಳುವುದು ಒಂದು ರೀತಿಯ ಶೋಷಣೆಯಾಗಿದೆ.

ಲೈಂಗಿಕ ಶೋಷಣೆ ಎಂದಾಕ್ಷಣ ಹೆಣ್ಣಿನೊಂದಿಗೆ ಮಲಗಿ ಮೋಸ ಮಾಡುವುದೊಂದೇ ಅಲ್ಲ. ಆಕೆಯ ದೇಹದ ಭಾಗಗಳಿಗೆ ದೈಹಿಕ ಹಿಂಸೆ ಕೊಡುವುದು, ಆಕೆಗೆ ನೋಯಿಸಿ, ತಾನು ಮಾತ್ರ 'ಮಜ' ಮಾಡುವುದು ಕೂಡ ಲೈಂಗಿಕ ಶೋಷಣೆಯಾಗುತ್ತದೆ. ಕೆಲವೊಂದು ಬಾರಿ ಹೆಣ್ಣು ತನಗೆ ಇಚ್ಛೆ ಇಲ್ಲದಿದ್ದರೂ ಯಾವುದೋ ಬಲವಂತಕ್ಕೆ ತನ್ನ ದೇಹ ದರ್ಶನ ಮಾಡುವುದು ಲೈಂಗಿಕ ಶೋಷಣೆಯ ಭಾಗವಾಗುತ್ತದೆ. ಇಂಥದು 'ಮನುಷ್ಯರಾಗ ಬನ್ನಿ' ಎಂಬ ಪದ್ಯದಲ್ಲಿ ತೆರೆದುಕೊಳ್ಳುತ್ತದೆ.

ಮಸಾಜ್-ಮಾಲೀಸ್ ಹೆಸರಲ್ಲಿ ಮನೆಯ ಮುತ್ತೈದೆ
ಸಿಕ್ಕಿದ್ದಾಳೆ ಹೈಟೆಕ್ ವೇಶ್ಯಾವಾಟಿಕೆ ಜಾಲದಲ್ಲಿ
ಹಸೆಮಣೆ ಏರುವ ಕನಸುಗಳ ಮಾರಿ
ಜಾಹೀರಾತಿನಲ್ಲಿ ಬೆತ್ತಲಾಗಿ ನಗುತ್ತಿದ್ದಾಳೆ
ತನ್ನಾಸೆಗಳ ನುಂಗಿ ಮನೆಮಗಳು
ಬಂಧು- ಬಾಂಧವರ ಬದುಕು ಕಟ್ಟಲು
ಕುಣಿಯುತ್ತಿದ್ದಾಳೆ ಲೈವ್ ಬ್ಯಾಂಡ್‌ಗಳಲ್ಲಿ
ಹಣವುಳ್ಳವರ ಮುಂದೆ ಹೆಣವಾಗಿ

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 58)

ಹೆಣ್ಣನ್ನು ಗಂಡು, ಸಮಾಜದಲ್ಲಿ ಬಳಸಿಕೊಳ್ಳುವ ರೀತಿಯನ್ನು ನೆನೆದು ಕವಯತ್ರಿ ಅವರ ಮನಸ್ಥಿತಿಯನ್ನು ಬದಲಿಸುವುದಕ್ಕೆ 'ಮನುಷ್ಯರಾಗ ಬನ್ನಿ' ಎನ್ನುವ ಮೂಲಕ ತನ್ನ ಪ್ರತಿಭಟನೆಯನ್ನು ತೋರಿದ್ದಾರೆ. ಒಂದು ಹೆಣ್ಣನ್ನು ಗಂಡು ಸಮಾಜ ಹಲವಾರು ವಿಧಗಳಲ್ಲಿ ಹೊರ ಜಗತ್ತಿಗೆ ಪರಿಚಯಿಸಿ ಕೊಟ್ಟಿದೆ. ಇದು ಗಂಡು ಸಮಾಜದ ಸುಖಕ್ಕೆ ಮಾತ್ರ ಸೀಮಿತವಾಗಿದ್ದು, ಹೆಣ್ಣಿನ ಒಳ ಮನಸ್ಸನ್ನು ಅರ್ಥ ಮಾಡಿಕೊಳ್ಳುವ ಗೋಜಿಗೆ ಹೋಗಿಲ್ಲವೆಂಬುದೆ ಕವಯತ್ರಿಯ ಅಳಲಾಗಿದೆ.

ಹೆಣ್ಣು ತನ್ನವರ ಬದುಕಿನ ನೊಗ ಎಳೆಯಲು ಈ ರೀತಿಯ ಲೈಂಗಿಕ ಶೋಷಣೆಯನ್ನು ಸಾಮಾನ್ಯವಾಗಿ ಸಹಿಸಿಕೊಳ್ಳಬೇಕಾಗಿದೆ. ಇದನ್ನು ದೂರ ಮಾಡುವ ನಿಟ್ಟಿನಲ್ಲಿ ಕವಯತ್ರಿ ಕಾವ್ಯದ ಮೂಲಕ 'ಬದಲಾಗ ಬನ್ನಿ' ಎಂದೇಳಿ ಪ್ರತಿಭಟಿಸುತ್ತಿದ್ದಾರೆ.

ದಲಿತ ಸಮುದಾಯದ ಹೆಣ್ಣಿನ ಲೈಂಗಿಕ ಶೋಷಣೆಯಲ್ಲಿ 'ದೇವದಾಸಿಯ ಪಟ್ಟ' ಕೂಡ ಒಂದು. ಧಾರ್ಮಿಕತೆಯ ಹೆಸರಿನಲ್ಲಿ ಹೆಣ್ಣಿನ ದೇಹದ ಮಾರಣಹೋಮದಂತೆ, ಊರಿನವರ ಲೆಕ್ಕಾಚಾರದಲ್ಲಿ ಮನುಷ್ಯಳಂತೆ ಲೆಕ್ಕ ಹಾಕುವ ಬದಲು 'ದೇವದಾಸಿ' ಎಂಬ ಖ್ಯಾತಿಗೆ ಸೇರಿಸಿ ಶೋಷಣೆ ನೀಡಿರುವುದು 'ಬೇಡ ದಾಸಿಯ ಪಟ್ಟ' ಎಂಬ ಪದ್ಯದಿಂದ ಬೆಳಕಿಗೆ ಬಂದಿದೆ.

ಎಲ್ಲರಂತಲ್ಲ ನೀನು 'ನಿತ್ಯ ಸುಮಂಗಲಿ'
ರತಿ, ರಂಭೆ, ರೇಣುಕೆ ಎಂದೆಲ್ಲ
ಹಾಡಿ ಹೊಗಳಿ ಪುಟವಿಕ್ಕಿದವರ್‍ಯಾರು?
ಲೋಕದ ಕಣ್ಣಿಗೆ ನಿನ್ನ
ಗಣಿಕೆಯಾಗಿಸಿ
ಮರು ಮುಂಜಾನೆ ಎದ್ದು
'ದಾಸಿ ದಾಸಿ ದೇವದಾಸಿ
ಎಂದೊರಲುತ ಕೆಸರೆರಚಿದವರ್‍ಯಾರು?
ತಲೆ ಮೇಲೆ ಕೊಡ ಹೊರಿಸಿ ಕುಣಿಸಿದವರ್‍ಯಾರು?

(ಲಲಿತಾ ನಾಯಕ್ ಬಿ.ಟಿ., ಒಡಲ ಬೇಗೆ, ಪುಟ 09)

ಹೆಣ್ಣಿನ ವರ್ಣನೆ ಮಾಡುವುದರ ಜತೆಗೆ, ಶೋಷಣೆ ಮಾಡುವುದನ್ನು 'ಇಂತಹ ಸ್ಥಿತಿಗೆ ಕಾರಣ ಪುರುಷರ್‍ಯಾರು?' ಎಂದು ಪ್ರಶ್ನಿಸುವ ಮೂಲಕ ಪ್ರತಿಭಟಿಸುತ್ತಿದ್ದಾರೆ. ದಲಿತೇತರ ಪುರುಷರಿಗೆ ದಲಿತ ಹೆಣ್ಣು ಹೊರ ಪ್ರಪಂಚದ ದೃಷ್ಟಿಯಲ್ಲಿ ಅಸ್ಪೃಶ್ಯಳಂತೆ ಕಂಡರೆ, ತಮ್ಮ ಕಾಮುಕ ಜಗತ್ತಿನಲ್ಲಿ ಹೊಗಳಿಕೆಯ ಮಹಾಪೂರವೇ ಜರುಗುತ್ತದೆ. ದಲಿತ ಹೆಣ್ಣು ಇವರ ತಾಳಕ್ಕೆ ಒಪ್ಪಿ ಖುಷಿಯಿಂದ ಕುಣಿಯುವುದಿಲ್ಲ. ಈಕೆಗೆ ಕುಣಿಸಲು ದೇವರ ಹೆಸರಲ್ಲಿ ನಂಬಿಕೆ ಮೂಡಿಸಿ, ತಮಗೆ ಇಷ್ಟ ಬಂದಂತೆ ದರ್ಶನ ಪಡೆದು ಸುಖಪಡುತ್ತಾರೆ. ಆದರೆ ಈ ಕಾಮುಕ ಪುರುಷರ ಒಳಾರ್ಥವನ್ನೇ ಅರಿಯದ ಮುಗ್ಧರನ್ನು ಕವಯತ್ರಿ ಪ್ರಶ್ನಿಸಿ, ಪುರುಷರ ವರ್ತನೆಯನ್ನು ಖಂಡಿಸುತ್ತಿದ್ದಾರೆ.

ಧಾರ್ಮಿಕ ಸೇವೆಯಲ್ಲಿ ನಿರತರಾದವರು ತಮಗೆ ಕಾಮದಾಸೆ ಇದೆ ಎಂಬುದನ್ನು ಸಾಬೀತುಪಡಿಸಿ, ತಮ್ಮ ಕಾಮ ಚೇಷ್ಟೆಗೆ ದಲಿತ ಸಮುದಾಯದ ಹೆಣ್ಣುಗಳನ್ನು ಬಳಸಿಕೊಂಡಿದ್ದು ಶೋಷಣೆಯ ರೂಪಕವಾಗಿದೆ. ವ್ಯವಸ್ಥೆಯು ತನ್ನ ಮನೆಯವರೊಬ್ಬರನ್ನು ಈ ಕ್ರಿಯೆಗೆ ಆಹ್ವಾನಿಸುವ ಬದಲು, 'ಅಸ್ಪೃಶ್ಯ' ಕೇರಿಯ ಹೆಣ್ಣನ್ನು ಆಹ್ವಾನಿಸುವುದು ಯಾವ ಸೀಮೆಯ ನ್ಯಾಯ? ಎಂದು ಕೇಳ ಹೊರಟರೇ, ಇದು ದೇವರೇ ನಿರ್ಧಾರಿಸಿರುವುದು. ದೇವದಾಸಿಯಾಗಲು ಈ ಕೇರಿಯ ಹೆಣ್ಣೆ ಸೂಕ್ತವೆಂದು, ದೇವರ ನೆಂಟರಂತೆ ನಟಿಸುವವರನ್ನು 'ಬೆತ್ತಲೆ ಸೇವೆ' ಕಾವ್ಯದಲ್ಲಿ ಸೆರೆ ಹಿಡಿಯಲಾಗಿದೆ.

ವರ್ಷಕ್ಕೊಮ್ಮೆ ಬರುವ ನಿನ್ನ
ಜಾತ್ರೆಯಲ್ಲಿ ಹೆಣ್ಣುಗಳು
ಬೆತ್ತಲಾಗಬೇಕು. ನಮಗೆ
ಸರ್ವಾಂಗ ದರ್ಶನವಾಗಬೇಕು
ಎಂದು ಸುರಿದ
ತಥಾಸ್ತು ಎಂದ ಎಲ್ಲಮ್ಮ ತನ್ನ
ಉಡಿ ಬಿಗಿ ಹಿಡಿದು ಗುಡ್ಡ ಹತ್ತಿದಳು
ಹೀಗೆ
ಅತ್ಯಾಚಾರಕ್ಕೆ
ದೊರಕಿದ ದೇವರ ಮುದ್ರೆ
ಬೆತ್ತಲೆ ಸೇವೆಯಾಯಿತು.

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು , 2009, ಪುಟ 36 )

ದೇವರ ಸೇವಕನೊಬ್ಬ ದೇವರಲ್ಲಿ ತನ್ನ ಕಾಮಾಸಕ್ತಿಯನ್ನು ನೆರವೇರಿಸುವಂತೆ ಕೋರಿಕೊಂಡು, ಅದು ನೆರವೇರಿಸಲು ದೇವಿ 'ಅಸ್ತು' ಎನ್ನುವ ವಿಚಿತ್ರ ವರ್ತನೆಯನ್ನು ಕವಿ ಪ್ರತಿಭಟಿಸುತ್ತಿದ್ದಾರೆ. ಇಲ್ಲಿ ದೇವರಿಗೂ ಭಯ 'ನನ್ನನ್ನು ಎಲ್ಲಿ ಆ ಸಾಲಿನಲ್ಲಿ ನಿಲ್ಲಿಸುವನೋ' ಎಂದು. ಆದ್ದರಿಂದ ಆಕೆ ತನ್ನ ಸೀರೆಯನ್ನು ಬಿಗಿ ಹಿಡಿದು ಅಲ್ಲಿಂದ ಪರಾರಿಯಾಗುತ್ತಾಳೆ.

ಇಲ್ಲಿ ಕವಿ ಮೊದಲು ಪ್ರತಿಭಟಿಸುವುದು ದೇವರನ್ನೇ. ಏಕೆಂದರೆ ದೇವರು ಒಂದು ಹೆಣ್ಣನ್ನು ಈ ರೀತಿಯ ಶೋಷಣೆಗೆ ನೂಕುವುದು ಸರಿಯೇ? ಇಂಥ ಸಾಮಾಜಿಕ ಅತ್ಯಾಚಾರಕ್ಕೆ ಅನುವು ಮಾಡಿಕೊಡುವುದು ಎಷ್ಟು ಸರಿ? ಎಂದು ಕವಿ ದೇವಿಯ ಮೇಲೆ ಕೋಪಗೊಂಡು ಪ್ರತಿಭಟಿಸುವಂತಿದೆ.

'ಬೆತ್ತಲೆ ಸೇವೆ' ದೇವರ ಹೆಸರಲ್ಲಿ ನಡೆಯುವ 'ಅಸ್ಪೃಶ್ಯ ಹೆಣ್ಣಿನ ಅತ್ಯಾಚಾರ'ವೇ ಸರಿ. ಇಂಥ ಸೇವೆಯಿಂದ ಹೆಣ್ಣಿಗೆ ಯಾವುದೇ ರೀತಿಯ ಪ್ರಯೋಜನವಿಲ್ಲ. ಆದರೆ ಇದರ ಸುಖ ಪಡೆಯುವ ಪೂಜಾರಿ ತನಗೆ ಚಟವಿದ್ದಾಗಲೆಲ್ಲ ಈ ರೀತಿಯ ಸೇವೆಗಳು ಧಾರಾಳವಾಗಿ ಜರುಗಿಸುವುದು ಕವಿಯ ಪ್ರತಿಭಟನೆಗೆ ಕಾರಣವಾಗಿದೆ. ಹೆಣ್ಣು ಇಲ್ಲಿ ಸೂತ್ರದ ಬೊಂಬೆ ಅಷ್ಟೇ.

ಹೆಣ್ಣು ಅಸಹಾಯಕಳಾಗಿ ಲೈಂಗಿಕ ಶೋಷಣೆ ಅನುಭವಿಸಿದ ನಂತರದ ದಿನಗಳಲ್ಲಿ ಆಕೆಗೆ ತನ್ನವರ ಆಸರೆ ಇಲ್ಲದೇ, ಲೈಂಗಿಕ ದಾಹ ತೀರಿಸಿಕೊಂಡವರ ಆಸರೆಯೂ ಇಲ್ಲದೇ, ಜೀವನದಲ್ಲಿ ಬೆಳಕು ಕಾಣದ ವ್ಯಥೆಯನ್ನು 'ಕಣ್ಣ ಬೆಳಕಿನ ಕಡೆಗೆ' ಎಂಬಲ್ಲಿ ಹರಳುಗಟ್ಟಿದೆ.

ಕಾಲ ಬಂದನು ಕಾಡಿ ನೂಕಿ ಹೋದನು ಗಾಡಿ
ವರುಷಗಳು ಉರುಳಿರಲು ಇಲ್ಲ ಹರುಷ
ಬಂದರೆಷ್ಟೋ ಜನರು ತಂದರೆಷ್ಟೋ ನೋವ
ಹೊತ್ತು ಹೋದರು ಒಲವ ತುಂಬಿ ಹಂಡೆಯಲಿ
ಎಲ್ಲಿ ಹೋದರು ಎನ್ನ ಒಲವ ಉಂಡವರು
ಎಲ್ಲಿ ಹೋದರು ಎನ್ನ ಬದುಕ ಕಿತ್ತವರು
ಜೊಳ್ಳು ಬೀಜವ ಬಿತ್ತಿ ಮುಳ್ಳು ಮರಗಳು ಬೆಳೆಸಿ
ಕಳ್ಳ ನಾಟಕವನಾಡೋ ಕೃಷ್ಣ ಸಂತತಿಯವರು

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 261)

ಇಲ್ಲಿ ಹೆಣ್ಣಿನ ಅಸಹಾಯಕತೆಗೆ ಆಕೆಯಲ್ಲಿ ಅಡಗಿರುವ ಮುಗ್ಧತೆಯೇ ಕಾರಣ. ಈ ಮುಗ್ಧತೆಯ ಸಂಪೂರ್ಣ ಲಾಭ ಪಡೆದವರು ದಲಿತೇತರು. ಹೆಣ್ಣಿನ ದೇಹವನ್ನು ಸುಖದ ಅಸ್ತ್ರವಾಗಿಸಿಕೊಂಡು, ಒಲವಿನ ಮಾತನಾಡಿ ಮೋಸಗೊಳಿಸಿ ಈಗ ಬದುಕುವ ಯೋಗ್ಯತೆಯನ್ನು ಕಿತ್ತು, ಯಾರಿಗೂ ಉಪಯೋಗವಾಗದಂತೆ, ಯಾರಿಂದಲೂ ಉಪಯೋಗ ಪಡೆಯದಂತೆ ಜೀವನವನ್ನು ನಶ್ವರಗೊಳಿಸುವವರ ವಿರುದ್ಧ ಇಲ್ಲಿನ ಹೆಣ್ಣಿಗೆ ಸಿಟ್ಟಿದೆ. ಈ ರೀತಿಯ ಶೋಷಣೆಗೆ ಕಾರಣರಾದವರನ್ನು ನಾಜೂಕಾಗಿಯೇ ಹುಡುಕುವ ಮೂಲಕ ಪ್ರತಿಭಟಿಸುತ್ತಿದ್ದಾಳೆ.

ಲೈಂಗಿಕ ಶೋಷಣೆ ನೀಡುವವರಿಗೆ ಹೆಣ್ಣಿನ ಅಸಹಾಯಕತೆಯೇ ಬಂಡವಾಳ. ಹೆಣ್ಣು ತನಗೆ ಲೈಂಗಿಕ ಕಿರುಕುಳ ಕೊಟ್ಟರೂ ಅದನ್ನು ಇನ್ನೊಬ್ಬರಲ್ಲಿ ಹೇಳಿಕೊಳ್ಳಲು ಈ ಅಸಹಾಯಕತೆ ಅಡ್ಡಿ ಬರುತ್ತದೆ.

ಇದನ್ನು ತಿಳಿದೇ ದಲಿತೇತರರು ಅವಳಲ್ಲಿ ಲೈಂಗಿಕ ಕ್ರಿಯೆಗೆ ತೊಡಗುತ್ತಾರೆ. ಆಕೆ ಯಾವ ರೀತಿಯ ಕಾಮುಕರ ಸೆರೆಗೆ ಬೀಳುವಳು ಎಂಬುದನ್ನು 'ಕಂಡೆ ನನ್ನವರ ಒಂದು ದಿವಸ' ಎಂಬ ಪದ್ಯವು ವಿವರಿಸುತ್ತಾದೆ.

ಸಪ್ತಸಾಗರವೆದ್ದು ಬರ ಸೆಳೆದುಕೊಂಡಂತೆ
ಕಾಮುಕರ ಸರಪಳಿಗೆ ಒಳಗಾದಳು
ಬೇಟೆಗಾರರು ಎಸೆದ ಬಲೆಯೊಡನೆ ಸೆಣಸುತ್ತ
ಪಂಜುಗಳ ಪಹರೆಯಲಿ ಮರೆಯಾದಳು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 97)

ಒಬ್ಬ ಬೇಟೆಗಾರನಿಗೆ ಬೇಟೆಯೇ ಮುಖ್ಯ. ಕಾಮುಕ ಮತ್ತು ಬೇಟೆಗಾರ ಇಬ್ಬರೂ ಒಂದೇ ರೀತಿಯ ಮನಸ್ಥಿತಿಯವರು ಎಂಬುದು ಕವಿಯ ಕಲ್ಪನೆ. ಸಾಗರ ಎಲ್ಲವನ್ನೂ ಅಪೋಷನಗೊಳಿಸಿಕೊಳ್ಳುವಂತೆ ಕಾಮುಕರು ಹೆಣ್ಣಿನ ಶೀಲವನ್ನು ಹೀರುತ್ತಾರೆಂದು ಬಗೆದಿದ್ದಾರೆ. ಕವಿಗೆ ತನ್ನವಳ ಸ್ಥಿತಿ ನೋಡಿ, ಈ ಸ್ಥಿತಿಗೆ ಕಾರಣರಾದವರನ್ನು ಸಾಗರದ ಆರ್ಭಟಕ್ಕೆ ಬೇಟೆಗಾರನ ಬೇಟೆಗೆ ಹೋಲಿಸುವ ಮೂಲಕ ಪ್ರತಿಭಟಿಸುತ್ತಿದ್ದಾರೆ.

ಲೈಂಗಿಕ ಸುಖ ಪಡೆದವರಿಗೆ ಒಂದು ರೀತಿಯ ನೆಮ್ಮದಿ ಇದ್ದರೇ,ಲೈಂಗಿಕ ಶೋಷಣೆ ಅನುಭವಿಸಿದವರಿಗೆ ಒಂದು ಸಂಕಟವಿರುತ್ತದೆ. ಈ ಸಂಕಟವನ್ನು ತನ್ನವರಲ್ಲಿ ಹೇಳಿಕೊಳ್ಳಲಾಗದು, ಅದನ್ನು ಅನುಭವಿಸಲೂ ಆಗದು. ಹೇಳಿಕೊಂಡರೆ ಆಡಿಕೊಂಡು ನಗುತ್ತಾರೆ ಎಂಬ ಅಳುಕು ಆಕೆಯಲ್ಲಿ ಮೂಡಿರುತ್ತದೆ. ಆದರೆ ಆಕೆಯ ಸಂಕಟವನ್ನು ಕವಿ 'ಬಿಳಿಯ ಹುಡುಗ ಮತ್ತು ಕಪ್ಪು ಹೆಣ್ಣಿನ ಯುದ್ಧ' ಪದ್ಯದಲ್ಲಿ ತೆರೆದಿಡುತ್ತಾರೆ.

ಅವಳ ನಗುವಿದೆ, ಸೋತವರ ಕಣ್ಣುಗಳಲ್ಲಿ
ನಿರುತ್ಸಾಹವಿದೆ ಗೆದ್ದವರ ತೋಳುಗಳಲ್ಲಿ
ಸರಪಳಿ ಕಟ್ಟಿ ಎಳೆವ ಸಣ್ಣ ನೋವಿದೆ
ಅವಳ ನಡುವಲ್ಲಿ

(ಸುಬ್ಬು ಹೊಲೆಯರ್, ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು, 2003, ಪುಟ 44)

ಇಲ್ಲಿನ ಬಿಳಿಯ ಹುಡುಗ 'ದಲಿತೇತರ', ಕಪ್ಪು ಹೆಣ್ಣು 'ಅಸ್ಪೃಶ್ಯ ಹೆಣ್ಣು' ಬಿಳಿಯ ಹುಡುಗನಿಗೆ ತಾನು ಕಾಮ ದಾಹ ತೀರಿಸಿಕೊಂಡರು ಒಂದು ರೀತಿಯ ನಿರುತ್ಸಾಹ ಮೂಡಿ, ಷಂಡನಂತೆ ವರ್ತಿಸುತ್ತಿದ್ದಾನೆ. ಸಂಪೂರ್ಣವಾಗಿ ಸೋತ ಹೆಣ್ಣಿನಲ್ಲಿ ಸರಪಳಿ ಬಿಗಿದಂಥ ಅನುಭವವಾಗಿ ಲೈಂಗಿಕ ನೋವಿನ ತೀವ್ರತೆ ಹೆಚ್ಚಾಗಿ, ತನ್ನವರ ಕಣ್ಣುಗಳಲ್ಲಿ ಹಿಂದೆ ತಾನು

ಹೊಂದಿದ ಆನಂದವನ್ನು, ಆನಂದದ ಇತಿಹಾಸವನ್ನು ಮೆಲುಕು ಹಾಕುವಷ್ಟಕ್ಕೆ ಮಾತ್ರ ಅವಳ ಸಂತೋಷ ಇದೆ. ದಲಿತ ಸಮುದಾಯದ ಹೆಣ್ಣಿನ ಮೇಲೆ ನಡೆದ ಲೈಂಗಿಕ ಶೋಷಣೆಗೆ ಹೆಣ್ಣು ಮಾನಸಿಕ ಯಾತನೆ ಅನುಭವಿಸಿದಕ್ಕೆ ನಿದರ್ಶನವೆನೆಂದರೆ ಅರವಿಂದ ಮಾಲಗತ್ತಿರವರ 'ಒಡ್ಲ ಸಂಕಟ' ಎಂಬ ಪದ್ಯ.

ನಮ್ಮೆಂಡ್ರು ಎಷ್ಟು ಚಲ್ವೆರಿದ್ರುನು
ನಾವು ದೀಪ ಹಚ್ಚುದು ಸವಕಾರ ಹಟ್ಯಾಗ
ನಮ್ಮ ಸಾವಕಾರ ಹಚ್ಚುದು ನಮ್ಮ ಗುಡ್ಸಲದಾಗ
ಹೂಂ, ಹಿಂಗ ಎಲ್ಲಾ ತಿರುಮುರು
ಅವುರ್ದು ಒಳಮುಚಗ, ನಮ್ದು ಹೊರಮುಚಗ

(ಕಾವ್ಯ ಕುಂಕುಮೆ, ಶಶಿಕಲಾ ಎಸ್.ಡಿ. (ಸಂ.), 2009, ಪುಟ 36)

ಇಲ್ಲಿ ಸಮುದಾಯದ ಗಂಡಿಗೆ ಆದ ಅವಮಾನವನ್ನು ಕಾವ್ಯದಲ್ಲಿ ವಿವರಿಸಿದ್ದಾರೆ. ದಲಿತರ ಕೆಲಸ ಸಾವುಕಾರನ ಮನೆಯಲ್ಲಿ 'ಜೀತ' ಮಾಡಿಕೊಂಡು ಇರುವುದು. ಈ ಸಮಯದಲ್ಲಿ ಸಾವುಕಾರ ಇವರ ಮನೆಗೆ ಹೋಗಿ, ಇವರ ಹೆಂಡಿರನ್ನು ಅನುಭವಿಸುತ್ತಿದ್ದರು ಎಂಬ ಅಂಶ ಇಲ್ಲಿ ವ್ಯಕ್ತವಾಗಿದೆ. ಈ ಅವಮಾನವನ್ನು ಅನುಭವಿಸಿದ ದಲಿತನೊಬ್ಬ ತನಗೆ ಮರ್ಯಾದೆ ಹೋದರೂ ಸರಿಯೇ, ಇದರ ವಿರುದ್ಧ ದನಿಯೆತ್ತಿ ಸಾವುಕಾರರಿಗೆ, ಅವರ ನಡವಳಿಕೆಯನ್ನು ಮರೆಮಾಚದೆ ಪ್ರಸ್ತಾಪಿಸಿ ವಿರೋಧಿಸಿದ್ದಾನೆ. ಇಲ್ಲಿ ವ್ಯವಸ್ಥೆಯ ನಾಚಿಗೇಡಿನ ಕೃತ್ಯ ಹಾಗೂ ದಲಿತ ಗಂಡಸರ ಅಸಹಾಯಕತೆ ಎರಡನ್ನು ಕಾಣಬಹುದು. ನೊಂದ ದಲಿತ, 'ನಾವು ಹೊರಗೆ ಇದ್ದು ದುಡಿಯುವ ಮಂದಿ, ಸಾಹುಕಾರರು ನಮ್ಮ ಮನೆಯ ಒಳಗೆ ದುಡಿಯುವವರು' ಎಂದು ನೊಂದು ತನಗಾದ ವೇದನೆಯನ್ನು ಪ್ರತಿಭಟಿಸುತ್ತಿದ್ದಾನೆ.

ಒಟ್ಟು ಅಧ್ಯಾಯದಲ್ಲಿ ಬಳಸಿಕೊಂಡ ಕವನಗಳ ಆಧಾರದಿಂದ ದಲಿತ ಹೆಣ್ಣಿಗೆ 'ಜಾತಿ'ಯ ವಿಷಯವಾಗಿ ಲೈಂಗಿಕ ಅವಹೇಳನ ಮಾಡಿ, ವ್ಯವಸ್ಥೆ ತನ್ನ ಕಾಮ ತೃಷೆಯನ್ನು ನಿವಾರಿಸಿಕೊಂಡಿದ್ದರ ವಿರುದ್ಧ ಕವಿ ಪ್ರತಿಭಟಿಸಿರುವ ಅಂಶ, ಹೆಣ್ಣಿನ ಮೌಢ್ಯ ಸಂಪ್ರದಾಯದ ಲಾಭ ಪಡೆದು, ಲೈಂಗಿಕ ಶೋಷಣೆ ನೀಡಿರುವುದರ ವಿರುದ್ಧ ಕಾವ್ಯದ ಮೂಲಕ ಪ್ರತಿಭಟಿಸಿರುವುದನ್ನು, ಧಾರ್ಮಿಕತೆಯ ಹೆಸರಿನಲ್ಲಿ ಬಲವಂತವಾಗಿ ಬಣ್ಣ ಹಚ್ಚುವ ಮೂಲಕ ಶೋಷಣೆ ನೀಡಿರುವುದನ್ನು ಕಾಣಬಹುದು.

ಆದರೆ ದಲಿತ ಹೆಣ್ಣಿಗೆ ಲೈಂಗಿಕ ಶೋಷಣೆಯಿಂದ ಉಂಟಾದ ಮಾನಸಿಕ ತುಮುಲಗಳನ್ನು, ಇದರ ವಿರುದ್ಧ ವಿರೋಧಿಸುವ ಮನಸ್ಸಿದ್ದರೂ, ಅದಕ್ಕೆ ವ್ಯವಸ್ಥೆಯಾಗಲಿ, ಸಮುದಾಯವಾಗಲಿ ಅವಕಾಶ ನೀಡದಿರುವುದು ಒಂದು ರೀತಿಯ ಶೋಷಣೆ ಎಂಬ ಅಂಶವನ್ನು, ತನ್ನ ಸಮುದಾಯದ ಹೆಣ್ಣಿಗೆ ಆಗಿರುವ ಶೋಷಣೆಯನ್ನು ಪುರುಷರು ಪ್ರಶ್ನಿಸಿದರೆ ಹೊರತು ಬೇರಾವ ರೀತಿಯ ಪ್ರತಿಭಟನೆ ಮಾಡದೆ, ತಮ್ಮ ಒಳಗೆ ಆ ದ್ವೇಷದ ಹೊಗೆ ಹೊತ್ತು ನಡೆದರು. ಕೊನೆಗೆ ಇಂಥ ದೌರ್ಜನ್ಯಕ್ಕೆಲ್ಲ ಪೂರ್ಣ ವಿರಾಮ ಹಾಕಲು ಪ್ರಯತ್ನ ಮಾಡಿದ್ದು ಕಾವ್ಯ ಪ್ರಕಾರ. ಕಾವ್ಯದಿಂದ ಪ್ರತಿಭಟನೆ ಮಾಡಿದ ಕ್ಷಣ ಎಲ್ಲಾ ಸರಿ ಹೋಯ್ತು ಎನ್ನುವ ಬದಲು, ವ್ಯವಸ್ಥೆಗೆ ಬಿಸಿ ಮುಟ್ಟಿಸಿ, ಲೈಂಗಿಕ ಶೋಷಣೆಯ ಪ್ರಮಾಣವನ್ನು ಕಡಿಮೆ ಮಾಡುವ ಪ್ರಯತ್ನವಂತೂ ದಲಿತ ಕಾವ್ಯಗಳಿಂದ ಸಾಧ್ಯವಾಯಿತು ಎಂಬುದು ನನ್ನ ಅಭಿಪ್ರಾಯ.

## ಉ. ಅರಿವಿನ ವಂಚನೆ : ಪ್ರತಿಭಟನೆ

'ಅರಿವಿನ ವಂಚನೆಗೆ' ಮೂಲ ಕಾರಣ ಅಕ್ಷರ. ಈ ಅಕ್ಷರ ವಂಚನೆಗೆ ಕಾರಣರಾದವರು ಮತ್ತು ಒಳಗಾದವರ ಬಗ್ಗೆ ದಲಿತ ಕವಿಗಳು ತಮ್ಮ ಕಾವ್ಯದ ಮೂಲಕ ಬೆಳಕು ಚಲ್ಲಿದ್ದಾರೆ. ಅಕ್ಷರ ವಂಚನೆಯಾಗಲು ಒಂದು ಕಡೆ ಜಾತಿ, ಒಂದು ಕಡೆ ಆರ್ಥಿಕ ಸ್ಥಿತಿಗಳೆರಡೂ ದಲಿತರನ್ನು ಕಾಡುತ್ತಿದ್ದರೆ, ಇನ್ನೊಂದು ಬದಿಯಲ್ಲಿ 'ಅಕ್ಷರ'ವೆಂಬುದು ಉಳ್ಳವರ ಆಸ್ತಿ ಎಂಬ 'ಮೂಢ ಪ್ರಜ್ಞೆ 'ಚಾಲ್ತಿಯಲ್ಲಿರುವುದು ದಲಿತ ಸಮುದಾಯದ ಕಲಿಕಾಭಿವೃದ್ಧಿಗೆ ಅಡ್ಡಿ ಉಂಟುಮಾಡಿದೆ.

'ಅಕ್ಷರ' ಕಲಿತರೆ ಮಾತ್ರ ಅಭಿವೃದ್ಧಿ ಸಾಧ್ಯವೆಂದು ನಂಬುವ ದಲಿತ ಕವಿವರ್ಗ ತಮಗೆ ಸಾಧ್ಯವಾಗುವ ಮಟ್ಟಿಗೆ ಅಕ್ಷರದ ಮಹತ್ವ, ಅಕ್ಷರ ಕಲಿಯದೆ ಇದ್ದರೆ ಎದುರಾಗುವ ಸಮಸ್ಯೆ, ತಮ್ಮ ವರ್ಗದವರು ಅಕ್ಷರ ಕಲಿಯದೆ ಗುಲಾಮಗಿರಿ ಅನುಭವಿಸಿದ ದಿನಗಳ ಹಿನ್ನೋಟಗಳನ್ನು ಕಾವ್ಯ ರೂಪದಲ್ಲಿ ತಂದರು. ಮುಂದಿನ ಪೀಳಿಗೆಗೆ 'ಅಕ್ಷರ' ಒಂದೇ ದಲಿತ ಸಮುದಾಯದ ಆಸ್ತಿಯಾಗಬೇಕೆಂಬ ದೃಢ ಸಂಕಲ್ಪ ತೊಟ್ಟರು.

ದಲಿತ ಸಮುದಾಯಕ್ಕೆ 'ಅಕ್ಷರ' ವಂಚನೆಯಾಗಲು ಮೂಲ ಕಾರಣ 'ವ್ಯವಸ್ಥೆ'. ಆದರೆ 'ವ್ಯವಸ್ಥೆ' ಒಂದೇ ದಲಿತರ ಅನಕ್ಷರತೆಗೆ ಕಾರಣವಾಯಿತೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ದಲಿತರಲ್ಲಿ ಅಡಗಿರುವ ಮೌಢ್ಯತೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಪ್ರಶ್ನೆಗೆ ಸಿಗುವ ಸ್ಪಷ್ಟ ಉತ್ತರವೆಂದರೆ ದಲಿತರಲ್ಲೇ ಕೆಲವರು ಅಕ್ಷರ ಕಲಿಕೆಗೆ ನಿರಾಸಕ್ತಿ ತೋರುವುದರ ಜತೆಗೆ ಇತರ ದಲಿತರಲ್ಲೂ ನಿರಾಸಕ್ತಿ ಉಂಟುಮಾಡುವ ಕೆಲವು ಸನ್ನಿವೇಶಗಳನ್ನು ಕಾಣಬಹುದು. ಸಮಾಜದ ಮೇಲ್ 'ವ್ಯವಸ್ಥೆ'ಗೆ ಹುಟ್ಟಿನಿಂದಲೇ ಕಲಿಕೆ ಎಂಬುದು ಬಂದಿರುತ್ತದೆ. ಆದರೆ 'ದಲಿತರು ಇದನ್ನು ಸಂಘರ್ಷದಿಂದ, ಹೋರಾಟದಿಂದ, ಸವಾಲಿನ ರೀತಿಯಲ್ಲಿ ಪಡೆದುಕೊಂಡರು. ಹುಟ್ಟಿನಿಂದ ಪ್ರತಿಯೊಬ್ಬರಲ್ಲೂ 'ಜ್ಞಾನ'ವೆಂಬುದು ಇರುತ್ತದೆ. ಇಲ್ಲಿ ಬಡವ, ಬಲ್ಲಿದ ಎಂಬ ಕಟ್ಟು ಪಾಡುಗಳಿರುವುದಿಲ್ಲ. ಆದರೆ 'ಜಾತಿ', 'ವರ್ಗ', 'ವರ್ಣ'ವೆಂದು ವಿಂಗಡನೆಯಾದಾಗ ಕಲಿಯದೆ, ಜ್ಞಾನ ಎಂಬುದು ಒಂದು ವರ್ಗಕ್ಕೆ ಮಾತ್ರ ಸೀಮಿತವಾಗಿತ್ತು. ಹಾಗೂ ದಲಿತರು ಉಳ್ಳವರ ಸಂಘರ್ಷದೊಂದಿಗೆ 'ಜ್ಞಾನ' ಪಡೆದು ತನ್ನ ಸಮುದಾಯಕ್ಕಾದ 'ಅರಿವಿನ ವಂಚನೆ'ಯನ್ನು ಕಾವ್ಯದಲ್ಲಿ ತಂದು ಪ್ರತಿಭಟಿಸುತ್ತಾರೆ.

ಮೊದಲೇ ಹೇಳಿದಂತೆ ದಲಿತರ ಅಕ್ಷರ ಕಲಿಕೆಗೆ 'ವ್ಯವಸ್ಥೆ'ಯಲ್ಲಿ ನಿರಾಸಕ್ತಿ ಉಂಟಾಗಲು ಕಾರಣ 'ಜಾತಿ' ಪದ್ಧತಿ. ಸ್ಪೃಶ್ಯರಷ್ಟೇ ಕಲಿಕೆಗೆ ಯೋಗ್ಯರೆಂದು, 'ಅಸ್ಪೃಶ್ಯ'ರು ಕಲಿಕೆಗೆ ಯೋಗ್ಯರಲ್ಲ ಎಂಬ ಮೌಢ್ಯತೆ 'ವ್ಯವಸ್ಥೆ'ಯಲ್ಲಿ ಆಳವಾಗಿ ಬೇರೂರಿರುವುದು ಹಾಗೂ ದಲಿತರಿಗೆ ಅಕ್ಷರ ಕಲಿಸಿದರೆ ಅಥವಾ ಕಲಿತರೆ ಇಲ್ಲಿಯವರೆಗೂ ಇವರಿಗೆ ಮಾಡಿರುವ 'ಆರ್ಥಿಕ' ವಂಚನೆ ಬಯಲಾಗುವುದೆಂಬ ಆತಂಕ ಇತರರಲ್ಲೂ ಮನೆ ಮಾಡಿರುವುದು ದಲಿತರ ಕಲಿಕೆಗೆ ತೊಡಕುಂಟು ಮಾಡಿದೆ. ದಲಿತರಲ್ಲೇ ಓದಿನ ಬಗ್ಗೆ ನಿರಾಸಕ್ತಿ ಹುಟ್ಟಲು ಕಾರಣ, 'ವ್ಯವಸ್ಥೆ'ಯನ್ನು ಎದುರು ಹಾಕಿಕೊಂಡು ಓದಲು ಹೋದರೆ ಅಥವಾ ತಮ್ಮ ಮಕ್ಕಳನ್ನು ಓದಲು ಶಾಲೆಗೆ ಕಳುಹಿಸಿದರೆ ಅವರಿಂದ ನಿಂದನೆಗೆ ಗುರಿಯಾಗಬೇಕಾಗಿತ್ತು.

ಯಾವುದೋ ಕಾರಣಕ್ಕೆ ಪಡೆದ ಅಲ್ಪ ಸಾಲಕ್ಕೆ ಮಕ್ಕಳನ್ನು 'ಜೀತ'ಕ್ಕೆ ಇಟ್ಟಾಗ ಓದಿನ ಬಯಕೆಯನ್ನು ಕಾಣಲು ಸಾಧ್ಯವಾಗುತ್ತಿರಲಿಲ್ಲ. ಲೆಕ್ಕವಿಲ್ಲದ ಸಾಲಕ್ಕೆ ಕೊನೆ ಇಲ್ಲದಾಗಿ, ಆಯಸ್ಸು ಪೂರ್ತಿ ಉಳ್ಳವರ ಮನೆಯಲ್ಲಿರುವಾಗ ಶಾಲೆಯ ದಾರಿ ಇವರಿಗೆ ಮರೀಚಿಕೆಯಾಗಿತ್ತು. ಇಂಥ ಸಂದರ್ಭದಲ್ಲೂ ಕೆಲವೊಂದು ದಲಿತರು ಅಕ್ಷರ ಕಲಿತು, ಅರಿವು ಪಡೆದು ತನ್ನವರ ಅರಿವಿನ ವಂಚನೆಗೆ ಕಾರಣಗಳನ್ನು ಕಾವ್ಯಗಳಲ್ಲಿ ಸೆರೆ ಹಿಡಿವ ಪ್ರಯತ್ನವನ್ನು ಮುಂದಿನ ಅಧ್ಯಯನದ ಬೆಳವಣಿಗೆಯಲ್ಲಿ ಕಾಣಬಹುದು. ದಲಿತ ಸಮುದಾಯವು ಪ್ರತ್ಯಕ್ಷವಾಗೋ, ಪರೋಕ್ಷವಾಗೋ ಅರಿವಿನಿಂದ ವಂಚಿತರಾಗಿದ್ದು, ಇದಕ್ಕೆ ಮೂಲಕಾರಣ ಕರ್ತರೆಂದರೆ ಮೇಲ್ವರ್ಗವೆಂಬ ವ್ಯವಸ್ಥೆ.ಬರೀ ಮೇಲ್ವರ್ಗದವರೇ ದಲಿತರ ಅರಿವಿಗೆ ಅಡ್ಡಿಯಾದರೆಂಬುದು ಅತಿಶಯೋಕ್ತಿ ಅಲ್ಲ. ಇಲ್ಲಿ ತಮ್ಮ ಬಗ್ಗೆ ಎಚ್ಚರಗೊಳ್ಳದ ಸ್ವತಃ ದಲಿತರೇ ಅರಿವಿನಿಂದ ವಂಚಿತರಾಗಿರುವುದು ಮತ್ತೊಂದು ವಿಶೇಷ. ದಲಿತರಲ್ಲಿದ್ದ ಅಜ್ಞಾನವನ್ನು ದೂರ ಮಾಡಲು ಡಾ. ಅಂಬೇಡ್ಕರ್‌ರವರು 'ಶಿಕ್ಷಣ, ಸಂಘಟನೆ, ಹೋರಾಟ' ಎಂದು ತೋರಿದ ದಾರಿಗೂ ತೆರೆದುಕೊಳ್ಳದೆ, ನೊಗಕ್ಕೆ ಕೊರಳು ಕೊಡುವ ದನದಂತೆ ಮತ್ತೆ ಮತ್ತೆ ಹಿಂದಿನಂತೆಯೇ ಹೆಜ್ಜೆ ಹಾಕಿದ್ದಕ್ಕೆ 'ನನ್ನ ಜನಗಳು' ಪದ್ಯದಲ್ಲಿ ಹೀಗೆ ಪ್ರತಿಕ್ರಿಯೆಗೊಂಡಿದೆ.

ಹಸಿವಿನಿಂದ ಸತ್ತೋರು ಸೈಜುಗಲ್ಲು ಹೊತ್ತೋರು
ವದೆಸಿಕೊಂಡು ವರಗಿದೋರು ನನ್ನ ಜನಗಳು
ಕಾಲುಕಯ್ಯಿ ಹಿಡಿಯೋರು ಕೈ ಮಡಗಿಸಿಕೊಳ್ಳೋರು
ಭಕ್ತರಪ್ಪ ಭಕ್ತರೋ ನನ್ನ ಜನಗಳು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 57)

ದಲಿತರು ತಮ್ಮ 'ಅರಿವಿನ ಕೊರತೆ'ಯ ದೆಸೆಯಿಂದ ಅನುಭವಿಸಿದ ನರಕ ಸದೃಶ ಜೀವನದ ಚಿತ್ರಣವನ್ನು ಮೇಲಿನ ಸಾಲುಗಳು ಸಾರುತ್ತಿವೆ. 'ವ್ಯವಸ್ಥೆ'ಗೆ ಶರಣಾಗಿ, ಅವರ ಅಡಿಯಾಳಾಗಿರುವುದು ಕವಿಯ ಆಕ್ರೋಶಕ್ಕೆ ಕಾರಣವಾಗಿದೆ. ತನ್ನವರ 'ಅಜ್ಞಾನ'ವನ್ನು ಪ್ರದರ್ಶನ ಮಾಡಿ ಮರುಗುವ ಹಾಗೂ ತನ್ನವರು ಸಾಮರ್ಥ್ಯವಂತರಾಗಿದ್ದರೂ, ಗುಲಾಮರಂತೆ ದುಡಿಯುತ್ತಿರುವುದಕ್ಕೆ ಕವಿ ಆಕ್ರೋಶಗೊಳ್ಳುತ್ತಾರೆ. ಸ್ವತಂತ್ರ ಭಾರತದಲ್ಲಿ ಬಡವರ ಮೇಲೆ ನಡೆಯುತ್ತಿರುವ ಅಜ್ಞಾನದ ಶೋಷಣೆ ನಿಲ್ಲಬೇಕೆಂಬ ಮರುಕ ವ್ಯಕ್ತವಾಗಿದೆ. ಒಬ್ಬ ಭಕ್ತನು ದೇವರಿಗೆ ಹೇಗೆ ವಿಧೇಯಕನಾಗಿ ತನ್ನನ್ನು ಅರ್ಪಿಸಿಕೊಳ್ಳುವನೋ ಅಂಥ ಮೂಢತೆ ದಲಿತರಲ್ಲಿ ಆವರಿಸಿರುವಂತೆ ಭಾಸವಾಗುತ್ತದೆ. ಇಲ್ಲಿ ದಲಿತರೇ 'ವ್ಯವಸ್ಥೆ'ಗೆ ದಾಸರಾಗಿರುವ ಅಂಶಗಳೂ ಕಂಡು ಬಂದಿದ್ದು ಕವಿ ಈ ಸ್ಥಿತಿಯನ್ನು ಆಕ್ರೋಶದಿಂದಲೇ ಪ್ರತಿಭಟಿಸುತ್ತಿದ್ದಾರೆ.

ದಲಿತರು ತಮ್ಮ ಅರಿವಿನ ಕೊರತೆಯಫಲವಾಗಿ ಮನೆ-ಮಠಗಳನ್ನು ಕಳೆದುಕೊಂಡು, ಸಾವು-ನೋವುಗಳಿಗೆ ಬಲಿಯಾಗಿ, ಗೋಳಿನ ಕಥೆಯಾದರೆ, ಇದರ ಲಾಭ ಪಡೆದ ಬಂಡವಾಳ ಶಾಹಿ ವರ್ಗವು ದಲಿತರ ಜಾಗವನ್ನು ತಮ್ಮ ಸ್ವಂತಕ್ಕೆ ಬಳಸಿಕೊಳ್ಳಲು ಮಾಡುವ ಹುನ್ನಾರವನ್ನು 'ಬಿದ್ದಾವು ಮನೆಗಳು' ಎಂಬ ಪದ್ಯದಲ್ಲಿ ಕಾಣಬಹುದು.

ಮಕ್ಕಳು ಮರಿಗಳು ಬಸರೀರು ಬಾಣಂತೀರು
ಇಲಿಗಳ ರೀತೀಲಿ ಚೆಲ್ಲಾಡಿ। ಹೋದರು
ಬಡವರ ಬಂಧುಗಳೆಲ್ಲವರೋ
ಬಡವರ ಹೆಸರೇಳಿ ಪಟ್ಟಕ್ಕೆ ಬಂದೋರು
ಬಡವರ ಚಟ್ಟವ ಕಟ್ಟಿಸಿ। ಮಣ್ಮಾಡಿ
ಗುಡಿಸಲುಗಳನುಂಗಿ ನಗುತಾರಲ್ಲೊ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 91)

ಇಲ್ಲಿನ ಸಾಲುಗಳಲ್ಲಿ 'ವ್ಯವಸ್ಥೆ'ಯಿಂದ ಮೋಸ ಹೋಗಿ, ತನ್ನ ಹಾಗೂ ತನ್ನವರನ್ನೆಲ್ಲ ಕಳೆದುಕೊಂಡು, ಇದಕ್ಕೆ ಕಾರಣ ಪುರುಷರ ವಂಚನಾ ಗುಣವನ್ನು ಹೊರಹಾಕುತ್ತ ಪ್ರತಿಭಟಿಸುತ್ತಿದ್ದಾರೆ. 'ವ್ಯವಸ್ಥೆ'ಯು ದಲಿತರ ಮನೆಗಳನ್ನು ಕೆಡವಿ, ಅಲ್ಲಿದ್ದ ಮಕ್ಕಳು, ಮರಿಗಳು, ಬಸುರೀ, ಬಾಣಂತಿಯರು ಇಲಿಯಂತೆ ಹೆಣವಾದ ಚಿತ್ರಣ ಇಲ್ಲಿ ಮೂಡಿ ಬಂದಿದೆ.

ಇಂತಹ ಸ್ಥಿತಿಯಲ್ಲೂ ಅಸಹಾಯಕರಾದ ದಲಿತರ ಕೂಗಿಗೆ ಯಾರೊಬ್ಬರ ಮನ ಕರಗಲಿಲ್ಲ ಎಂಬುದು ಕವಿಯ ಆಕ್ರೋಶದ ಜತೆಗೆ ಅರಿವಿನ ವಂಚನೆಯ ಪ್ರದರ್ಶನ ಕೂಡ ಇಲ್ಲಿ ಪ್ರಧಾನವಾಗುತ್ತದೆ. ದಲಿತರ ಅಜ್ಞಾನದ ಲಾಭ ಪಡೆದ ಬಂಡವಾಳ ಶಾಹಿಯು, ಸಮುದಾಯವನ್ನು ಬೀದಿ ಪಾಲು ಮಾಡಿರುವ ಸನ್ನಿವೇಶವನ್ನು ಕವಿ ಪ್ರತಿಭಟಿಸುತ್ತಿದ್ದಾರೆ. 'ವ್ಯವಸ್ಥೆ'ಗೆ ದಲಿತರ ಅರಿವಿನ ವಂಚನೆಯೇ ವರವಾಯಿತ್ತಲ್ಲ ಎಂಬ ಆಕ್ರೋಶವು ಪ್ರತಿಭಟನೆಗೆ ದಾರಿ ಮಾಡಿಕೊಟ್ಟಿದೆ.

ದಲಿತರ ಅರಿವಿನ ವಂಚನೆಯಿಂದಾದ ಎಲ್ಲಾ ಬಗೆಯ ನೋವು, ಸಂಕಟಗಳನ್ನು ಸಮಗ್ರವಾಗಿ, ಪರಿಣಾಮಕಾರಿಯಾಗಿ, ಇತರರಿಗೆ ಸ್ವಚ್ಛಗನ್ನಡಿಯಂತೆ, ವ್ಯಾಖ್ಯಾನ ಸಹಿತವಾಗಿ ಹೃದಯ ತಲುಪುವ ಶಕ್ತಿ ಹೊಂದಿದೆ. ಇದು 'ಚೋಮನ ಮಕ್ಕಳ ಹಾಡು' ಎಂಬ ಪದ್ಯದಲ್ಲಿ ಚಿತ್ರಿತವಾಗಿದೆ.

ಒಡೆಯರ ಸುಂದರ ತೋಟದ ಒಳಗೆ
ಅರಳುವ ಹೂವಿನ ದಳದಳದಲ್ಲಿ
ಅಪ್ಪನ ಬೆವರಿನ ರಕ್ತವು ಸೋರಿ
ಕೆಂಪಾದವು ಹೂವು
ದಣಿಗಳ ಹಬ್ಬದ ಊಟಕ್ಕಾ
ಖಂಡವ ಕಿತ್ತು ಕೊಟ್ಟವರು
ನೆಲದಾಧಾರ ತಪ್ಪಿದ ಜನರು
ಮುಗಿಲಿನ ಆಸರೆ ಸಿಗದವರು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 101)

ದಲಿತರು ಅರಿವಿನ ವಂಚನೆಯಫಲದಿಂದ ಶೋಷಣೆ ಅನುಭವಿಸುತ್ತಿರುವುದನ್ನು ಕವಿ ಸೌಮ್ಯವಾಗಿಯೇ ಪ್ರತಿಭಟಿಸುತ್ತಿದ್ದಾರೆ. ಉಳ್ಳವರಿಗೆ ಪ್ರತಿ ಕೆಲಸದಲ್ಲೂ ದಲಿತರ ಪಾತ್ರ ಪ್ರಮುಖವಾಗಿದ್ದರೂ, ಇವರನ್ನು ಮೇಲೆತ್ತುವ ಪ್ರಯತ್ನ ಮಾಡಲಿಲ್ಲವೆಂದು ಕವಿ ಆಕ್ರೋಶಕ್ಕೆ ಒಳಗಾಗಿದ್ದರೆ. ಅಪ್ಪನ ದುಡಿಮೆಯ ಪ್ರತಿಫಲದ ರೂಪವನ್ನು ಕೊಡುವ ಈ ಸಾಲುಗಳಲ್ಲಿ 'ಚೋಮ' ಬದಲಾವಣೆ ಬಯಸಿದರೂ, 'ವ್ಯವಸ್ಥೆ' ಮಾತ್ರ ಅದಕ್ಕೆ ಅವಕಾಶ ಕೊಡದೆ, ಶೋಷಣೆ ಮಾಡಲು ಕಾರಣ ಇವನು 'ಅಸ್ಪೃಶ್ಯ' ಎಂಬುದು. ಇವನ ಅರಿವಿನ ವಂಚನೆಯ ಲಾಭ ಪಡೆದು, ನೆಲದ ಆಸೆಯನ್ನು ಕಿತ್ತುಕೊಂಡು, ವಂಚಿಸುವ 'ವ್ಯವಸ್ಥೆ'ಯ ವಿರುದ್ಧ ಕವಿಗೆ ಸಿಟ್ಟಿದೆ.

ಅರಿವಿನ ವಂಚನೆಯ ಕತ್ತಲೆಯಿಂದ 'ಚೋಮನ ಮಕ್ಕಳ' ಭಿನ್ನಹದೊಂದಿಗೆ, ಅವರ ಅತಂತ್ರ ಬದುಕಿನ ಸಾಕ್ಷಿ ಚಿತ್ರಣದಲ್ಲಿ ಕವಿತೆ ಮುಕ್ತಾಯವಾಗುತ್ತದೆ. ದಲಿತರಿಗೆ ಸ್ವಂತ ಇತಿಹಾಸವಿಲ್ಲ. ಹಿರಿಯರು ಹಿಡಿದ ಅಜ್ಞಾನದ ಮಾರ್ಗದಲ್ಲೇ ನಡೆದು, ಗುರುತುಗಳಾಗಿ ಬದುಕನ್ನು ಸವೆಸಿದವರು ಇವರು. ಅರಿವಿನ ವಂಚನೆಯದಾರಿಯಲ್ಲಿ ಸಾಗಿದ ದಲಿತರು 'ಊಳಿಗಮಾನ್ಯ ವ್ಯವಸ್ಥೆ'ಯ ಶೋಷಣೆಗೆ ಒಳಗಾಗುತ್ತಿರುವುದನ್ನು ಧ್ವನಿ ಪೂರ್ಣವಾಗಿ 'ಹೀಗೊಂದು ಬದುಕು' ಎಂಬ ಕವನ ಕಟ್ಟಿಕೊಡುತ್ತದೆ.

ಕರೆಯುವ ಎಮ್ಮೆ, ಹಸು
ಗಳನ್ನು ಮೇಯಿಸಿ, ಕುರಿ
ಗಳನ್ನು ಕೊಬ್ಬಿಸುವವಳು
ನೀರು ಕುಡಿಸಿ ಮೈ ತಿಕ್ಕಿ
ತಾ ನೆಳಲು ಕಾಣದೆ ನಿಲ್ಲುವವಳು ಅವ್ವ
ತನ್ನ ಕೂಸಿಗಿಲ್ಲ
ಚಟಾಕು ಹಾಲು
ಕುರಿ ಮಾರಿ ಸರ ಮಾಡಿಸುವುದು
ಮತ್ಯಾರದೋ ಕೊರಳಿಗೆ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 33)

ದಲಿತ ಹೆಣ್ಣು ಮೇಲ್ವರ್ಗದವರ ಮನೆಯಲ್ಲಿ ದುಡಿಯುವ 'ಪರಿ'ಯನ್ನು ಅನಾವರಣಗೊಳಿಸುವ ಹಾಗೂ ಈಕೆಯ ದುಡಿಮೆಯಿಂದ ಉದ್ಧಾರವಾಗುವ 'ವ್ಯವಸ್ಥೆ'ಯ ಚಿತ್ರಣವನ್ನು ಕಾಣಬಹುದು. ಕಷ್ಟ ಪಡುವ ಮಂದಿ ಕಷ್ಟದಲ್ಲೇ ಹುಟ್ಟಿ, ಕಷ್ಟದಲ್ಲೇ ಜೀವಿಸುತ್ತಾರೆಂಬುದಕ್ಕೆ ಈ ಸಾಲು ಸಾಕ್ಷಿ. ಕವಿಯ ಪ್ರತಿಭಟನೆಗೆ ಮೂಲ ಕಾರಣ ಸಮುದಾಯದ ಹೆಣ್ಣು ತಾನು ತಿಂದು ಕೊಬ್ಬಿ ಕೊಳ್ಳುವ ಬದಲು, ತನ್ನ ಒಡೆಯರ ಮನೆಯ ಹಸು, ಎಮ್ಮೆ, ಕುರಿಗಳನ್ನು ಮೇಯಿಸಿ, ಅವರಿಗೆ ಒಪ್ಪಿಸಿದರೆ, ಅದರ ಲಾಭವನ್ನು ಮೇಯಿಸಿದವರಿಗೆ ದಕ್ಕಲು ಬಿಡದ 'ವ್ಯವಸ್ಥೆ' ಪೂರ್ಣ ಪ್ರಮಾಣದಲ್ಲಿ ವಂಚಿಸುತ್ತಿರುವುದನ್ನು ಇಲ್ಲಿ ಕಾಣಬಹುದಾಗಿದೆ. ದಲಿತರು ಅರಿವಿನ ವಂಚನೆಯಿಂದ ಮುಕ್ತರಾಗಿ ತಮ್ಮದೇ ಆದ ಸಂಸ್ಕೃತಿಯನ್ನು ಸೃಷ್ಟಿಸಿ, ಸ್ವಾಭಿಮಾನದ ಜೀವನ ನಡೆಸಬೇಕೆಂದು ಬಯಸಿದರೂ, 'ವ್ಯವಸ್ಥೆ'ಗೆ ಅಂಟಿಕೊಂಡಿರುವ ಸಮುದಾಯವು 'ಅಜ್ಞಾನ' ಎಂಬ 'ಸಂಸ್ಕೃತಿ'ಗೆ ತಲೆಕೊಟ್ಟು ನಿದ್ದೆ ಮಾಡುತ್ತಿರುವುದು ಕವಿಗೆ ಮುಜುಗರ ತಂದಿದೆ.

ದಲಿತರಲ್ಲಿರುವ ಅರಿವಿನ ವಂಚನೆಯನ್ನು ಬಡಿದೊಡಿಸುವ ಶಕ್ತಿ ದಲಿತ ಕಾವ್ಯಗಳಿಗೆ ಮಾತ್ರ ಸಾಧ್ಯ. ವ್ಯವಸ್ಥೆಯು ನೀಡಿದ ಶೋಷಣೆಯನ್ನು ಮೆಟ್ಟಿನಿಲ್ಲ ಬೇಕಾದರೆ, 'ಅಜ್ಞಾನ', 'ಅಸಮಾನತೆ'ಯನ್ನು ದೂರ ಮಾಡಲು 'ನನ್ನ ಕವಿತೆಗೆ' ಎಂಬ ಕವನ ದಲಿತರಿಗೆ ಸಹಾಯ ಹಸ್ತವಾಗಿ ನಿಂತಿದೆ.

ನನ್ನ ಕವಿತೆಗೆ ಅಲ್ಲಮನ ಮೆದುಳು
ಬಸವಣ್ಣನ ಹೃದಯವಿರಲಿ
ನನ್ನ ಕವಿತೆಗೆ ಬುದ್ಧನ ಸ್ವಾಸ್ಥ್ಯ
ಆನಂದನ ಸ್ನೇಹವಿರಲಿ
ಇರಲಿ ಬಾಹುಬಲಿಯ ವೈರಾಗ್ಯ
ಭರತನ ಪ್ರೀತಿ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 88)

ಇಲ್ಲಿನ ಪ್ರತಿಯೊಬ್ಬ ವ್ಯಕ್ತಿಯು ತಮ್ಮ ಕಾಲದಲ್ಲಿ ಯುಗ ಪರಿವರ್ತನೆ ಮಾಡಲು ಶ್ರಮಿಸಿದವರು. ಇಂಥವರ ಆದರ್ಶ ತತ್ವಗಳು ಇಂದಿನ ಕಾಲದಲ್ಲಿ ಸರ್ವರಿಗೂ ಬರಲೆಂದು ಕವಿ ಬಯಸಿ, ತಮ್ಮ ಸಮುದಾಯಕ್ಕೆ ಶೋಷಣೆ ನೀಡಿದವರ ವಿರುದ್ಧ ನವಿರಾಗೇ ಪ್ರತಿಭಟಿಸುತ್ತಿದ್ದಾರೆ. ತಮ್ಮ ಸರ್ವಸ್ವವನ್ನು ತ್ಯಜಿಸಿ, 'ಜ್ಞಾನ' ಪ್ರಸರಣೆಗೆ ನಿಂತವರನ್ನು ಉದಾಹರಿಸುವ ಮೂಲಕ ವ್ಯವಸ್ಥೆಗೆ 'ಅರಿವು' ಮೂಡಿಸುತ್ತಾ ಪ್ರತಿಭಟಿಸುತ್ತಿದ್ದಾರೆ. ಇನ್ನೊಂದು ದೃಷ್ಟಿಯಲ್ಲಿ ನೋಡುವುದಾದರೆ, ದಲಿತ ಕಾವ್ಯ, ದಲಿತ ಕವಿ ಎಂದರೆ 'ಪ್ರತಿಭಟನೆಗೆ' ಸಿದ್ಧ ಹಸ್ತ. ತನ್ನವರ ಅರಿವಿನ ವಂಚನೆಯ ನಿವಾರಣೆಗೆ ಸ್ಫೂರ್ತಿ ತುಂಬುವ ಸಲುವಾಗಿ, ಒಟ್ಟು ಸಮುದಾಯದ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಸದ್ದು-ಗದ್ದಲಗಳಿಲ್ಲದೆ, ತಾವು ಪಡೆದ ಆದರ್ಶಗಳ ಮೂಲಕ ಬದಲಾವಣೆಯ ಕುತೂಹಲ ಕೆರಳಿಸಿದ್ದಾರೆ. ಕವಿತೆಯಲ್ಲಿ ವ್ಯಕ್ತವಾಗಿರುವ ಎಲ್ಲಾ ವ್ಯಕ್ತಿಗಳ ಆದರ್ಶ ಪಡೆದರೆ 'ಹೊಲೆಗೇರಿ' ಅಜ್ಞಾನ ಮುಕ್ತ ಸಮುದಾಯದವಾಗಬಹುದೆಂದು ಕವಿ ಬಯಸುತ್ತಾರೆ.ದಲಿತ ಸಮುದಾಯಕ್ಕೆ ಅಂಟಿರುವ ಅಜ್ಞಾನವೆಂಬ ಕೊಳೆ ತೆಗೆಯಲು ಕವಿ ತನಗೆ ಆದರ್ಶರಾಗಿರುವ ವ್ಯಕ್ತಿಗಳೊಂದಿಗೆ ಸಮೀಕರಣಗೊಳಿಸಿದ್ದಾರೆ. ಇದರಿಂದ ತನ್ನ ಸಮುದಾಯಕ್ಕೆ ಜ್ಞಾನವನ್ನು ಪ್ರಸಾರ ಮಾಡುತ್ತಿದ್ದಾರೆ.

ದಲಿತರ ಅರಿವಿನ ವಂಚನೆಯ ಅಮಾನವಿಯ ಸ್ಥಿತಿಗೆ 'ಅಸ್ಪೃಶ್ಯ'ರೆಂಬ ಹಣೆಪಟ್ಟಿಯೂ ಕಾರಣ. ಇದರಿಂದಲೇ ದಲಿತರು ಜೀತದಾಳುಗಳಾಗಿ ಬದುಕುತ್ತಿದ್ದಾರೆ. ಇವರ ಈ ಸ್ಥಿತಿಗೆ ಕಾರಣವಾಗಿರುವ 'ವ್ಯವಸ್ಥೆ'ಯು ವಿಕೃತಗೊಂಡು, ಉಗ್ರವಾಗಿ ಬೆಳೆಯುತ್ತಲೇ ಇದೆ ಎಂಬುದು 'ಜೀತದಾಳಿನ ಗಾಥೆ' ಎಂಬಲ್ಲಿ ಸಾಕ್ಷಿಗೊಂಡಿದೆ.

ನಿನ್ನ ನೇಗಿಲುಗಳು ಮುರಿದಷ್ಟೂ
ನನ್ನ ಪಕ್ಕೆಲುಬುಗಳು
ಗಟ್ಟಿಯಾಗುತ್ತವೆ
ಮೇಟಿ ಹಿಡಿದು ಹಿಡಿದು
ಅಂಗೈಯಿಂದ
ರಕ್ತ ಬಿಂದುಗಳು ಬಿದ್ದು
ಗೊಬ್ಬರವಾಗಿ, ಬೆಳೆದದ್ದೆಲ್ಲಾ
ವರವಾಗಿ, ಫಸಲಾಗಿ, ನೀನು
ಹುಲುಸಾದೆ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 40)

ಕವಿ ನೊಂದು ನುಡಿದ ಸಾಲುಗಳಿವು. ಈ ನೋವಿಗೆ 'ಅರಿವಿನ ಕೊರತೆ' ಕಾರಣ.ಅರಿವಿನ ಕೊರತೆಯಿಂದ ಶ್ರಮವಹಿಸಿ ದುಡಿದು, ಬೆಳೆತೆಗೆದರೆ ಇದರ ಲಾಭ 'ವ್ಯವಸ್ಥೆ'ಗೆ ಎಂಬುದನ್ನು ಕಾವ್ಯವಾಗಿಸಿದ್ದಾರೆ. ಇಲ್ಲಿ ಕವಿ ತನ್ನವರನ್ನೇ ಒಂದರ್ಥದಲ್ಲಿ ಪ್ರತಿಭಟಿಸುತ್ತಿದ್ದಾರೆ. ದಲಿತರ ಬಲವನ್ನು ಗಮನಿಸಿದ 'ವ್ಯವಸ್ಥೆ' ನೇಗಿಲ ಜಾಗದಲ್ಲಿ ದಲಿತರನ್ನಿಟ್ಟು ದುಡಿಸಿಕೊಂಡ ವಿಚಿತ್ರ ನಡವಳಿಕೆ ಕವಿಗೆ ಸಿಟ್ಟು ತರಿಸಿದೆ. ಇದರಿಂದ ಕೋಪಗೊಂಡು 'ವ್ಯವಸ್ಥೆ'ಗೆ 'ನನ್ನ ಸಮುದಾಯದವರ ಬಲದಿಂದ ನಿಮ್ಮ ಫಸಲು ವೃದ್ಧಿಯಾಗಿ, ನೀವು ಆರ್ಥಿಕರಾಗಿ ಬಲವಾಗಿದ್ದೀರಿ' ಎಂದು ಕಾವ್ಯದ ಮೂಲಕ ಪ್ರತಿಭಟಿಸುತ್ತಿದ್ದಾರೆ. ಇಲ್ಲಿನ ಸಾಲುಗಳಲ್ಲಿ ಅಸ್ಪೃಶ್ಯತೆ, ಅಜ್ಞಾನದ ಬಗೆಗಿನ ವಿಷಾದ, ಅನುಕಂಪ ಮತ್ತು ಸವರ್ಣೀಯರು ಹಾಗೂ ದಲಿತರಲ್ಲಿರುವ ಭಿನ್ನತೆಯನ್ನು ಕಾಣಬಹುದು.

ದಲಿತ, 'ವ್ಯವಸ್ಥೆ'ಯನ್ನು ಕುರಿತು 'ದುಡಿದು ನಾವು ಬಲವಾಗುವ ಬದಲು, ನೀವು ಗಟ್ಟಿಯಾಗಿ, ನಾವು ತೆಗೆದ ಬೆಳೆಗಳು ನಿಮಗೆ ವರವಾಗಿ, ಹುಲುಸಾಗಿ ಬೆಳೆದು ದೊಡ್ಡವರಾಗಿದ್ದೀರಿ' ಎಂದು ಸಂಕಟದಿಂದ ನುಡಿದ ಮಾತುಗಳನ್ನು ಕವಿ ಕಾವ್ಯದ ಮೂಲಕ ಅನಾವರಣಗೊಳಿಸಿ ಪ್ರತಿಭಟಿಸುತ್ತಿದ್ದಾರೆ.

ದಲಿತರು ಸರ್ವ ವಿಧದಲ್ಲೂ ಸೋಲಲು ಕಾರಣ ಅವರಲ್ಲಿರುವ ಅರಿವಿನ ಕೊರತೆ ಇದರ ಲಾಭ ಪಡೆದವರು ಮೇಲ್ಜಾತಿಯವರು. ಇಂತಹ ಅಜ್ಞಾನಿಗಳಾದ ದಲಿತ ಜೀವಿಗಳನ್ನು ಶೋಷಿಸುವುದು ಪರಿಸ್ಥಿತಿಯ 'ವ್ಯಂಗ್ಯ' ಕೂಡ ಹೌದು. ಅರಿವಿನ ಕೊರತೆಯಿಂದ ಶೋಷಣೆಗೆ ಒಳಗಾದವರ ಕಥೆಯನ್ನು 'ಎಲ್ಲಿದ್ದಿರೋ ನೀವು' ಎಂಬ ಕವನವು ಕಟ್ಟಿ ಕೊಡುತ್ತಾದೆ.

ನಡುವಿನ ಆ ಗೋಡೆ ಕಲ್ಲಿನದಲ್ಲ
ಬಗ್ಗಿರುವ ಛತ್ತರಿಯು ನೆರಳಿನದಲ್ಲ
ಹಾಕಿರುವ ಕಾಲ್ಚೀಲ ತೊಗಲಿನದಲ್ಲ
ಕಾಣುವ ಕೊರೆಮಿಂಚು ಬೆಳಕೆಂದಲ್ಲ
(ಅರವಿಂದ ಮಾಲಗತ್ತಿ, ಕಪ್ಪು ಕಾವ್ಯ, 1985, ಪುಟ 20)

ದಲಿತರಿಗೆ 'ವ್ಯವಸ್ಥೆ'ಯ ಮೋಸವನ್ನು, ಇದರ ಒಳಮುಖವನ್ನು ಇಲ್ಲಿನ ಸಾಲುಗಳು ಅನಾವರಣಗೊಳಿಸುತ್ತವೆ. ವ್ಯವಸ್ಥೆಯ ಕುತಂತ್ರವನ್ನು ಅರಿಯದ ದಲಿತ ಸಮುದಾಯಕ್ಕೆ ಕವಿ ಎಚ್ಚರಿಕೆ ನೀಡುವ ಮೂಲಕ ಪ್ರತಿಭಟಿಸಿದ್ದಾರೆ. 'ನೀವು ಎಷ್ಟು ದುಡಿದರು ಅದರ ಲಾಭ ಮಾತ್ರ ವ್ಯವಸ್ಥೆಗೆ, ನಿಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವಿಲ್ಲವೆಂಬುದನ್ನು' ಕವಿ ಕಾವ್ಯವಾಗಿಸಿದ್ದಾರೆ. ಉಳ್ಳವರು ಮೇಲುನೋಟಕ್ಕೆ ತೋರುವ ಪ್ರೀತಿಯನ್ನು ತಿರಸ್ಕರಿಸ ಬೇಕೆಂಬುದು ಕವಿಯ ಆಶಯ. ದಲಿತರು ಎಂತಹ ಸಮಯದಲ್ಲೂ ಉಳ್ಳವರೇ ನಮ್ಮ ಜೀವನಾಡಿಗಳು ಎಂದು ನಂಬಿ ಕೂತವರನ್ನೂ ಕವಿ ಪ್ರತಿಭಟಿಸುತ್ತಿದ್ದಾರೆ. ದಲಿತ ಕವಿಗಳು ತಮ್ಮ ಸಮುದಾಯದ ಭ್ರಾಮಿಕ, ಭಾವುಕತೆ, ವಾಸ್ತವಿಕತೆಯನ್ನು ಅನಾವರಣಗೊಳಿಸಿ, ಅದನ್ನು ತಿರಸ್ಕರಿಸುತ್ತಲೇ ಶೋಷಿತರ ಜೀವನಾಡಿಯಾಕಬೇಕೆಂದು ನಿರ್ಧಾರಿಸುವ ಪ್ರಯತ್ನ ಮಾಡಿದ್ದಾರೆ. ಇಂತಹ ಪ್ರಯತ್ನಕ್ಕೆ 'ನಮ್ಮ ತಲೆಗಳು' ಎಂಬ ಪದ್ಯ ಬೀಜಾಂಕುರವಾಗಿದೆ.

ನೂರು ಕನಸು ಕಣ್ಣಿನಲ್ಲಿ
ರಾಜ ಹಂಸರಾಗಲಿಲ್ಲ
ಬಣ್ಣ ಬಳೆದ ಗೊಂಬೆಯಲ್ಲಿ
ನಟಿಸಿ ಸೋತರೋ
ತೂತುಬಿದ್ದ ಕುಡಿಕೆ ಹೊತ್ತು

ಗೊಡ್ಡು ಬೀಜಕೆ ನೀರು ತೆತ್ತು
ಒಡೆಸಿ ಮೊಳಕೆ ಮುಗಿಲಿನತ್ತ
ಆವೆಯಾಗಿ ಹೋದರೊ

(ಅರವಿಂದ ಮಾಲಗತ್ತಿ, ಕಪ್ಪ ಕಾವ್ಯ, 1985, ಪುಟ 31)

ದಲಿತರಿಗೆ ಉಳ್ಳವರ ಸಮಕ್ಕೆ ಏರಬೇಕೆಂಬ ಆಸೆ ಇದ್ದು, ಅದಕ್ಕೆ ತಕ್ಕದಾಗಿ ದುಡಿದರೂ, ಇವರ ಆಸೆ ಈಡೇರಲಿಲ್ಲ. ಇದ ಕಂಡ ಕವಿ 'ಪ್ರಯತ್ನ'ದಲ್ಲೇ ಸೋತು, 'ವ್ಯವಸ್ಥೆ'ಗೆ ದಾಸರಾಗಿದ್ದಾರೆಂದು ತನ್ನವರನ್ನೇ ಪ್ರತಿಭಟಿಸುತ್ತಿದ್ದಾರೆ.ಇಲ್ಲಿನ ತಲೆಗಳು ದಲಿತ ಸಮುದಾಯದ ಬೌದ್ಧಿಕ ಪ್ರತೀಕಗಳು ಹಾಗೂ ವ್ಯವಸ್ಥೆಯ ಸೇವೆಗಾಗಿ ಮೀಸಲಾದ ಸೇವಕರು ಎಂದು ಕವಿ ಭಾವಿಸಿದ್ದಾರೆ. ದಲಿತರಲ್ಲಿ ಎಲ್ಲಾ ಆಸೆ ಆಕಾಂಕ್ಷೆಗಳ ಜೊತೆಗೆ ಸಾಮರ್ಥ್ಯವಿದ್ದರೂ ತಮಗಾದ ಅರಿವಿನ ವಂಚನೆಯಿಂದ ಬೊಂಬೆಗಳಾಗಿ ಜೀವನ ಪೂರ್ತಿ ಸೋತು ಹೋದರೆಂಬ ಹತಾಶೆಈ ಕವನದಲ್ಲಿ ಮೂಡಿದೆ.ದಲಿತರ ಅಜ್ಞಾನವನ್ನು ಅನಾವರಣ ಮಾಡುವ ಸಂಕೇತಗಳಲ್ಲಿ 'ಬಸವಿ ಪದ್ಧತಿ'ಯು ಒಂದು. ಇದೊಂದು ಅನಾಚಾರವೆಂದು ಸಮಾಜದ 'ವ್ಯವಸ್ಥೆ'ಗೆ ಗೊತ್ತಿದ್ದರೂ, ಓಕಳಿಯ ನೆರಳಲ್ಲಿ ಎಲ್ಲಾ ಜಾತಿ-ಜನಾಂಗದವರೂ ಕೆಳಜಾತಿ ಮಹಿಳೆಯರೊಂದಿಗೆ ನಡೆದುಕೊಳ್ಳುವ ರೀತಿಯನ್ನು ಅರವಿಂದ ಮಾಲಗತ್ತಿಯವರ 'ಓಕಳಿ' ಪದ್ಯದಲ್ಲಿ ಕಾಣಬಹುದು.

ವರ್ಷಕ್ಕೊಮ್ಮೆ ಹನುಮಂತನ ಹೆಸ್ರಲೆ
ಓಕುಳಿ ಆಡಾಕ ಹಚ್ಚತಾರ
ಹೊಂಡದಾಗ ನೀರು ತುಂಬಿ
ದೇವ್ರ ಹೆಸ್ರಲೆ ಅರ್ಷಿಣ-ಕುಂಕುಮ ಹಾಕಿ
ಚಾಪಿ ಜೋಳಗ್ಯಾಗ ನೀರ ತುಂಬಿ
ಮಾರಿಗಿ ಹೊಡ್ಡ, ಮೈ ತೋಯ್ಸಿ
ಮಲಿ, ದಡ ನೋಡತಾರ
ಲಕ್ಕಿ ಜಬರಿಲೆ ನಾಲ್ಕ ಥಳಿಸಿಕೊಂಡ
ಎಂಟದಿನ ಅರ್ಷಿಣಾ ಹಚ್ಚಿ
ಉಸಗಲೆ ಕಾಸಗೊಂದ್ರು ಪರವಾಗಿಲ್ಲ

(ಕಾವ್ಯ ಕುಂಕುಮೆ, ಶಶಿಕಲಾ ಎಸ್.ಡಿ. (ಸಂ.) 2009, ಪುಟ 27)

ಅರಿವಿನ ವಂಚನೆಯ ಇನ್ನೊಂದು ಮುಖ ಇಲ್ಲಿನ ಸಾಲುಗಳು. ಅಜ್ಞಾನದಿಂದ ದಲಿತ ಹೆಣ್ಣು ಕುಪಿತವಾದರೆ, ಇತರರು ಇದನ್ನೇ ಬಂಡವಾಳ ಮಾಡಿಕೊಂಡು ಲೈಂಗಿಕ ಶೋಷಣೆ ನೀಡುತ್ತಿರುವುದು ಕವಿಯ ಪ್ರತಿಭಟನೆಗೆ ಕಾರಣವಾಗಿದೆ. 'ಓಕಳಿ'ಯೊಂದು ಸಾಂಪ್ರಾದಾಯಿಕ ಆಟ. ದಲಿತ ಮಕ್ಕಳಿಗೆ ದೇವರ ಹೆಸರಲ್ಲಿ ನಡೆಯುವ ಭಕ್ತಿಯ ದ್ಯೋತಕ. ವ್ಯವಸ್ಥೆಗೆ ಇದೊಂದು ಬರೀ ಆಟದ ಜತೆಗೆ, ದಲಿತ ಹೆಂಗೆಳೆಯರ ಅಂಗಾಂಗಳ ಪ್ರದರ್ಶನವಾಗುತ್ತದೆ.

ದೇವರ, ಭಕ್ತಿಯ ಹೆಸರಲ್ಲಿ ನಡೆಯುವ ಶೋಷಣೆ ಹಾಗೂ ಭಕ್ತಿಯ ಪರಾಕಾಷ್ಠೆಯಿಂದ ಅಜ್ಞಾನಕ್ಕೊಳಗಾದ ಸಮುದಾಯದ ಹೆಣ್ಣಿನ ಬಣ್ಣವನ್ನು ಇಲ್ಲಿ ಅನಾವರಣಗೊಳಿಸಿದ್ದಾರೆ.ಕಾಲಾಂತರದಿಂದ ಸವಾರಿ ಮಾಡಿದ ವ್ಯವಸ್ಥೆಯ ವರ್ತನೆಗೆ ಬಲಿಪಶುಗಳಾದ ಒಂದು ತಲೆಮಾರಿನ ದಲಿತರು, ತಮ್ಮ ಮುಂದಿನ ತಲೆಮಾರಿನ ದಲಿತರಿಗೆ ಅಜ್ಞಾನವೇ 'ಗುರು' ಎಂಬಂತೆ ನಡೆದುಕೊಂಡು, ಉನ್ನತ ಮಟ್ಟಕ್ಕೆ ಮುಂದುವರಿಯಲು ಅಡ್ಡಿಪಡಿಸುವ, ಸ್ವಾಭಿಮಾನಕ್ಕೆ ಧಕ್ಕೆ ತರುವ ಪ್ರಯತ್ನಗಳು ಸಾಕಷ್ಟು ಕಂಡು ಬರುತ್ತವೆ. ಇದನ್ನು 'ಅಟ್ಟ ಹತ್ತ ಬೇಡ' ಎಂಬ ಪದ್ಯ ಸಾಬೀತುಪಡಿಸುತ್ತದೆ.

ಅಜ್ಜ: ಅಟ್ಟ ಹತ್ತಬೇಡ ಮರಿ
ಬೀಳಸಲೆಂದೆ ಜಾಳಾಗಿ ಕಟ್ಟಿರುತ್ತಾರೆ
ಮಗ: ಹಾಗಾದರೆ ಬೆಟ್ಟ ಹತ್ತುತ್ತೇನೆ ಅಜ್ಜ
ಕಲ್ಲು ಮುಳ್ಳುಗಳನ್ನು ಹಾದು
ಮೇಲೆ ಹೋಗುತ್ತೇನೆ.
ದೂರದ ಬೆಟ್ಟ ಎಷ್ಟೊಂದು ನುಣುಪು
(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 204)

ದಲಿತರೇ, ದಲಿತರಿಗೆ ಅರಿವಿನ ವಂಚನೆಯಿಂದ ಹೊರ ಬರಲು ಅವಕಾಶಕೊಡದಿರುವುದು ಕವಿಯ ಪ್ರತಿಭಟನೆಗೆ ಕಾರಣವಾಗಿದೆ. ಅಂದರೆ ವ್ಯವಸ್ಥೆಯ ದಾಳದಲ್ಲೇ ನಲುಗಿದ ಒಂದು ವರ್ಗ, ಅದೇ ಪ್ರಪಂಚವೆಂದು ಕೂಪ ಮಂಡೂಕದಂತೆ ಇರುವ ದಲಿತರ ವರ್ತನೆಯನ್ನು ಕವಿ ಪ್ರತಿಭಟಿಸುತ್ತಿದ್ದಾರೆ. ಅಜ್ಜ ಮತ್ತು ಮೊಮ್ಮಗನ ಸಂವಾದ ಶೈಲಿ ಇಲ್ಲಿ ವ್ಯಕ್ತವಾಗಿದೆ. ಎಂತಹ ಕಷ್ಟ ಬಂದರೂ ಅಟ್ಟ ಹತ್ತುತ್ತೇನೆ ಎಂಬುದು ಮೊಮ್ಮಗನ ಛಲ, ಸ್ವಾಭಿಮಾನ, ಹಟವನ್ನು ತೋರಿಸಿ, ಅರಿವಿನ ವಂಚನೆಯಿಂದ ಹೊರ ಬರುವ ಪ್ರಯತ್ನದಲ್ಲಿದ್ದರೆ, ಅಜ್ಜ ಕೂಪ ಮಂಡೂಕದಂತೆ ಮೊಮ್ಮಗನ ಧೈರ್ಯವನ್ನು ಹಾಳು ಮಾಡುವ, ಮುಂದುವರಿಯಲು ಮಾಡಿದ ಮನಸ್ಸನ್ನು ಮುರಿಯವ ಪ್ರಯತ್ನ ಇಲ್ಲಿದೆ. ಅಜ್ಜನಿಗೆ ಅಜ್ಞಾನದ ಭಯ ಆವರಿಸಿ, ಇದರಿಂದ ಪ್ರಾಣಕ್ಕೆ ಕುತ್ತು ಬರಬಹುದೆಂದು ಯೋಚಿಸದರೆ, ಮೊಮ್ಮಗ ಪ್ರಾಣವನ್ನು ಲೆಕ್ಕಿಸದೆ, ಅಟ್ಟ ಮನುಷ್ಯ ನಿರ್ಮಿತ, ಆದರೆ ಬೆಟ್ಟ ಅವನಿಂದ ನಿರ್ಮಿತವಲ್ಲ ಎಂದು ತನ್ನಲ್ಲಿ ಅಡಗಿರುವ ಸ್ವಾಭಿಮಾನವನ್ನು ಪ್ರದರ್ಶಿಸುತ್ತಾನೆ.

ದಲಿತ ಸಮುದಾಯದ ಅರಿವಿನ ವಂಚನೆಯ ಬಾಳು ಕನ್ನಡಿ ಲೋಕದಲ್ಲಿ ಕನಸು ಕಾಣುವ ಇಲಿಗಳಂತೆ. ಅರಿವಿನ ವಂಚನೆಗೆ ಕಾರಣರಾದ ಜನ ಎಲ್ಲಿದ್ದಾರೆ? ನಮ್ಮ ಪಾಲನು ಪಡೆಯುವ ಹಕ್ಕು ನಮಗೂ ಇದೆ. ಇನ್ನೆಷ್ಟು ದಿನ ಕಾಯಬೇಕು? ಎಂದು ಮಗ ತಾಯಿಯನ್ನು ಪೀಡಿಸಿದ ಬಗೆಯನ್ನು 'ಎಷ್ಟು ದಿನ ಕಾಯೋಣ? ಎಂಬ ಕವನವು ಭಿತ್ತರಿಸುತ್ತದೆ.

ಅಮ್ಮಾ ಹೇಳು! ಇನ್ನೆಷ್ಟು ದಿನ
ವನವಾಸ ಅಜ್ಞಾತವಾಸದ ಬೇಲಿ?
ಮುಗಿದ ಮರುದಿನವೇ ನಮ್ಮ
ಪಾಲಿನ ಅನ್ನ ಬಟ್ಟೆಗಳ ಕೇಳಿ
ಅಡ್ಡವಿರುವ ಬೇಲಿಯ ಒಂದೊಂದೆ
ಬೇರುಗಳ ಬಿಡಿಸಿ ದೂರ
ಬಹುದೂರ ಎಸೆಯಬೇಕೆಂದಿದ್ದೇವೆ.
ಮತ್ತೆಂದೂ, ಈ ತೋಟದಲ್ಲೆಲ್ಲೂ
ಚಿಗುರದಂತೆ ಕಣ್ಣು ಕುಕ್ಕುವ ಹೂವುಗಳ
ದುರ್ನಾತ ಹರಡದಂತೆ ಸಡಗರದಿ
ಸುಡಬೇಕೆಂದಿದ್ದೇವೆ.

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 195)

ದಲಿತರ ಉತ್ಸಾಹಕ್ಕೆ ದಲಿತರೇ ಅಡ್ಡಗಾಲಗಿರುವ ಸಾಲುಗಳಿವು. ಈ ಸಾಲುಗಳ ಪ್ರಕಾರ ನಾವು ದಲಿತರಲ್ಲೇ ಇರುವ ಮೂಢತೆಯನ್ನು ಪ್ರತಿಭಟಿಸಬೇಕು. ಆ ರೀತಿಯ ವರ್ತನೆ ಇಲ್ಲಿನ ಸಾಲುಗಳಲ್ಲಿ ಕಂಡು ಬರುತ್ತದೆ. 'ಮಗ' ಅಜ್ಞಾನದಿಂದ ಹೊರ ಬರಲು ಬಾಗಿಲ ಬಳಿ ನಿಂತಿದ್ದಾನೆ. ತಾಯಿ ಅಜ್ಞಾನದ ಅರಮನೆಯಲ್ಲಿ ಬಿಡಾರ ಬಿಟ್ಟು, ಮಗನ ದಾರಿಗೆ ಅಡ್ಡ ನಿಂತಿದ್ದಾಳೆ. ಕೆಳವರ್ಗದವರ ಬದುಕಿನ ಅರಿವಿನ ವಂಚನೆಯ ಬವಣೆಯನ್ನು ಕವಿ ವಿವರಿಸಿ, ಸಮುದಾಯದ ಹಿಂಸಾ ಕಥೆಗೆ ಕೊನೆ ಇಲ್ಲ ಎಂದು ಶೋಕಗೊಂಡಿದ್ದಾರೆ. ಮಗ ತಮ್ಮ ಅಜ್ಞಾನದ ಬೇಲಿಯನ್ನು ಕಿತ್ತು, ಮತ್ತೇ ಅದು ಎಂದೂ ನಮ್ಮ ಹತ್ತಿರ ಸುಳಿಯದಂತೆ ಮಾಡಬೇಕೆಂಬ ಬಯಕೆ ಮಗನಲ್ಲಿ ಮನೆ ಮಾಡಿದೆ. ಆದರೆ ತಾಯಿ ಎಂಬ ಮೌಢ್ಯ ಸಂಪ್ರದಾಯದ ಅಪ್ಪಣೆಯನ್ನು ಕಾಯುತ್ತಿದ್ದಾನೆ.

ದಲಿತರ ಇತಿಹಾಸದಲ್ಲಿ ಅಜ್ಞಾನ ಒಂದು ವಿಸ್ಮಯಕಾರಿ. ಅಜ್ಞಾನವೇ ಇವರ ಅನೇಕ ಸಮಸ್ಯೆಗಳಿಗೆ ಕಾರಣವಾಗಿದ್ದು, ಈ ಅಜ್ಞಾನದಿಂದ ಮೂಕ ಪಶುಗಳಾಗಿ ಜೇಡರ ಬಲೆಯಲ್ಲಿ ಸಿಕ್ಕಿ ಹಾಕಿಕೊಂಡಂಥ ಅನುಭವ ಉಂಟಾಗಿರುವುದನ್ನು 'ಕರ್ಣರಾಗದಲ್ಲಿ' ಕವಿ ಹೀಗೆ ಸೂಚಿಸುತ್ತಾರೆ.

ಲೋಕದರಿವಿಗೆ ತರದೆ ಹಿರಿಮೆಗರಿ ತೂಗಲು
ತೊರೆದ ಕಂದನ ಶೌರ್ಯ ಇನ್ನು ಬಲಿಗೊಡೆನು
ಕೃಷ್ಣತಂತ್ರಕೆ ಮಣಿದು ಧರ್ಮದರ್ಪಕೆ ಕುಣಿದು
ಮಾತೃ ಪ್ರೇಮದ ಭಿಕ್ಷೆ ಬೇಡಲಾರೆ

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 25)

ಕರ್ಣರಾಗ ಕೇವಲ ಮಹಾಭಾರತದ ಕರ್ಣನ ಕಥೆಯಲ್ಲ. ದೇಶದ 'ಅಸ್ಪೃಶ್ಯ'ರ ಅಂದಿನ-ಇಂದಿನ ವ್ಯಥೈ. 'ವ್ಯವಸ್ಥೆ'ಯ ತಂತ್ರವಾದ ಜಾತಿ ವ್ಯವಸ್ಥೆಯ ಪಗಡೆಯಾಟದಲ್ಲಿ ದಲಿತ ಸಮುದಾಯ ಕೇವಲ ಧಾಳ ಮಾತ್ರ. ಜಾತಿ 'ವ್ಯವಸ್ಥೆ'ಯ ಹಂಗಿನರಮನೆಯಲ್ಲಿ ಸಿಕ್ಕಿಕೊಂಡ ಅಸಹಾಯಕ ಸ್ಥಿತಿಯೇ ಇಲ್ಲಿನ ಕರ್ಣನ ಸಂಕಟವಾಗಿದೆ.

ಕವಿ ಮಾನವ ಸಂಬಂಧದ ಜಟಿಲತೆ, ಸಾಮಾಜಿಕ ವ್ಯವಸ್ಥೆ, ಅಜ್ಞಾನದ ಒಳಸುಳಿಗಳನ್ನು ಹಿಡಿಯಲು ಪ್ರಯತ್ನಿಸಿ ಪ್ರತಿಭಟಿಸುತ್ತಿದ್ದಾರೆ. ಶತಮಾನಗಳಿಂದ ಅತಿಕ್ರಮಿಸುತ್ತ ಬಂದ ಅರಿವಿನ ವಂಚನೆ ದಲಿತ ಸಮುದಾಯದ ಪಾಲಿಗೆ ಹಳೆಯ ಪಾರ್ಥೇನಿಯಂ ಗಿಡದಂತೆ. ಈ ಕಳೆಯನ್ನು ಕಿತ್ತು ಹಾಕಿ ಹೊಸತನವನ್ನು ಉಂಟು ಮಾಡುವ ಉತ್ಕಟತೆ 'ಪುಟಗಳು' ಕವಿತೆಯಲ್ಲಿ ಕಂಗೊಳಿಸಿದೆ.

ಬಾಡಿ ಬಯಲಾಗಿದೆ
ಬಿಳಿ ಚರ್ಮದ ಬಂದಳಿಕೆ
ಕಾಡಿ ಕಂಗೆಡಿಸಿದೆ
ಕರಿ ಚರ್ಮದ ಖಾಲಿಬರುಡೆ
ಅತಿಕ್ರಮಿಸಿಕೊಬ್ಬಿದೆ
ಬದುಕಿನ ರಸ ಭೂಮಿಯನೆಲ್ಲಾ
ನೇತಾರ ಕುರ್ಚಿ ಹಿಡಿದ
ಈ ಪಾತಕಿ ಪಾರ್ಥೇನಿಯಂ

(ಜವರಯ್ಯ ಮ.ನ., ವಿದ್ರೋಹ, 2002, ಪುಟ 91)

'ಪಾರ್ಥೇನಿಯಂ' ನಾಶಮಾಡಲು ಅಸಾಧ್ಯವಾದ ಗಿಡ. ದಲಿತರಿಗಾದ ಅರಿವಿನ ವಂಚನೆಯು ಈ ಗಿಡದಂತೆ ಆಗಿದೆ ಎಂದು ಕವಿ ಪ್ರತಿಭಟಿಸುತ್ತಿದ್ದಾರೆ. ದಲಿತರ ಸಮಾಜದಲ್ಲಿ ವ್ಯಾಪಕವಾಗಿ ಹರಡಿರುವ ಅಜ್ಞಾನವನ್ನು, ಬದಲಾವಣೆಯ ಕಾರಣಗಳನ್ನು ಇತಿಹಾಸಗಳಲ್ಲಿ ಹುಡುಕುವ ಪ್ರಯತ್ನ ಇದಾಗಿದೆ. 'ಪಾರ್ಥೇನಿಯಂ' ಅಜ್ಞಾನದ ಚಿಹ್ನೆಯಾಗಿದ್ದು, ಇದು ದಲಿತರ ರಸವತ್ತಾದ ಬದುಕನ್ನು ಆವರಿಸಿ, ನಾಶ ಮಾಡವ ಸಾಧ್ಯವಿದೆ. ಅರಿವಿನ ವಂಚನೆಯಿಂದ ಅವಮಾನವಾಗಿರುವುದರಿಂದ ಇದನ್ನು ಬುಡಮೇಲು ಮಾಡಬೇಕೆಂಬುದು ಕವಿಯ ಆಶಯವಾಗಿದೆ. ಅರಿವಿನ ವಂಚನೆಯ ಇನ್ನೊಂದು ಮುಖ ಗುಲಾಮಗಿರಿ ಇದು ಸಮಾಜದ ವಿಷಮತೆಯ ಸ್ಥಾಯಿ ಭಾವವಾಗಿದೆ. ದಲಿತ ಜನಾಂಗದ ಒಂದು ವರ್ಗ 'ಅಜ್ಞಾನ', 'ಗುಲಾಮಗಿರಿ'ಯಿಂದ ಸಂಪೂರ್ಣ ಮುಕ್ತಿ ಪಡೆಯ ಬೇಕೆಂದು ಬಯಸಿದ್ದರೂ, ನಮ್ಮಲ್ಲೇ ಕೆಲವರು 'ಅಜ್ಞಾನ'ದ ಅಧಿಕಾರಿಗಳಿರುವುದನ್ನು ತಿಳಿದು, ನಿರಾಸೆಗೊಂಡು ದೇವರಲ್ಲಿ ಪ್ರಾರ್ಥಿಸಿಕೊಳ್ಳುವ ಸಾಲುಗಳು '21ನೇ ಶತಮಾನಕ್ಕೆ ನನ್ನೊಂದು ಪ್ರಾರ್ಥನೆ'ಯಲ್ಲಿ ಸಿಗುತ್ತವೆ.

ಹೇ ಭೂ ಚಕ್ರ
ಆಲಿಸು ನನ್ನದೊಂದು ಪ್ರಾರ್ಥನೆ:
ಧ್ರುವಧ್ರುವಾಂತಗಳನೆಲ್ಲ
ನೀನು ಮುಳುಗಿಸುವೆಯಲ್ಲ
ಆಗ
ಕೋಟಿ ಕಳಂಕದ
ಶತಕೋಟಿ ಪಾಪಿಗಳು
ನನ್ನ ನಾಡಿಗಂಟಿಸಿರುವ
ಜಾತಿಪಾತಿ–
ಗುಲಾಮಗಿರಿಯನ್ನೂ
ಮರೆಯದೇ ಮುಳುಗಿಸಿಬಿಡು

(ಜವರಯ್ಯ ಮ.ನ., ವಿದ್ರೋಹ, 2002, ಪುಟ 192)

ಕವಿ ತನ್ನಲ್ಲಿ ಆಗದನ್ನು ಪ್ರಕೃತಿಯಗೆ 'ಸುಪಾರಿ' ಕೊಟ್ಟಂತೆ ಕಂಡುಬರುತ್ತದೆ. ಈ ನಿರ್ಧಾರಕ್ಕೆ ಬರಲು ಕಾರಣ ದಲಿತ ಸಮುದಾಯದವರು. ದಲಿತರು ಕವಿಯ ಪ್ರತಿಭಟನೆಗೆ ಸರಿಯಾಗಿ ಸ್ಪಂದಿಸದ ಕಾರಣಕ್ಕಾಗಿ ಈ ನಿರ್ಧಾರಕ್ಕೆ ಬಂದಿದ್ದರೆ.

ಇಲ್ಲಿನ ಸಾಲುಗಳಲ್ಲಿ ಸಮುದಾಯವು ಎಲ್ಲಿ ಅರಿವಿನ ವಂಚನೆಯಿಂದ ಹೊರ ಬರುವುದಿಲ್ಲವೆಂದೋ ಅಥವಾ ಎಲ್ಲಿ 'ವ್ಯವಸ್ಥೆ'ಯೇ ನಮ್ಮವರಿಗೆ 'ಅಜ್ಞಾನ' ಮುಕ್ತವಾಗಲು ಬಯಸುವುದಿಲ್ಲವೋ ಎಂಬ ಗಾಬರಿ, ಗೊಂದಲದಿಂದ ಕವಿ ಒಂದು ನಿರ್ಧಾರಕ್ಕೆ ಬಂದು, '21ನೇ ಶತಮಾನಕ್ಕೆ ಆಗುವ ಪ್ರಳಯದಲ್ಲಿ ಎಲ್ಲರನ್ನೂ ಮುಳುಗಿಸುವಾಗ 'ಜಾತಿ' ಗುಲಾಮಗಿರಿಯನ್ನು ಮುಳುಗಿಸು' ಎಂದು ಪ್ರಾರ್ಥಿಸಿ, ಪ್ರತಿಭಟಿಸುತ್ತಿದ್ದಾರೆ. ಈ ರೀತಿಯಾದರೂ 'ವ್ಯವಸ್ಥೆ' ಬದಲಾಗಲಿ ಎಂದು ಬಯಸಿ ಕವಿ ಈ ನಿರ್ಧಾರಕ್ಕೆ ಬಂದಿದ್ದಾರೆ.

ದಲಿತರ ಪಾಲಿಗೆ ಅರಿವಿನ ವಂಚನೆ ನಿತ್ಯ ಸಂಜೀವಿನಿಯಂತೆ. ಅರಿವಿನ ವಂಚನೆ ದಲಿತರನ್ನು ದಲಿತರು ಅರಿವಿನ ವಂಚನೆಯನ್ನು ಬಿಟ್ಟು ಬಿಡದಾ ನಂಟಿನಂತೆ ಅವರಿಸಿಕೊಂಡಿದೆ. ಇವರ ಪಾಲಿಗೆ, ಗುಡಿಸಲುಗಳೇ ಅರಮನೆ ಎಂಬ ಭ್ರಮೆ ಅವರಿಸಿಕೊಂಡಿರುವುದನ್ನು 'ಉಸಿರು ಸುಟ್ಟ ಇತಿಹಾಸ ಹೆಗಲ ಮೇಲೆ' ಎಂಬ ಕವನದಲ್ಲಿ ಕಾಣಬಹುದು.

ಎಷ್ಟೊಂದು ಅರಮನೆಗಳು ಹೊಲೇಗೇರಿಯ ಕಣ್ಣಿಗೆ
ವಿಷ ಕುಡಿಸಿದ ಬಟ್ಟಲಲ್ಲಿ ಅಮೃತವ ಉಳಿಸಿ
ಬದುಕಿದವರ ಕಣ್ಣ ಕತ್ತಲೆಯಂತೆ ಹೆಪ್ಪುಗಟ್ಟಿಸಿ
ನುಂಗಲಾದವರ ಉಗುಳ ನುಂಗಿಸಿ ಹೊಟ್ಟೆ ಕಲಕುವಂತೆ
ಅನುಭವಿಸಿದ ಜೀವಕ್ಕೆ ಎಷ್ಟೆಲ್ಲ ಗಾಯ

(ಸುಬ್ಬು ಹೊಲೆಯಾರ್, ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು, 2003, ಪುಟ 68)

'ಅರಿವಿನ ವಂಚನೆ'ಯ ವಿಷಯವಾಗಿ ದಲಿತರು ಅನುಭವಿಸಿದ ಹಾಗೂ ಉಳ್ಳವರು ದಲಿತರನ್ನೇ ಗುರಿಯಾಗಿಸಿಕೊಂಡು ನೀಡಿದ ನಾನಾ ಶೋಷಣೆಯ ಗುರುತುಗಳನ್ನು ಕಾವ್ಯವಾಗಿಸಿದ್ದಾರೆ. ಕವಿಯ ಪ್ರಕಾರ ದಲಿತರಿಗೆ 'ವ್ಯವಸ್ಥೆ' ಬಲವಂತವಾಗಿ ತೊಂದರೆ ಕೊಡುವುದನ್ನು ಅಲ್ಲಗೆಳೆಯುತ್ತ ಪ್ರತಿಭಟಿಸುತ್ತಿದ್ದಾರೆ. ಇಲ್ಲಿ ಉಳ್ಳವರ ವರ್ತನೆಯನ್ನು ಕವಿ ಖಂಡಿಸಿ ತನ್ನವರ ಶೋಷಣೆಗೆ ಮರುಕಗೊಂಡಿದ್ದಾರೆ. ಇಲ್ಲಿನ ಸಾಲುಗಳು ದಲಿತರ ಅಜ್ಞಾನದ ಪರಿಣಾಮವನ್ನು ಸೂಚಿಸುತ್ತವೆ. ತಮ್ಮ ಕಣ್ಣನ್ನು ತಾವೇ ನಂಬದಂತೆ ಮಾಡಿ, ವಿಷದ ಬಟ್ಟಲನ್ನು ಅಮೃತವೆಂದು ಕೊಟ್ಟರೂ ಕುಡಿಯುವ ಮುಗ್ಧರಾಗಿದ್ದಾರೆ. ಇಂಥವರ ಸ್ಥಿತಿಕಂಡ ಕವಿ ಅಜ್ಞಾನ ಎಂಬ ಮಾನಸಿಕ ಗಾಯಕ್ಕೆ ಮುಲಾಮನ್ನು ಹುಡುಕುವಂತಾಗಿದೆ.

ದಲಿತರ 'ಅಜ್ಞಾನ'ದ ಪ್ರದರ್ಶನಕ್ಕೆ ಉಳ್ಳವರ 'ದೌರ್ಜನ್ಯ'ವೇ ಉಡುಗೊರೆಯಾಗಿತ್ತು. ಆದರೆ ಒಂದು ತಲೆಮಾರಿನ ದಲಿತರು, ತಮಗೆ ಶೋಷಣೆಯಾದರೂ ಚಿಂತೆ ಇಲ್ಲ. ಮುಂದಿನ ತಲೆಮಾರಿನವರ ಸುಖ ಬಯಸುವ ಮಂದಿಯಾಗಿದ್ದರು. ಇಂಥವರ ಬಗ್ಗೆ 'ಜೋಗೇರ ಹುಡುಗಿ' ಕವಿತೆ ಹೀಗೆ ಅನುಕಂಪ ವ್ಯಕ್ತಪಡಿಸುತ್ತದೆ.

ಹಿಂಡು ಎಮ್ಮೆಯ ಬೆನ್ನು ತಿಕ್ಕಿ
ಹಸು ಕರುವಿನ ಕೊರಳಿಗೆ ಗೆಜ್ಜೆಕಟ್ಟಿ
ಸಾಲಿಗೋಗುವ ತಂಗಿ-ತಮ್ಮಗೆ ಬಿಕ್ಕಿದವಳು
ತನ್ನದಲ್ಲದ ತಪ್ಪಿಗೆ ಬಸಿರೊತ್ತು ಬಿಕ್ಕಿದವಳು
ಸೂರ್ಯ ಚಂದ್ರರ ಸಾಕ್ಷಿಗೆ ಧಿಕ್ಕಾರ ಹೇಳಿ
ನದಿಯಾಗಿ ಕಡಲಾಗಿ ಹರಿದವಳು

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 31)

'ವ್ಯವಸ್ಥೆ'ಯಿಂದಾದ ಶೋಷಣೆಗೆ ಅಂಜದೆ, ತನ್ನ ಕಿರಿಯರಿಗೆ 'ಜ್ಞಾನ'ದ ಅರಿವು ಉಂಟಾಗಲಿ ಎಂದು 'ಜೀತ'ದ ಶೋಷಣೆ ನೀಡಿದ 'ವ್ಯವಸ್ಥೆ'ಗೆ ಸವಾಲಾಗಿ ನಿಂತು ಪ್ರತಿಭಟಿಸುತ್ತಿದ್ದಾರೆ. ಇವರ ಅಚಲತೆಯನ್ನು ಕಂಡ ಕವಯತ್ರಿ ನದಿಯ ಆರ್ಭಟಕ್ಕೆ, ಕಡಲಿನ ಸೌಮ್ಯತೆಗೆ ಹೋಲಿಸಿದ್ದಾರೆ. ಇದರ ಅರ್ಥ, ಕಡಲು ನೋಡಲು ಚಂದವಿದ್ದರೂ, ಅದರ ಆಳ ಭಯಾನಕ ಎಂದು ತಿಳಿದು ಬರುತ್ತದೆ. ಕವಯತ್ರಿ ದಲಿತ ಹೆಣ್ಣಿನ ಸ್ಥಿತಿಯನ್ನು ವರ್ಣಿಸುವ ಮೂಲಕವೇ ಪ್ರತಿಭಟಿಸುತ್ತಿದ್ದಾರೆ. ಒಂದು ಹೆಣ್ಣು ತನ್ನ ಅಜ್ಞಾನದಿಂದ, ವ್ಯವಸ್ಥೆಯ ದೌರ್ಜನ್ಯದಿಂದ 'ಜೀತ' ಪದ್ಧತಿಗೆ ದಾಸಿಯಾಗಿರುವಂತೆ, ತಾನು ಜೀತದಲ್ಲಿದ್ದರೂ ನನ್ನವರು ಕಲಿಯಲ್ಲಿ ಎಂಬ ಮುಗ್ಧತೆ, ಬೇರೆಯವರ ಸುಖಕ್ಕೆ ಇಷ್ಟವಿಲ್ಲದೇ ಬಸುರಾಗಿ ತನ್ನಲ್ಲಿದ್ದ ಜ್ಞಾನಕ್ಕೆ ಶಿಕ್ಷೆ ಅನುಭವಿಸಿದ್ದನ್ನು ತಿಳಿದ ಕವಯತ್ರಿ 'ಅರಿವಿ ವಂಚನೆ'ಯು ದಲಿತರ ಪಾಲಿಗೆ ನದಿಯಂತೆ ಎಲ್ಲೆಡೆ ಹರಿದು, ಕಡಲಿನಂತೆ ಮೌನವಾಗಿ ನಿಂತಿದೆ ಎಂದು ಅನುಕಂಪದಿಂದ ನುಡಿದಿದ್ದಾರೆ. ಅಂದು ಅಂಬೇಡ್ಕರ್‌ರವರು ದಲಿತ ಸಮುದಾಯವನ್ನು ಉದ್ಧಾರ ಮಾಡಬೇಕೆಂದು ಚಿಂತನೆ ನಡೆಸಿದರೂ ಕೆಲ ದಲಿತರು ಇದಕ್ಕೆ ಎಚ್ಚೆತ್ತುಕೊಳ್ಳದೇ 'ಒಂದು ಕುರಿ ಹಳ್ಳಕ್ಕೆ ಬಿದ್ದರೆ ಎಲ್ಲ ಕುರಿಗಳೂ ಅದೇ ದಾರಿ ಹಿಡಿಯುವಂತೆ' ದಲಿತರು ತಮ್ಮ 'ಅಜ್ಞಾನ'ದಿಂದ ಸಮುದಾಯಕ್ಕೂ ಅದೇ ದಾರಿ ತುಳಿಸುವುದನ್ನು 'ನೆಲದ ಜೋಗುಳ'ದಲ್ಲಿ ಕಂಡು ಬರುತ್ತದೆ.

ನಿನಗೇಕೆ ಮಗನೆ ಈ ನೆಲದ ಮೇಲೆ ಖಾಲಿ ವ್ಯಾಮೋಹ
ಊರಾಳುವರಸರ ಮಗನು ನೀನಲ್ಲ
ಉಳ್ಳವರ ಕುರ್ಚಿಗೆ ಹಕ್ಕುದಾರನು ನೀನಲ್ಲ
ಚಿನ್ನದ ಸಿಂಹಾಸನವು ನಿನ್ನನ್ನು ಕೈ ಬೀಸಿ
ಕರೆಯುವುದಿಲ್ಲ
ಮನವಿಲ್ಲದ ದಾನವರ ದೇಶಕ್ಕೆ
ನೀನೇಕೆ ಹಿತವ ಬಯಸುವೆ ಮಗನೆ

(ಮುಳ್ಳೂರು ನಾಗರಾಜ್, ನೆಲದ ಜೊಗುಳ, 1993, ಪುಟ 40)

ತಂದೆ ನಿರುತ್ಸಾಹದ ಮೂಲಕವೆ 'ವ್ಯವಸ್ಥೆ'ಯನ್ನು ಪ್ರತಿಭಟಿಸುತ್ತಿದ್ದಾನೆ. 'ವ್ಯವಸ್ಥೆ' ಮುಂದೆ ನಿಲ್ಲಬೇಕಾದರೆ, ಈ ಕವನದಲ್ಲಿ ವ್ಯಕ್ತವಾಗಿರುವ ಹಕ್ಕುಗಳು ಇರಬೇಕು. ಇದು ನಮ್ಮಲಿಲ್ಲ. ಇದಕ್ಕೆ ಕಾರಣ 'ಅಸ್ಪೃಶ್ಯ'ತೆ ಎಂದು ತಿಳಿದ ತಂದೆ, ಮಗನಿಗೆ ಬುದ್ಧಿ ಹೇಳಿ, 'ವ್ಯವಸ್ಥೆ'ಯ ಕ್ರೂರತೆಯನ್ನು ಪ್ರತಿಭಟಿಸುತ್ತಿದ್ದಾರೆ.

ಇಲ್ಲಿನ ಸಾಲುಗಳು ದಲಿತನೊಬ್ಬ ತನ್ನಲ್ಲಿರುವ ನಿರುತ್ಸಾಹವನ್ನು, ಅಜ್ಞಾನವನ್ನು ತನ್ನ ಮಗನಿಗೂ ಧಾರೆ ಎರೆಯುತ್ತಿರುವಂತೆ ವ್ಯಕ್ತವಾಗಿದೆ. ಅರಿವಿನ ವಂಚನೆಯ ಚಿಹ್ನೆಯಾದ ಅಪ್ಪನು ತನ್ನ ಮಗನಿಗೆ ನಮ್ಮ ಜಾತಿ 'ಅಸ್ಪೃಶ್ಯ'. ನಮಗೆ ಈ ದೇಶದಲ್ಲಿ ಆಳುವ ಯೋಗವಿಲ್ಲವೆಂದು, ತಮ್ಮ ಸಮುದಾಯದ ಹೀನ ಸ್ಥಿತಿಯನ್ನು ಅನಾವರಣಗೊಳಿಸಿದ್ದಾನೆ. ಅಪ್ಪನಲ್ಲಿ ಮೇಲ್ನೋಟಕ್ಕೆ ಅಜ್ಞಾನ ಇದ್ದರೂ, ಅಂತರಂಗದಲ್ಲಿ ಜಾತಿಯ ಕ್ರೂರ ರೂಪವನ್ನು ಬಲ್ಲವನಾಗಿದ್ದಾನೆ.

ದಲಿತರ ಶ್ರಮ ಭೂಮಿಯಲ್ಲಿನ ಅಪಾರವಾದ ನೈಸರ್ಗಿಕ ಸಂಪತ್ತಿನಂತೆ. ಇವರ ಶ್ರಮದ ಸಂಪೂರ್ಣ ಲಾಭ ಮಾತ್ರ ಉಳ್ಳವರಿಗೆ. ಉಳ್ಳವರು ದಲಿತರ ಶ್ರಮದ ಸಂಪತ್ತೆಲ್ಲವನ್ನೂ ಸೂರೆಮಾಡಿ, ಲೂಟಿ ಹೊಡೆದು, ಉತ್ತಮ ಸ್ಥಿತಿಗೆ ತಲುಪಲು ಕಾರಣ ದಲಿತರಿಗಾಗಿರುವ ಅರಿವಿನ ವಂಚನೆ.

ಬೆಳಕು ಬೆತ್ತಲಾದಂತೆ
ಬೆಳಗಿನ ಜಾವದಲ್ಲಿ
ಇರುಳು ಬೆತ್ತಲಾದಂತೆ
ಇರುಳಿನ ಜಾವದಲ್ಲಿ

ಬೆಂಕಿ ಬಿಸಿನೀರು ಕೊತಕೊತ
ಕುದಿಯೋ ಹೊತ್ತಿನಲ್ಲಿ
ಸೂರ್ಯನ ಕಣ್ಣುಕಿತ್ತು
ಗಿರಿನೆತ್ತಿಯ ಮೇಲೆ ಧರಿಸುವಂಥ
ಘನಘೋರ ಘಳಿಗೆಯಲ್ಲಿ
ಜಾಗರವಿದ್ದು
ಜಾವಕಟ್ಟೋ ಜಂಬೂದ್ವೀಪಸ್ಥ
ಕತ್ತಲನು ಎಚ್ಚೆತ್ತು
ಜಗಜ್ಯೋತಿಯ ಕತ್ತು ಹಿಸುಕಿ
ಕತ್ತಲು ಬೀಜ ಬಿತ್ತಿ
ಕತ್ತಲನೆ ಬೆಳೆದು
ಕತ್ತಲನೇ ಕೊಯ್ಯುವ
ಕತ್ತಲುಗಾರ

(ಸಿದ್ಧಯ್ಯ ಕೆ.ಬಿ., ಗಲ್ಲೆ ಬಾನಿ, 2009, ಪುಟ 08)

ಈ ಅರಿವಿನ ವಂಚನೆಯ ನಿಮಿತ್ತ 'ಬತ್ತಿ ಬರಡಾದ ಭೂಮಿಯಂತಹ ಸ್ಥಿತಿ' ದಲಿತರಿಗಾಗಿದೆ ಎಂಬುದನ್ನು 'ಗಲ್ಲೆ ಬಾನಿ'ಯ ಕವನದ ಸಾಲುಗಳು ವಿಷಾದ ಪಡಿಸುತ್ತಾವೆ. ಹಗಲು ರಾತ್ರಿ ಎನ್ನದೇ, ಹಗಲು, ರಾತ್ರಿಗೆ ಒಡೆಯರಾಗಿ, 'ಸಮಯ'ದ ರೀತಿಯಲ್ಲಿ ಕ್ಷಣ ಕ್ಷಣವೂ ದುಡಿದು, ತಮಗೆ ಕತ್ತಲು ಆವರಿಸಿದರೂ, ಇತರರಿಗೆ ಬೆಳಕಾಗಿ, ಕತ್ತಲಲ್ಲಿ ಜೀವಿಸುತ್ತಿರುವುದು ಕವಿಯ ಪ್ರತಿಭಟನೆಗೆ ಕಾರಣವಾಗಿದೆ. ದಲಿತರ ಶ್ರಮ ನಾಶದ ಬಗ್ಗೆ, ಇವರಿಗೆ ಒದಗಿದ ಅಜ್ಞಾನದ ಆಪತ್ತಿನ ಮುಸ್ಸೂಚನೆಯ ಬಗ್ಗೆ ಕವಿ ತಿಳಿಸಿದ್ದಾರೆ. ದಲಿತರು ಹಗಲು ರಾತ್ರಿ ಎನ್ನದೆ, ಮಳೆ, ಬಿಸಿಲು ಎನ್ನದೆ, ಎಂಥ ಘೋರ ಸಮಯದಲ್ಲೂ ಶ್ರಮಿಕರಾಗಿರುವುದನ್ನು ಇಲ್ಲಿನ ಸಾಲುಗಳು ತಿಳಿಸುತ್ತವೆ. ಇಲ್ಲಿ ದಲಿತರಿಗೆ ಜ್ಞಾನದ ಅಭಾವ ದಟ್ಟವಾಗಿದ್ದು, ಅಜ್ಞಾನದ ಕತ್ತಲಲ್ಲೇ ಇರುವುದರಿಂದ ಕವಿ ಇವರನ್ನು 'ಕತ್ತಲುಗಾರ' ಎಂದು ಮರುಗಿ ಪ್ರತಿಭಟಿಸುತ್ತಿದ್ದಾರೆ. ಸಮಾಜದಲ್ಲಿ ಅಸ್ಪೃಶ್ಯತೆಯ ಕರಾಳ ಛಾಯೆ ಶತಶತಮಾನಗಳಿಂದ ಆವರಿಸಿದ್ದು, ಅದು ದಲಿತರನ್ನು ಅಜ್ಞಾನದ ಕೂಪಕ್ಕೆ ದೂಡಿದೆ. ಇವರನ್ನು ಪ್ರಜ್ಞಾವಂತರನ್ನಾಗಿ ಮಾಡಬಾರದೆಂಬ ಭಾವನೆ ಮೇಲು ವರ್ಗದ ಜನರಲ್ಲಿ ಬೇರೂರಿ ಬಿಟ್ಟಿದೆ. ಇಂಥ ಅವಸ್ಥೆಯಲ್ಲಿ ದಲಿತತಿಗಾದ ಅರಿವಿನ ವಂಚನೆಯ ಸ್ಥಿತಿ ಹೇಗಿದೆ ಎಂಬುದನ್ನು 'ನಂಬಿಕೆಯ ಬೇಟೆ' ಕವನದಲ್ಲಿ ನೋಡಬಹುದು.

ವಿಶ್ವಾಸ
ಅಪನಂಬಿಕೆಯ
ಬ್ಯಾಂಕಿನಲಿ ಅಡಮಾನವಾಯ್ತು
'ಬಡ್ಡಿ' ಭೂತವಾಗಿ
ಸಂಚು ಬೀಸಿ
ಹೊಂಚು ಹಾಕಿದೆ
ನಂಬಿಕೆಯ ಬೇಟೆಯಾಡಲು

(ಸರಸ್ವತಿ ದು., ಜೀವ ಸಂಪಿಗೆ, 2006, ಪುಟ 36)

ದಲಿತರ ನಂಬಿಕೆಗೆ ಸ್ಪಂದಿಸದ 'ವ್ಯವಸ್ಥೆ' ಬಗ್ಗೆ ಕವಿ ಪ್ರತಿಭಟನೆಯ ಅಸ್ತ್ರವನ್ನು ಬೀಸಿದ್ದಾರೆ. ಇಂದಲ್ಲ ನಾಳೆ ಉತ್ತಮರಾಗುತ್ತೇವೆಂದು ಮಾಡಿದ ಪ್ರಯತ್ನಗಳೆಲ್ಲಾ ಮಣ್ಣು ಪಾಲಾಗಿ, 'ವ್ಯವಸ್ಥೆ'ಗೆ ಅಂಟಿಕೊಂಡು ನರಳಲು ಕಾರಣ 'ವ್ಯವಸ್ಥೆ'ಯ ಕುತಂತ್ರವೆಂದು ಕವಿ ಪ್ರತಿಭಟನೆಗೆ ಮುಂದಾಗಿದ್ದಾರೆ. ದಲಿತರು ಅರಿವಿನ ವಂಚನೆಯಿಂದ ಹೊರ ಬರಲು ಹೋದಷ್ಟು 'ನಂಬಿಕೆ' ಎಂಬುದು ಇವರನ್ನು ಬೇಟೆಯಾಡಿ, ಅವಿಶ್ವಾಸದ ಕಮರಿಗೆ ತಳ್ಳಿದೆ. ದಲಿತರು ಅರಿವಿನ ವಂಚನೆಯಿಂದಾದ ನೋವುಗಳನ್ನು ಸಹಿಸುತ್ತ, 'ನೋವು' ಬದುಕೆಲ್ಲವನ್ನೂ ಆಕ್ರಮಿಸಿಕೊಂಡರು, ಜೀವ ಸವೆಸಿದ ಚಿತ್ರಣ ಹಾಗೂ ಅವರ ನಂಬಿಕೆ, ಉಳ್ಳವರ ಬದುಕಿಗೆ ಊರುಗೋಲಾಗುವ ರೀತಿ, ಮನುಷ್ಯನ ಸಹಿಷ್ಣುತೆಗೆ ಎದುರಾಗುವ ಸವಾಲುಗಳು, ಅವುಗಳನ್ನು ಸ್ವೀಕರಿಸುತ್ತ ಬದುಕಿನ ಯಾನವನ್ನು ಮುಂದುವರೆಸಬೇಕಾದ ಅನಿವಾರ್ಯತೆಯನ್ನು 'ಬಿಸಿ ತುಣುಕುಗಳು' ಪದ್ಯ ಸೂಚಿಸುತ್ತದೆ.

ನಮ್ಮೂರಿನ ತುಂಬ
ಕೆಲವೇ ಹೃದಯಗಳು
ಅನ್ಯಾಯ ಕಂಡು ಹೇಸುತ್ತಿವೆ
ಅಕ್ಷರದಲ್ಲಿ ಅಭಿವ್ಯಕ್ತಿಸಿ ಪ್ರತಿಭಟಿಸುತ್ತಿವೆ
ಮನಸುಗಳು ಬೆಸೆಯುತ್ತಿಲ್ಲ

(ಅನಸೂಯ ಕಾಂಬಳೆ, ಮತ್ಸ್ಯಗಂಧಿಯ ಹಾಡು, 2011, ಪುಟ 34)

ಕವಿ ತನ್ನವರಿಂದ ಸರಿಯಾದ ಪ್ರೋತ್ಸಾಹ ದೊರೆಯುತ್ತಿಲ್ಲವೆಂದು ಪ್ರತಿಭಟಿಸುತ್ತಿದ್ದಾರೆ. 'ಅಕ್ಷರಸ್ಥ' ದಲಿತರಿಗೆ 'ಅನಕ್ಷರಸ್ಥ' ದಲಿತರು ಸ್ಪಂದಿಸದೇ, ಹಿಂದೆ ಬಿದ್ದು, 'ವ್ಯವಸ್ಥ'ಗೆ ಜೋತು ಬಿದ್ದಿರುವುದನ್ನು ಪ್ರತಿಭಟಿಸುತ್ತಿದ್ದಾರೆ.

ಇಲ್ಲಿನ ಸಾಲುಗಳಲ್ಲಿ ಅಕ್ಷರದ ಪ್ರತಿಭಟನೆಯನ್ನು ತಿಳಿಸಿದ್ದಾರೆ. ದಲಿತ ಸಮುದಾಯಕ್ಕೆ ಎದುರಾಗಿರುವ ಅಕ್ಷರ ಶೋಷಣೆ ಕಂಡು' 'ಅಕ್ಷರಸ್ಥ' ದಲಿತರು ಹೇಸಿಗೆ ಪಟ್ಟು,ಪ್ರಜ್ಞೆ ಮೂಡಿಸುವ ಪ್ರಯತ್ನದಲ್ಲಿದ್ದರೂ, ಕೆಲವರು 'ವ್ಯವಸ್ಥೆ'ಗೆ ಹೊಂದಿಕೊಂಡು ಸಮುದಾಯಕ್ಕೆ ವಿರುದ್ಧವಾಗಿರುವುದನ್ನು ಕವಯತ್ರಿ ಅರ್ಥವತ್ತಾಗಿ ಧ್ವನಿಸಿದ್ದಾರೆ. ಅರಿವಿನ ವಂಚನೆಯನ್ನು ಅನುಭವಿಸುತ್ತಿರುವ ಸಮುದಾಯದ ಬದುಕಿನ ಅನಾವರಣ, 'ವ್ಯವಸ್ಥೆ'ಯ ಬಲೆಗೆ ಸಿಕ್ಕ ದಲಿತ ಮನಸ್ಸುಗಳನ್ನು ಬಿಡಿಸಿ, ಅಜ್ಞಾನ ಮುಕ್ತತೆಗೆ ಬೆಸೆಯುವ ಪ್ರಯತ್ನವನ್ನು ಇಲ್ಲಿ ಕಾಣಬಹುದು.

'ವ್ಯವಸ್ಥೆ'ಯು ದಲಿತರಲ್ಲದ್ದ ಅರಿವಿನ ಕೊರತೆಯನ್ನು ದುರುಪಯೋಗ ಪಡಿಸಿಕೊಂಡು ಮೇಲೆ ಬೆಳೆದರೂ, ದಲಿತ ಸಮುದಾಯವನ್ನು 'ಅಜ್ಞಾನ ಮುಕ್ತ' ಮಾಡುವ ಪ್ರಯತ್ನ ಮಾಡದೇ, ತಾವೇ ತಿಳಿದೂ-ತಿಳಿದು ಅಜ್ಞಾನರಾದರೂ ಎಂಬ ಅಪವಾದವನ್ನು 'ಮಾತಿಗೆ ಮಾತು ಕೊಟ್ಟವನ' ಎಂಬ ಪದ್ಯದಲ್ಲಿ ಕಾಣಬಹುದು.

ಧಣಿಗೆ ಎದುರು ಬಿದ್ದವನನ್ನ
ಆನೆ ಕಾಲಿಗೆ ಕೊಟ್ಟರು
ದಂಗೆ ಎದ್ದು ನಿಂತವನನ್ನ
ರಥದ ಕಾಲಿಗೆ ಕಟ್ಟಿದರು

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 52)

'ವ್ಯವಸ್ಥೆ'ಯಲ್ಲಿರುವ 'ಅಜ್ಞಾನ' ಹಾಗೂ ಈ 'ಅಜ್ಞಾನಿ'ಗಳ ವರ್ತನೆಯನ್ನು ಕವಿ ಕಾವ್ಯದ ಮೂಲಕ ಅನಾವರಣಗೊಳಿಸಿ ಪ್ರತಿಭಟಿಸಿದ್ದಾರೆ. 'ವ್ಯವಸ್ಥೆ'ಯು 'ಅಕ್ಷರಸ್ಥ' ಸಮುದಾಯದ ಪ್ರತಿನಿಧಿ. ತಿಳುವಳಿಕೆ ಇರುವ, ಓದು, ಬರಹ ಕಲಿತ ವಿವೇಕವಂತರು ಎಂಬ ನಂಬಿಕೆ ಬರುತ್ತದೆ. ಆದರೆ ಕವಿಯ ಪ್ರಕಾರ ದಲಿತರು ಓದದೇ ಅಜ್ಞಾನಿಗಳಾದರೆ, ಇವರು ಓದಿಯೂ ಅಜ್ಞಾನಿಗಳು ಎಂದು ಹೇಳಿದ್ದಾರೆ. ವಾಸ್ತವತೆಯನ್ನು ಅರಿಯದೆ, ಕೋಪಕ್ಕೆ ಬಲಿಯಾಗಿ, ದಲಿತರನ್ನು ಬಲಿಪಶು ಮಾಡುವ ಇವರ ವರ್ತನೆಯೇ ಕವಿಯ ಈ ನಿರ್ಧಾರಕ್ಕೆ ಕಾರಣವಾಗಿದೆ. 'ವ್ಯವಸ್ಥೆ'ಗೆ ವಿರುದ್ಧವಾಗಿ ಮಾತನಾಡುವವರನ್ನು, ವಿರುದ್ಧವಾಗಿ ನಿಂತವರನ್ನು ಸಹಿಸದೆ, ಮೂರ್ಖರಂತೆ ನಡೆದು ಕೊಳ್ಳುವವರೇ ನಿಜವಾದ 'ಅಜ್ಞಾನಿ'ಗಳು ಎಂಬುದು ಕವಿಯ ಅಭಿಮತವಾಗಿದೆ.

'ಅರಿವಿನ ವಂಚನೆಯ ಮಡಿಲಿನಲ್ಲಿದ್ದ ದಲಿತ ಸಮುದಾಯವನ್ನು 'ವ್ಯವಸ್ಥೆ'ಯು, ಅಜ್ಞಾನದಲ್ಲೇ ನಿದ್ದೆ ಮಾಡಿ, ಮನೆಮಾಡಿ, ಬಾಯಿ ಹೊಲಿದು ದುಡಿಯುವ ಕ್ರಮಕ್ಕೆ ತಂದು ನಿಲ್ಲಿಸಿದ್ದನ್ನು 'ಕೆಂಪು ಸೂರ್ಯ' ಪದ್ಯವು ಹೀಗೆ ಪ್ರಶ್ನಿಸುತ್ತದೆ.

ಯಾವ ಮಾಯದ ನಿದ್ದೆ ಕವಿದಿತ್ತು ಇವರನ್ನು
ಯಾವ ಉಕ್ಕಿನ ಸರಳು ಬಿಗಿದಿತ್ತು ಇವರ
ಯಾವ ಬಣ್ಣದ ಬೀಗ ಮುಚ್ಚಿತ್ತು ಬಾಯನ್ನು
ಯಾವ ಮೋಡದ ಹಿಂಡು ತಡೆದಿತ್ತು ಬೆಳಕ
(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 88)

ದಲಿತರ ಅರಿವಿನ ವಂಚನೆಗೆ ಕಾರಣ ಹುಡುಕುವ ಮೂಲಕ ಕವಿ ಪ್ರತಿಭಟಿಸುತ್ತಿದ್ದಾರೆ. 'ಅಜ್ಞಾನ'ದ ಶೋಷಣೆಗೆ ಒಳಾಗಾಗುವ ಸಂದರ್ಭದಲ್ಲಿ ದಲಿತರು ಏನು ಮಾಡುತ್ತಿದ್ದರು ಎಂಬುದು ಪ್ರಶ್ನೆಯಾಗಿ ಉಳಿದು, ಪ್ರಶ್ನೆ ಹಾಕುವ ಮೂಲಕವೇ ಪ್ರತಿಭಟಿಸುತ್ತಿದ್ದಾರೆ.ತನ್ನವರು ಅರಿವಿನ ವಂಚಿತರು ಎಂಬುದು ಕವಿಗೆ ಮನವರಿಕೆಯಾಗಿದ್ದು, ಇಂಥವರನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡ 'ವ್ಯವಸ್ಥೆ'ಯ ವಿರುದ್ಧ ಕವಿಗೆ ಸಿಟ್ಟಿದೆ. ಹಾಗೂ ನನ್ನವರಅರಿವಿನ ವಂಚನೆಗೆ ವ್ಯವಸ್ಥೆಯೂ ಒಂದು ರೀತಿಯ ಕಾರಣ ಎಂದು ತಿಳಿದರೂ ಕವಿ ಬಹಿರಂಗವಾಗಿ ಇಲ್ಲಿನ ಸಾಲುಗಳಲ್ಲಿ ತಿಳಿಸಿಲ್ಲ.
ತನ್ನವರಿಗೆ ಬೆಳೆಯಲು ಅವಕಾಶ ಕೊಡದೆ, ತನ್ನ ಸ್ವಾರ್ಥಕ್ಕೆ ಬಳಸಿಕೊಂಡ 'ವ್ಯವಸ್ಥೆ'ಯನ್ನು ಕವಿ ಇಲ್ಲಿ ತರಾಟೆಗೆ ತೆಗೆದುಕೊಂಡಿದ್ದಾರೆ. ದಲಿತ ಸಮುದಾಯದ 'ಅಜ್ಞಾನ' ಪರಂಪರೆಯಲ್ಲಿ ಹಿಂಸೆಯನ್ನೆ ಪರಮ ರೂಪವಾಗಿ ಮಾಡಿಕೊಂಡಿರುವ ಶಕ್ತಿಶಾಲಿ ವ್ಯವಸ್ಥೆಯು, ತಾನು ಕೊಡುವ ಹಿಂಸೆಯನ್ನು ಗೌಣ ಮಾಡದೆ, ಬಹಿರಂಗ ಮಾಡಿ, ತನ್ನ ಬಲವನ್ನು ಸಮರ್ಥನೆ ಮಾಡಿಕೊಂಡಿದೆ. ಇಂತಹ ವರ್ತನೆಯಿಂದ ನೊಂದ, ದಲಿತರು 'ದಾರಿಯಾವುದೋ' ಎಂಬ ಪದ್ಯದಲ್ಲಿ ಮುಕ್ತಿ ಇಲ್ಲದಿದ್ದರೂ ಬೇಡ, ಬಿಡುಗಡೆ ಬೇಕು ಎಂದು ಹುಡುಕುವಂತಾಗಿದೆ.

ಕತ್ತಲೆಯಲ್ಲಿ ಮುಳುಗಿದ ಜನಕೆ
ಸುತ್ತಲು ಸಾವನು ಕಾಣುವ ಜನಕೆ
ಕರುಣೆಯ ಸರಪಳಿ ಕೊಲ್ಲುವ ಜನಕೆ

ಬಿಡುಗಡೆಯನ್ನು ನೀಡುವ ಒಂದು
ದಾರಿ ಯಾವುದೋ
ಸರಿ–ದಾರಿ ಯಾವುದೋ

(ಸಿದ್ಧಲಿಂಗಯ್ಯ, ಮೆರವಣಿಗೆ, 2007, ಪುಟ 142)

ದಲಿತರ ಅರಿವಿನ ವಂಚನೆಯ ವಿವಿಧ ಮುಖಗಳನ್ನು ಚಿತ್ರಿಸಿ ಪ್ರತಿಭಟಿಸುತ್ತಿದ್ದಾರೆ. ಸದಾ ಅಜ್ಞಾನದ ಮಡಿಲಲ್ಲೇ ಒದ್ದಾಡುವ ಮಂದಿಗೆ ಬಿಡುಗಡೆ ಬೇಕೆಂದು ಕವಿ ಪ್ರಯತ್ನಿಸುತ್ತ ಪ್ರತಿಭಟಿಸುತ್ತಿದ್ದಾರೆ. ಕವಿ ಸಂಘರ್ಷದ ಮೂಲ ಸತ್ಯಗಳನ್ನು, ಅದರ ಹಿಂಸೆಯ ರಭಸವನ್ನು ಶೋಧಿಸುವ ಪ್ರಯತ್ನದಲ್ಲಿದ್ದಾರೆ. ಅಜ್ಞಾನದ ಕತ್ತಲೆಯ ಕೂಪದಲ್ಲಿ ಕಪ್ಪೆಯಾಗಿ ವಾಸಮಾಡುವ ತನ್ನವರನ್ನು ಜ್ಞಾನದರಮನೆಗೆ ತರದಿದ್ದರೂ, ಅಜ್ಞಾನದ ಬಾವಿಯಿಂದ ಹೊರ ತರುವ ಶೋಧ ನಡೆಸುತ್ತಿದ್ದಾರೆ.

'ವ್ಯವಸ್ಥೆ'ಯ ಸಂಕಟವೆಲ್ಲಾ ನಮ್ಮದೇ ಎನ್ನುವ ದೊಡ್ಡ ಗುಣವೇ ದಲಿತರ ಅರಿವಿನ ವಂಚನೆಯ ಇನ್ನೊಂದು ಮುಖ. ನಾನು, ನನ್ನ ಆಸ್ತಿ ಎನ್ನುವ 'ವ್ಯವಸ್ಥೆ'ಗೆ ತಲೆ ಕಾಯುವ ಗುಣಕ್ಕೆ 'ಇವರು ನಮ್ಮವರು' ಎಂಬ ಪದ್ಯವು ಗುರುತಾಗಿದೆ.

ಮಳೆಬರದೆ ಬರಬಿದ್ದು ಬರಡಾದ ದಣಿಮನೆಗೆ
ಕಣ್ಣೀರ ಕಾಲುವೆಯ ಹರಿದವರೆಮ್ಮವರು
ಪ್ಲೇಗು ಮಾರಿಯು ಬಂದು ಊರೂರೆ ಗುಳೇ ಹೊರಟು
ಜೀವವುಳಿಸಿಕೊಳ್ಳುವಾಗ ದನಕರುವ ಕಾಯ್ದವರು
ಜೀತದ ಮನೆಯೊಳಗೆ ಜೋಕಾಲಿಯಂತಾಗಿ
ಜೀಕುತ್ತ ಜೀಕುತ್ತ ನರನರವ ಹೆಣೆದ ಹಗ್ಗದಂತಾದವರು
ದುಡಿದುಡಿದು ದಣಿದಾಗ ಯಮನಿದ್ದೆ ಪೊದೆ ಹೊಕ್ಕು
ಕನಸುಗಳ ಗಂಟಕ್ಕಿ ಅಟ್ಟದ ಮೇಲಿಟ್ಟು ಮೆಟ್ಟಿಲಾದವರು
ಬೆವರ ಕೊಳದಲಿ ಮಿಂದು ಚಂದ್ರ ಬೆಳಕಲಿ ಮಿಂಚಿ
ಮುಳ್ಳುವುಗೆ ಮೇಲೆ ಸುಖನಿದ್ರೆ ಗೆದ್ದವರು

(ಹನುಮಂತಯ್ಯ ಎಲ್., ಕಳ್ಳಿ ಹಾಲಿನ ಕಡಲು, 2009, ಪುಟ 94)

'ವ್ಯವಸ್ಥೆ'ಯ ಎಲ್ಲಾ ಕಷ್ಟಗಳಿಗೂ ಸ್ಪಂದಿಸುವುದೇ ದಲಿತರ ಗುಣ. ಈ ಗುಣವೇ ಅರಿವಿನ ವಂಚನೆಗೆ ನಾಂದಿ ಹಾಡಿತು. ಕವಿ ತನ್ನವರ ಈ ಗುಣವನ್ನೇ ಪ್ರತಿಭಟಿಸುವ ಸಾಲಿಗಳಿವು.

ತನ್ನವರ ಮುಗ್ಧತೆಯು ತನ್ನವರಿಗೆ ಮೀಸಲಾಗದೇ, 'ವ್ಯವಸ್ಥೆ'ಗೆ ಮಾತ್ರ ಸೀಮಿತವಾಗಿರುವುದು ಕವಿಯ ಪ್ರತಿಭಟನೆಗೆ ಕಾರಣವಾಗಿದೆ. ಜತೆಗೆ ದಲಿತರು ತಮ್ಮ ಧಣಿಯ ಮನೆಗೆ ಮರುಗುವುದನ್ನು ಇಲ್ಲಿ ಪರಾಂಬರಿಸಬಹುದು. ಇಲ್ಲಿನ 'ವ್ಯವಸ್ಥೆ' ತನ್ನ ಸ್ವಾರ್ಥದಲ್ಲೇ ಜೀವನಮಾಡುವಾಗ, ಅವರ ಬಗ್ಗೆ ಕಾಳಜಿ ಇಟ್ಟುಕೊಂಟಿರುವುದು ದಲಿತರ ಇನ್ನೊಂದು ರೀತಿಯ ಅಜ್ಞಾನವಾಗಿದೆ. ಮೂಕ ಪ್ರಾಣಿಗಳಿಗೆ ರಕ್ಷಣೆ ನೀಡುವ ದಲಿತರ ದೊಡ್ಡತನದಲ್ಲಿ ವ್ಯವಸ್ಥೆಯ ಕೀಳರಿಮೆಯನ್ನು ಕಾಣಬಹುದು. ಕವಿಯ ಪ್ರಕಾರ ಅರಿವಿನ ವಂಚನೆಯ ಮಡಿಲಲ್ಲಿ ಮಲಗಿರುವವರು ದಲಿತರಲ್ಲ ಬದಲಿಗೆ 'ವ್ಯವಸ್ಥೆ' ಎಂದು ಅಭಿವ್ಯಕ್ತಿಸಿದ್ದಾರೆ. ದಲಿತರು ಹಿಂದುಳಿದ, ತಳವರ್ಗ ಜನಾಂಗದ ಎಲ್ಲಾ ವೇದನೆ, ಸಂಕಟಗಳನ್ನು ಒಟ್ಟಾಗಿ ಅನುಭವಿಸುವುದರ ಜೊತೆಗೆ 'ಅರಿವಿನ ವಂಚನೆ' ಎಂಬ ಮರಕ್ಕೆ ಜೋತು ಬಿದ್ದಿದ್ದಾರೆ. ಅರಿವು ಇಲ್ಲದಿದ್ದಲ್ಲಿ 'ಶೋಷಣೆ' ಇರುತ್ತದೆ. ದಲಿತರ ಬದುಕಿನ ಪ್ರಾಮಾಣಿಕತೆಗೆ ಸಿಕ್ಕ ಪ್ರತಿಫಲಗಳಲ್ಲಿ ಅರಿವಿನ ವಂಚನೆಯೂ ಒಂದು. ಹಲವಾರು ವರ್ಷಗಳಿಂದ ಮೂಲಭೂತ ಸೌಕರ್ಯಗಳಿಂದಲೂ ವಂಚಿತರಾಗಿ ಶೋಷಣೆಗೆ ಎಡೆಯಾಗಿರುವ ದಲಿತರು ಎಲ್ಲವನ್ನು ಮೌನವಾಗಿ ಅನುಭವಿಸುವ ಸ್ಥಿತಿ ಕೂಡ ಅರಿವಿನ ವಂಚನೆಯಾಗಿರುವುದು 'ಮಾತಾಡು ಮಲ್ಲಿಗೆ' ಎಂಬ ಕವನದಲ್ಲಿ ಬಿತ್ತರಗೊಂಡಿದೆ.

ಹಗಲು ಇರುಳಿನ ಕದನ ದಿನ ನಿತ್ಯವಲ್ಲ
ಸುತ್ತುವ ಗಾಳಿ ಇದು ಮುಗಿಯದಲ್ಲ
ಬಂದದ್ದು ಬರಲೆನ್ನುವ ಇಂಗಬೇಕಿಲ್ಲ
ಬಂಗಾರದ ಬೆಳಕಿಗಾಗಿ ಕಾಯಬೇಕಲ್ಲ
ಉರಿಬಿಸಿಲು ಸೂರ್ಯ ಬಾಯಿ ಹೊಲೆದಿರುವಾಗ
ಸುತ್ತಲೂ ಹತ್ತು ಹುತ್ತ ಎದ್ದಿರುವಾಗ
ಹೊತ್ತು ಹೊತ್ತಿಗೆ ಕುತ್ತು ಕಾದಿರುವಾಗ
ಕತ್ತೆತ್ತಿ ಮೈ ಮರೆತು ನಗುವುದ್ಯಾಂಗ

(ಅರವಿಂದ ಮಾಲಗತ್ತಿ, ನಾದ ನಿನಾದ, 1999, ಪುಟ 17)

ದಲಿತರಿಗೆ 'ವ್ಯವಸ್ಥೆ'ಯ ಶೋಷಣೆಯೇ ಸರ್ಪಗಾವಲಾಗಿರುವಾಗ ಮನ ಬಿಚ್ಚಿ ನಲಿದಾಡಲು ಅವಕಾಶ ಹೇಗೆ ಸಾಧ್ಯವೆಂಬುದೆ ಕವಿಯ ಪ್ರತಿಭಟನೆಗೆ ಕಾರಣವಾಗಿದೆ.

ಪ್ರಕೃತಿಯ ವೈಚಿತ್ರ್ಯಗಳು ಹೇಗೆ ಬದಲಾಗುವುದಿಲ್ಲವೋ ಹಾಗೆ ನನ್ನವರ 'ಅರಿವಿನ ವಂಚನೆ' ಎಂಬ ಕತ್ತಲು ಬದಲಾಗಿವುದಿಲ್ಲವೆಂದು ಕವಿ ಬೇಸರ ವ್ಯಕ್ತ ಪಡಿಸುತ್ತ, ಆ ಪರಿಸ್ಥಿತಿಯನ್ನೇ ಪ್ರತಿಭಟಿಸುತ್ತಿದ್ದಾರೆ. ಇಲ್ಲಿ ದಲಿತರ ಪ್ರತಿಕ್ಷಣದ ಬದುಕು ಅಜ್ಞಾನಯುಕ್ತವಾಗಿದೆ. ಮುಂದೆ ಒಂದು ದಿನ ಸುಖ ಅನುಭವಿಸಬೇಕೆಂದು ಕಾಯುತ್ತ, ಇಂದು ಭವಿಷ್ಯದ ಚಿಂತನೆ ಮಾಡುತ್ತ, ಮುಂಬರುವ ಕಾಲದಲ್ಲಿ ಬಂಗಾರದ ಕನಸು ಕಂಡು, ಇಂದಿನ ಸಮಯವನ್ನು ಹಾಳು ಮಾಡಿಕೊಂಡಿರುವ ಅಜ್ಞಾನವನ್ನು ಕವಿ ಕಾವ್ಯವಾಗಿಸಿದ್ದಾರೆ. ಎಲ್ಲಾ ಅನಿಷ್ಟಗಳು ತನ್ನವರ ಕಡೆಗೆ ತಿರುಗಿರುವಾಗ ಅವರಿಗೆ ಜ್ಞಾನದ ಪ್ರಸರಣೆ ಹೇಗೆ ಎಂಬ ಗೊಂದಲ ಕವಿಗೆ ಮೂಡಿದೆ.

ದಲಿತ ಸಮುದಾಯವು ಅರಿವಿನಿಂದ ವಂಚಿತರಾಗಿ ಅಜ್ಞಾನದ ಕುಕ್ಷಿಗಳಾಗಿದ್ದರೂ, ಜ್ಞಾನ ಮಾರ್ಗದ ಕಡೆ ಹೆಜ್ಜೆ ಹಾಕಬಲ್ಲ ನಿಪುಣತೆ ಹೊಂದಿದ್ದರು. ತಮ್ಮ ಈ ಸ್ಥಿತಿಗೆ ಪ್ರತ್ಯಕ್ಷ, ಪರೋಕ್ಷವಾಗಿ ಉಳ್ಳವರು ಕಾರಣ ಎಂಬ ಅಂಶವನ್ನು ಮನಗೊಂಡು ಜ್ಞಾನಿಗಳಾದರು. ತಮ್ಮ ಅರಿವಿನ ವಂಚನೆಗೆ ಮೂಲವನ್ನು ಹುಡುಕಿ, ಅದನ್ನು ಬೇರು ಸಹಿತ ಕಿತ್ತು ಹಾಕಬೇಕೆಂಬ ದೃಢ ನಿರ್ಧಾರ ತೊಟ್ಟಿರುವುದು 'ಮೂಲ' ಪದ್ಯದಲ್ಲಿ ದಾಖಲಾಗಿದೆ.

ಮತ್ತೆ ಅಗೆದು ತಡಕುತ್ತೇನೆ
ಬೇರಿನ ಮೂಲ ಹಿಡಿದು
ಸಾಹುಕಾರನ ಮನೆಗೆ
ಸಾಯೋ ತನಕ ಸೌದೆ ಹೊತ್ತರೂ
ಬಡ್ಡಿಯೇ ತೀರಲಿಲ್ಲವೆಂಬೀ
ತಾತನ ಕಾಲದ ಹಳೆಮರವ
ಬುಡಮುಟ್ಟು ಉರುಳಿಸಿ
ಘನವಾದ ಕಟ್ಟಡವ ಕಟ್ಟಿ
ಸರಿಕರೆದುರಿಗೆ
ಹೊಸ ಸಂಸಾರವ ಹೂಡುತ್ತೇನೆ

(ಜವರಯ್ಯ ಮ.ನ., ವಿದ್ರೋಹ, 2002, ಪುಟ 09)

ನೇರವಾಗಿ 'ವ್ಯವಸ್ಥೆ'ಯನ್ನು ಪ್ರತಿಭಟಿಸುತ್ತಿರುವುದು ಇಲ್ಲಿನ ವಿಶೇಷ. ಇದು ದಲಿತರಲ್ಲಿ ಮೂಡಿರುವ ಜಾಗೃತಿಯನ್ನು ತಿಳಿಸುತ್ತದೆ.

ತಮಗೆ ಇಲ್ಲಿವರೆಗೆ ಉಂಟಾದ ಶೋಷಣೆಯನ್ನು ಒಂದೇ ಸಾರಿ ಬೆಳಕಿಗೆ ತರುವ ಪ್ರಯತ್ನದೊಂದಿಗೆ ಕವಿ ಪ್ರತಿಭಟಿನಾ 'ಶಕೆ'ಯನ್ನು ಆರಂಭಿಸಿದ್ದಾರೆ. ಬಡ್ಡಿಯಾಸೆಗೆ ಜೀತಕ್ಕೀಟ್ಟುಕೊಂಡಿರುವ ದೊರೆಯ ಹಣದ ದಾಹವನ್ನು ಅರಿತು, ಮೊದಲು ಬಡ್ಡಿಯೆಂಬ ಆಲದ ಮರವನ್ನು ಕಿತ್ತು, ಅದೇ ದುಡ್ಡಿನಲ್ಲಿ ಸ್ವಂತ ನೆಲೆ ಕಾಣುವ ನಿರೀಕ್ಷೆಯಲ್ಲಿರುವುದು ಇವರ ಜ್ಞಾನದ ಮಟ್ಟವನ್ನು ಸೂಚಿಸುತ್ತದೆ. ತಮ್ಮ ಪೂರ್ವಜರಿಗೆ ಎಂದೋ ಕೊಟ್ಟ ಸಾಲದ ನೆಪ ಹೇಳಿ, ಇಂದಿಗೂ ಬಡ್ಡಿ ತಿನ್ನುವ ಉಳ್ಳವರ ವರ್ತನೆ ಖಂಡಿಸುವಲ್ಲಿ ಕವಿಯ 'ಜ್ಞಾನ'ದ ಜಾಣ್ಮೆ ಎದ್ದು ಕಾಣುತ್ತದೆ.

ಇಲ್ಲಿ ದಲಿತರ ಅಭಿವೃದ್ಧಿಗೆ ಪೂರಕವಾದ ಅಂಶವು ಕಾಣಸಿಗುತ್ತದೆ.ಅರಿವಿನ ವಂಚನೆ ಎಂಬ 'ಅಜ್ಞಾನ'ದ ಬಲವು ಮನುಷ್ಯನ ಸ್ವಾಭಿಮಾನ, ಆತ್ಮ ಗೌರವ, ಪ್ರತಿಷ್ಠೆಗೆ ಧಕ್ಕೆ ತರುವ ಪ್ರಯತ್ನ ಮಾಡಬಹುದು. ಇದು ಅಂತರಂಗದ ಆತ್ಮ ವಿಶ್ವಾಸವನ್ನು ಕುಗ್ಗಿಸಿ, ಅವಮಾನದ ಜೀವನಕ್ಕೆ ಎಡೆ ಮಾಡಿಕೊಡುವುದು 'ನನ್ನ ಅಸ್ಪೃಶ್ಯನ ಮಾಡಿದ' ಎಂಬ ಪದ್ಯದಲ್ಲಿ ಸಾಬೀತಾಗಿದೆ.

ನನ್ನ ಸ್ವಾಭಿಮಾನವ
ಹತ್ತಿಕ್ಕುವ ಧರ್ಮ ನನಗೆ ಬೇಡ
ನನ್ನ ಆತ್ಮ ಗೌರವದ ಮೇಲೆ
ಹಲ್ಲೆ ನಡೆಸುವ ಧರ್ಮ ನನಗೆ ಬೇಡ
ನನ್ನ ಪ್ರತಿಷ್ಠೆಯ
ಕುಗ್ಗಿಸುವ ಧರ್ಮ ನನಗೆ ಬೇಡ

(ಮೂಡ್ನಾಕೂಡು ಚಿನ್ನಸ್ವಾಮಿ, ಚಂದಿರನ ಕಣ್ಣು ಇಂಗಲಾರದ ಹುಣ್ಣು, 2004, ಪುಟ 42)

ಕತ್ತಲಿಂದ ಬೆಳಕಿನೆಡೆಗೆ ಹೋಗುವಂತೆ, 'ಅಜ್ಞಾನ'ದಿಂದ 'ಜ್ಞಾನ'ದೆಡೆಗೆ ದಲಿತ ಸಮುದಾಯವು ಹೆಜ್ಜೆ ಇಡುತ್ತಿರುವುದನ್ನು ಇಲ್ಲಿ ಕಾಣಬಹುದು. 'ಅಸ್ಪಶ್ಯತೆ'ಯಿಂದ ಅಜ್ಞಾನಕ್ಕೆ ಒಳಗಾಗಿರುವ ತನ್ನವರ ಸ್ಥಿತಿಯೇ ಕವಿಯ ಈ ನಿರ್ಧಾರಕ್ಕೆ ಕಾರಣವಾಗಿದೆ. 'ಅಸ್ಪೃಶ್ಯತೆ'ಯ ಶೋಷಣೆಯೇ ನುಂಗಲಾರದ ತುತ್ತು. ಅದರ ಜತೆಗೆ ಅರಿವಿನ ವಂಚನೆ ಎಂಬ ಕಾರ್ಮೋಡದಿಂದ ತನ್ನವರು ಅನುಭವಿಸಿದ ನಾನಾ ತೊಂದರೆಗಳಿಗೆ ಎಳ್ಳು ನೀರು ಬಿಡುವ ಸಲುವಾಗಿ ಕವಿ ತನ್ನ ಹಾಗೂ ತನ್ನವರನ್ನು 'ಅಸ್ಪೃಶ್ಯ' ಎಂದು ಕರೆಯುವ ಧರ್ಮವನ್ನು ತಿರಸ್ಕಾರಿಸುವ ನಿರ್ಧಾರವು ಇಲ್ಲಿ ಅಡಕವಾಗಿದೆ.

ಮೇಲಿನ ದಲಿತ ಕವನಗಳಲ್ಲಿ 'ಜ್ಞಾನ' ಒಂದು ಜನಾಂಗದ ಏಳಿಗೆಗೆ ಕಾರಣವಾದರೇ, ಅರಿವಿನ ವಂಚನೆ ಒಂದು ಜನಾಂಗದ ಹಿನ್ನಡೆಗೆ ಕಾರಣವೆಂಬ ಅಂಶ ಕಂಡು ಬರುತ್ತದೆ. ಇಲ್ಲಿನ ಶೋಷಣೆಗೆ ಕಾರಣ 'ವ್ಯವಸ್ಥೆ'. ದಲಿತ ಸಮುದಾಯಕ್ಕೆ ಉದ್ದೇಶ ಪೂರ್ವಕವಾಗಿ ಜ್ಞಾನದ ಹಕ್ಕನ್ನು ಕಸಿದುಕೊಂಡಿರುವ ಉದಾಹರಣೆಗಳು ಕಾವ್ಯದಲ್ಲಿ ಕಂಡು ಬಂದಿದೆ. 'ವ್ಯವಸ್ಥೆ'ಯನ್ನು ದೇವರಂತೆ ಕಂಡ ದಲಿತ ಸಮುದಾಯದ ಮೌಢ್ಯತೆಯ ಸಂಪೂರ್ಣ ಲಾಭ ಪಡೆದು ಅಜ್ಞಾನದಿಂದ ಹೊರ ಬರದಂತೆ ತಡೆಯಲಾಗಿದೆ. ಇದೇ ಅರಿವಿನ ವಂಚಿತರ ಲಾಭದಿಂದ 'ವ್ಯವಸ್ಥೆ' ಆರ್ಥಿಕವಾಗಿ ಬಲವಾಗಲು ಅಸ್ತ್ರವಾಗಿದೆ.

ಒಂದು ಕಡೆ 'ವ್ಯವಸ್ಥೆ'ಯ ಕುತಂತ್ರ ಕಂಡ ಕೆಲ ದಲಿತರು, ಇವರನ್ನು ತ್ಯಜಿಸಿ, ಸ್ವಾಭಿಮಾನದ ಜೀವನದತ್ತ ಮುಖ ಮಾಡಿದರೆ, ಕೆಲ ದಲಿತರು ವ್ಯವಸ್ಥೆಗೆ ಅಂಟಿಕೊಳ್ಳುವ ಮೂಲಕ ವಿರೋಧ ವ್ಯಕ್ತ ಪಡಿಸಿದರು. ದಲಿತ ಕವಿಗಳು ಸಮುದಾಯದವರನ್ನು ಅರಿವಿನ ವಂಚನೆಯಿಂದ ಮುಕ್ತರಾಗಿ ಮಾಡುವ ಸಂಕಲ್ಪದಿಂದ, ಆದರ್ಶ ವ್ಯಕ್ತಿಗಳ ಗುಣಗಳಿಗೆ ನಮ್ಮ ಸಮುದಾಯದವರು ಸಮವೆಂದು ಬದಲಾವಣೆಯ ಮಂತ್ರವನ್ನು ಜಪಿಸುವತ್ತ ಪ್ರಯತ್ನಿಸಿದ್ದಾರೆ.

ದಲಿತರ ಅಜ್ಞಾನದ ಅತಿರೇಖವೆಂದರೆ ಉಳ್ಳವರೇ ಜೀವನಾಡಿ ಎಂಬ ಭ್ರಮೆಯಲ್ಲಿ ಇದ್ದದ್ದು. ಇಂಥ ಭ್ರಮಾ ಲೋಕದಲ್ಲಿ ತೇಲುತ್ತಿದ್ದ ದಲಿತರು ತಮಗೆ ಅರಿವಿಲ್ಲದಂತೆ ಅವರ ಸೇವಕರಾಗಿ ತಮ್ಮ ಸರ್ವಸ್ವವನ್ನು ಧಾರೆ ಎರೆದ ವಿಚಿತ್ರ ಸನ್ನಿವೇಶಗಳನ್ನು ಪದ್ಯದಲ್ಲಿ ಕಾಣಬಹುದು. ದೇವರ ಹೆಸರಲ್ಲೂ ದಲಿತ ಹೆಣ್ಣು ಅರಿವಿನ ವಂಚನೆಯ ಶೋಷಣೆಗೆ ಅನಾವರಣಗೊಳ್ಳುತ್ತಾಳೆ. 'ಬಸವಿ' ಎಂಬ ಅಸಂಪ್ರದಾಯಿಕ ಆಚರಣೆ ಮೂಲಕ ದೇವರ ಹೆಸರಲ್ಲಿ 'ವ್ಯವಸ್ಥೆ' ಒಂದು ರೀತಿಯ ಸುಖ ಪಟ್ಟರೇ, ಲೈಂಗಿಕ ಶೋಷಣೆಗೆ ದಲಿತ ಹೆಣ್ಣೇ ಸೂಕ್ತ ಎಂಬ ಕಲ್ಪನೆ 'ವ್ಯವಸ್ಥೆ'ಯಲ್ಲಿ ಬೆಳೆದಿರಲು ಕಾರಣ ದಲಿತರಲ್ಲಿ ಅಡಗಿರುವ ಅರಿವಿನ ವಂಚನೆಯೇ ಕಾರಣವಾಗಿದೆ.

ತುತ್ತಿನ ಊಟಕ್ಕೆ ದಲಿತರು 'ವ್ಯವಸ್ಥೆ'ಗೆ ವಿಧೇಯಕರಾಗಿ ನಿಂತರೆ, ಅದೇ ವಿಧೇಯತೆ 'ವ್ಯವಸ್ಥೆ'ಗೆ ಲಾಭವಾಗುತ್ತದೆ.

ಯುವ ದಲಿತ ಅಕ್ಷರ ಕಲಿತು, ಹೊಸ ದಿಕ್ಕಿನೆಡೆಗೆ ಸಾಗ ಬಯಸಿದರೆ, ವ್ಯವಸ್ಥೆಗೆ ವಿಧೇಯಕರಾದ ಹಿರಿಯ ದಲಿತ ವರ್ಗ ಆ ದಿಕ್ಕಿಗೆ ಮುಳ್ಳಾಗಿ ಪರಿಣಮಿಸಿ, ತೊಡಕಗಿದ್ದಾರೆ. ಈ ರೀತಿ ದಲಿತರಲ್ಲೇ ನಿಖರವಾದ ಹೊಂದಾಣಿಕೆ ಇಲ್ಲವಾದಾಗ ಅದರ ಸಂಪೂರ್ಣ ಲಾಭ 'ವ್ಯವಸ್ಥೆ'ಗಾಗುತ್ತದೆ.

ದಲಿತರ ಅಜ್ಞಾನದ ಹೆಗ್ಗುರುತೆಂದರೇ 'ಜೀತ'. ದಲಿತ ಕವಿಗಳಿಗೆ ತನ್ನ ಸಮುದಾಯದವರನ್ನು 'ಜೀತ' ಪದ್ಧತಿಯಿಂದ ನಿರ್ಮೂಲನೆ ಮಾಡುವ ಉದ್ದೇಶದಿಂದ 'ಜಾಗೃತಿ' ಉಂಟು ಮಾಡುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಇಂದು ದಲಿತರು 'ಜೀತ'ದಿಂದ ಕೊಂಚ ಬಿಡುಗಡೆ ಪಡೆದಿದ್ದಾರೆಂದರೆ ದಲಿತ ಸಮುದಾಯ ಕತ್ತಲಿಂದ ಬೆಳಕಿನೆಡೆಗೆ, ಅಂದರೆ 'ಅಜ್ಞಾನ'ದಿಂದ 'ಜ್ಞಾನ'ದ ಕಡೆಗೆ ತಮ್ಮ ನಿಲುವನ್ನು ಬದಲಾವಣೆ ಮಾಡಿಕೊಂಡಿರುವುದೇ ಆಗಿದೆ.

ಒಟ್ಟು ಪ್ರತಿಭಟನೆ ನೆಲೆಗಳು ಎಂಬ ಅಧ್ಯಾಯದಲ್ಲಿ ದಲಿತರಿಗೆ ಅಸ್ಪೃಶ್ಯತೆ, ಹಸಿವು, ನೋವು, ಲೈಂಗಿಕ ಶೋಷಣೆ, ಅರಿವಿನ ವಂಚನೆ ಎಂಬ ನೆಲೆಗಳಲ್ಲಿ ಉಂಟಾದ ಶೋಷಣೆ, ಇದಕ್ಕೆ ದಲಿತ ಕವಿಗಳು ತೋರಿದ ಪರ, ವಿರೋಧದ ಕಾವ್ಯಗಳನ್ನು ಇಲ್ಲಿ ಚರ್ಚಿಸಲಾಗಿದೆ.

ದಲಿತರಿಗೆ ಸಮಾಜದಲ್ಲಿ ಎಲ್ಲಾ ರೀತಿಯ ಅಸ್ಪೃಶ್ಯತೆ ಎದುರಾಗಿದ್ದು, ಇದರಲ್ಲೆ 'ಜಾತಿಅಸ್ಪೃಶ್ಯತೆ', 'ಧಾರ್ಮಿಕಅಸ್ಪೃಶ್ಯತೆ', 'ಶೈಕ್ಷಣಿಕಅಸ್ಪೃಶ್ಯತೆ'ಯಲ್ಲಿ ಎದುರಾದ ಶೋಷಣೆಗಳು ತಳ ಸಮುದಾಯದಲ್ಲಿ ತಲ್ಲಣ ಉಂಟುಮಾಡಿದ ಹಾಗೂ ಇದರ ವಿರುದ್ಧ ಕಾವ್ಯದ ಮಡಿಲಲ್ಲಿ ನಡೆದ ಪ್ರತಿಭಟನೆಯನ್ನು 'ಅಸ್ಪೃಶ್ಯತೆ : ಪ್ರತಿಭಟನೆ'ಯಲ್ಲಿ ವ್ಯಕ್ತವಾಗಿದೆ.

ತುತ್ತು ಅನ್ನಕ್ಕಾಗಿ 'ಜೀತ', 'ಸಾಲ'ದ ಸುಳಿಯಲ್ಲಿ ಸಿಕ್ಕಿ ನರಳಿದ ಅನೇಕ ಜಲ್ವಂತ ನಿದರ್ಶನಗಳು ಕಾವ್ಯಗಳಲ್ಲಿ ಕಂಡು ಬರುತ್ತವೆ. ಇದು ದಲಿತರನ್ನು ಬೆನ್ನತ್ತಿದ ನೆರಳಿನಂತೆ ಕಾಡಿದೆ. ಉಳ್ಳವರ ಹೊಟ್ಟೆ ತುಂಬಿಸಿ, ತಾವು ಹಸಿವಿನಿಂದ ಸಾಯುವ ಪರಿ 'ದಲಿತರಿಗೆ' ಮಾತ್ರ ಇದದ್ದು 'ಹಸಿವು : ಪ್ರತಿಭಟನೆ'ಯಲ್ಲಿ ಕಂಡು ಬರುತ್ತದೆ.

ಪ್ರತಿಯೊಬ್ಬರಿಗೂ ನೋವು ಸಾಮಾನ್ಯವಾಗಿದ್ದರೂ, ದಲಿತರಿಗೆ ಉಂಟಾದ 'ದೈಹಿಕ', 'ಮಾನಸಿಕ' ನೋವುಗಳಿಂದ ಉಂಟಾದ ಮಾನಸಿಕ ಖಿನ್ನತೆ, ಇದಕ್ಕೆ ದಲಿತ ಕಾವ್ಯಗಳು ಪ್ರತಿಭಟಿಸಿ, ನೀಡಿದ ಪರಿಹಾರಗಳನ್ನು ಗಮನಿಸಲಾಗಿದೆ.

ದಲಿತರು 'ಜಾತಿ' ಶೋಷಣೆಯಲ್ಲಿ ಅನುಭವಿಸಿದ ಮಾನಸಿಕ ನೋವೇ ದಲಿತರಿಗೆ ಅರಗಿಸಿಕೊಳ್ಳಲಾಗಲಿಲ್ಲ ಎಂಬುದು 'ನೋವು : ಪ್ರತಿಭಟನೆ'ಯಲ್ಲಿ ಕಂಡು ಬಂದಿದೆ.

ದಲಿತ ಹೆಣ್ಣಿಗೆ ವ್ಯವಸ್ಥೆಯಿಂದ ವಿಶೇಷವಾಗಿ ನಡೆದ ಶೋಷಣೆ ಎಂದರೇ 'ಲೈಂಗಿಕ ಶೋಷಣೆ'. ಇಲ್ಲಿ ವ್ಯವಸ್ಥೆ ದೇವರ ಹೆಸರಲ್ಲಿ, ಹೆಣ್ಣಿನ ಮುಗ್ಧತೆಯ ಲಾಭದಲ್ಲಿ, ಅಮೀಷದ ಅಡಿಯಲ್ಲಿ, ಹಬ್ಬದ ಹೆಸರಲ್ಲಿ ಹೀಗೆ ನಾನಾ ರೀತಿಯ ನೆಪದಲ್ಲಿ 'ಲೈಂಗಿಕ' ಶೋಷಣೆ ನೀಡಿರುವುದು ಕಾವ್ಯದ ಸೊಗಿನಲ್ಲಿ ಹೊರ ಬಂದಿದೆ. ಕವಿಗಳು ಈ ಶೋಷಣೆಯನ್ನು ಹೊರ ಲೋಕಕ್ಕೆ ತಂದು ವ್ಯವಸ್ಥೆಯ ಕರಾಳ ಮುಖವನ್ನು, ತಮ್ಮ ಕಾಮ ದಾಹಕ್ಕೆ ದಲಿತ ಹೆಣ್ಣನ್ನು ಬಳಸಿಕೊಂಡಿದನ್ನು 'ಲೈಂಗಿಕ ಶೋಷಣೆ : ಪ್ರತಿಭಟನೆ' ಎಂಬ ಅಧ್ಯಾಯದಲ್ಲಿ ಪ್ರತಿಭಟಿಸುವುದು ಕಂಡು ಬರುತ್ತದೆ.

'ಅರಿವು' ಎಂದರೇ 'ಜ್ಞಾನ'. ಇದು ಒಂದು ಕಾಲದಲ್ಲಿ ಕೆಲ ವರ್ಗ, ವರ್ಣದವರಿಗೆ ಮಾತ್ರ ಸೀಮಿತವಾಗಿತ್ತು. ಹುಟ್ಟಿನಿಂದ ಬರುವ ಅರಿವು ಎಲ್ಲಾರಿಗೂ ಅನ್ವಯಿಸುವುದು. ಆದರೆ ದಲಿತರು ಬದುಕಿನ ಸಂಘರ್ಷದಿಂದ 'ಜ್ಞಾನ'ವನ್ನು ಹೋರಾಟದ ಮೂಲಕ ಪಡೆದು, ಒಂದು ಹಂತಕ್ಕೆ ಬಂದ ನಂತರ 'ವ್ಯವಸ್ಥೆ'ಯ 'ಜ್ಞಾನ'ದಂತಿದ 'ಅಜ್ಞಾನ'ವನ್ನು ಪ್ರತಿಭಟಿಸಿ, ತನ್ನವರ 'ಅಜ್ಞಾನ'ಕ್ಕೆ ವ್ಯವಸ್ಥೆಯೇ ಕಾರಣವೆಂದು ತಿಳಿದು ಕಾವ್ಯದ ನೆಲೆಯಲ್ಲಿ ಪ್ರತಿಭಟಿಸುವ ಅಂಶಗಳು 'ಅರಿವಿನ ವಂಚನೆ : ಪ್ರತಿಭಟನೆ' ಎಂಬ ಅಧ್ಯಾಯದಲ್ಲಿ ಕಂಡು ಬರುತ್ತದೆ.

# ಅಧ್ಯಾಯ – 6
## ಪ್ರತಿಭಟನೆಯ ಗೆಲುವು – ಸೋಲು

ಸಾಮಾನ್ಯವಾಗಿ ಕಾವ್ಯ ಎಂದಾಕ್ಷಣ ಪ್ರಕೃತಿಯೋ, ನಾಡೋ, ನುಡಿಯ ವರ್ಣನೆಯೋ ಇರುತ್ತದೆಂದು ಭಾವಿಸಿರುವುದುಂಟು. ಆಧುನಿಕ ಸಾಹಿತ್ಯ ಘಟ್ಟದಲ್ಲಿ ಮೂಡಿ ಬಂದ ನವೋದಯ, ಪ್ರಗತಿಶೀಲ, ನವ್ಯ ಪಂಥಗಳಲ್ಲಿ ಕಾವ್ಯದ ವಸ್ತುಗಳು ಮೇಲಿನ ವರ್ಣನಾ ಗೀತೆಗಳಾಗಿ ಮೂಡಿ ಬಂದಿರುವ ಉದಾಹರಣೆಗಳುಂಟು. ಆದರೆ ಇವೆಲ್ಲಕ್ಕೂ ವಿಭಿನ್ನವಾಗಿ ಹುಟ್ಟಿಕೊಂಡ ಕಾವ್ಯ ಪ್ರಾಕಾರವೆಂದರೆ 'ದಲಿತ ಕಾವ್ಯ'.

ಇತರ ಸಾಹಿತ್ಯ ಪ್ರಾಕಾರಗಳು ತಾವು ಕಂಡ ಪ್ರಕೃತಿಯ ವೈಚಿತ್ರ್ಯವನ್ನು, ತಮ್ಮ ಅನಿಸಿಕೆಗೆ ತಕ್ಕಂತೆ ಬರೆದು, ನಾಡು ನುಡಿಗೆ ಗೌರವ ಸೂಚಿಸುವ ಸಾಲುಗಳನ್ನು ಸೃಷ್ಟಿಸಿದರೆ, ದಲಿತ ಕಾವ್ಯವೆನ್ನುವುದು ಯಾವುದೇ ಆಡಂಬರಕ್ಕೂ ಒಳಗಾಗದೇ, ತನ್ನ ಸಮುದಾಯದ ಸ್ವರೂಪವನ್ನು, ಇರುವ ಸ್ವರೂಪದಲ್ಲೇ ಮೂಡಿಸಿ, ಪ್ರತಿಭಟನೆಯಾಗಿ ಹುಟ್ಟಿ, ಕ್ರಾಂತಿಗೀತೆಗಳಾಗಿ ಸಾಮಾನ್ಯ ಜನ ಸಿಡಿದೇಳುವ ಕ್ರಿಯೆಯನ್ನು ಮೈಗೂಡಿಸಿಕೊಂಡಿತು.

ದಲಿತ ಕಾವ್ಯದಲ್ಲಿ ವ್ಯಕ್ತವಾದ ನೈಜ ನೋವಿನ ಪದರುಗಳು, ಭೂಮಿಯ ಪದರುಗಳ ತೀವ್ರ ಕಂಪನಗಳಲ್ಲಿ ದಾಖಲಾಗಿರುವುದು ಕಂಡು ಬರುತ್ತದೆ. ತಾನು ಇರುವ ಸ್ವರೂಪದಲ್ಲೇ ಪ್ರತಿಭಟನೆ ವ್ಯಕ್ತಪಡಿಸುವುದಕ್ಕೆ ವ್ಯವಸ್ಥೆಯಿಂದಾದ ಅಸಮಾನತೆ, ಶೋಷಣೆ, ಹಸಿವು, ಬಡತನ, ಜೀತ ಎಂಬ ಅನಿಷ್ಟ ಪದ್ಧತಿಯಿಂದಾಗಿ ದೈಹಿಕ, ಮಾನಸಿಕ ನೋವುಗಳು, ಅಕ್ಷರ ಹಿನ್ನಡೆ, ಸಾಮಾಜಿಕ ಅವಮಾನ, ಊರ ಒಳಗಿನ ನಿರ್ಬಂಧಗಳೇ ಮೂಲ ಕಾರಣವಾಯಿತು. ಪ್ರತಿಭಟನೆ ದಲಿತ ಕಾವ್ಯದ ಅಸ್ತ್ರವಾಗಿದ್ದರೂ ಪ್ರತಿಭಟನೆ ಮಾಡುವ ಚಟವಾಗಲಿ, ಅಭ್ಯಾಸವಾಗಲಿ ಇವರಿಗೆ ಇರಲಿಲ್ಲ. ಅನಿವಾರ್ಯ ಕಾರಣಗಳಿಂದ ಈ ಹಾದಿಯನ್ನು ಹರಸುವಂತಾಯಿತು. ದಲಿತ ಸಾಹಿತ್ಯಕ್ಕಿಂತ ಪೂರ್ವದಲ್ಲಿ ಪ್ರತಿಭಟನೆ ಎಂಬುದು ಒಂದು ಭಾಗವಾಗಿದ್ದು, ದಲಿತ ಸಾಹಿತ್ಯದ ಕಾಲದಲ್ಲಿ ಪ್ರತಿಭಟನೆಯು ಸಮುದಾಯದ ಪರವಾಗಿ ಹುಟ್ಟಿ ಬೆಳೆಯಿತು. ಆದ್ದರಿಂದ ದಲಿತ ಕಾವ್ಯದಲ್ಲಿ ಪ್ರತಿಭಟನೆಯನ್ನು ಮಾತ್ರ ಹುಡುಕಲು ಸಾಧ್ಯವಿಲ್ಲ, ಆದರೆ ಪ್ರತಿಭಟನೆಯ ವಿಮರ್ಶೆ, ವಿಶ್ಲೇಷಣೆ, ವಿಚಾರ ಮಾಡಬಹುದು.

ದಲಿತ ಕಾವ್ಯ ಪ್ರತಿಭಟನೆಗಾಗಿಯೇ ಅವತರಿಸಿದಂಥ ಕಾವ್ಯ. ಇತರ ಸಾಹಿತ್ಯದಲ್ಲಿ ಕಲ್ಪನೆ, ಭ್ರಮೆ, ವರ್ಣನೆ, ಸೌಮ್ಯತೆ ಇತ್ಯಾದಿ ಅಂಶಗಳಿದ್ದರೆ, ದಲಿತ ಕಾವ್ಯ 'ಪ್ರತಿಭಟನೆ'ಯ ಹೊರತು ಬೇರೆನನ್ನು ವ್ಯಕ್ತಪಡಿಸಲಿಲ್ಲ. ತನ್ನವರು ಮೌಢ್ಯತೆಯಿಂದ ವ್ಯವಸ್ಥೆಯಲ್ಲಿ ಅನುಭವಿಸಿದ ಯಾತನೆಯನ್ನು ಕಾವ್ಯದಲ್ಲಿ ಬಿತ್ತರಿಸಿ ಎಚ್ಚರಗೊಳಿಸುವ, ಜಾಗೃತಿ ಮೂಡಿಸುವ ಕಡೆ ಗಮನ ಹರಿಸಿದ ತನ್ನವರ ಶೋಷಣಾ ಬದುಕನ್ನು ಇತರರಲ್ಲಿ ಹೇಳಿ ಪ್ರಯೋಜನವೇನು? ಹೇಳಿದರೆ ಬರೀ ಕೇಳುವ ಮಂದಿ ಎಂದು, ನಡೆದ ವಿಚಾರವನ್ನೇ ತನ್ನವರಿಗೆ ಮುಟ್ಟಿಸಿ ತನ್ನವರನ್ನೇ ಜಾಗೃತರಾಗಿಸುವ ಪ್ರಯತ್ನದಲ್ಲಿ ತೊಡಗಿದರು. ಯಜಮಾನಸಂಸ್ಕೃತಿ ಮೈಲಿಗೆ ಎಂದು ತಿರಸ್ಕರಿಸಿದ್ದನ್ನು ಅಕ್ಷರ ರೂಪದಲ್ಲಿ ದಾಖಲಿಸಿದ್ದು ಪ್ರತಿಭಟನೆಯಾಯಿತು. ಇಲ್ಲಿ ಅಬ್ಬರ, ಬೊಬ್ಬೆ, ಗಡಿಬಿಡಿ ಜತೆಗೆ ಕವಿಯ ಪ್ರೌಢಿಮೆ, ಕಲಾತ್ಮಕತೆಯನ್ನು ಕಾಣಬಹುದು.

ದಲಿತ ಕಾವ್ಯಗಳ ವಸ್ತುವೆಂದರೆ ತನ್ನ ಸಮಾಜದಲ್ಲಿ ನಡೆದ ಶೋಷಣೆಯನ್ನು ಇತರರಿಗೆ ತಿಳಿಯಪಡಿಸುವುದು. ಇಲ್ಲಿ ಕವಿ ತನ್ನ ಸ್ವಂತ ಅನುಭವ ಹಾಗೂ ತನ್ನ ಸಮುದಾಯದ ನಡುವೆ ನಿಂತಿರುತ್ತಾನೆ. ಕವಿ ಪ್ರತಿಭಟನೆಯನ್ನು ತನ್ನವರ ಪರವಾಗಿ, ಶೋಷಿತ ವರ್ಗದ ವಿರುದ್ಧ ಇರುವುದರಿಂದ ಈತನ ಕಾವ್ಯಗಳಲ್ಲಿ ಸಹಜವಾಗಿ ನಾವು ಸಿಟ್ಟು, ಆಕ್ರೋಶವನ್ನು ಕಾಣಬಹುದು. ಒಟ್ಟು ದಲಿತ ಕವಿಯು 'ಬರೆಯುವವನೀಗ ಇನ್ನೊಬ್ಬರಿಗೆ ಅಂದರೆ ತಾನು ಯಾರಿಗೆ ದನಿಯೋ ಅವರಲ್ಲದ ಇನ್ನೊಬ್ಬರಿಗೆ, ತನ್ನ ಕೋಪ, ಕಟಕಿ, ದಿಕ್ಕಾರ, ಆಸೆ, ಕನಸುಗಳನ್ನು ರವಾನಿಸಲು, ತಲುಪಿಸಲು ನಿರತನಾಗಿ ಬಿಡುತ್ತಾನೆ. ಈ ಹೇಳಿಕೆ ದಲಿತ ಕವಿಯ ಗುಣವನ್ನು ತಿಳಿಸುತ್ತದೆ. ತನ್ನವರ ಸ್ಥಿತಿಗೆ ಬೇಸರಗೊಂಡು, ವ್ಯವಸ್ಥೆಯನ್ನು ತರಾಟೆ ತೆಗೆದುಕೊಳ್ಳುವವನಾಗಿ ಕಾವ್ಯ ರಚಿಸುತ್ತಾನೆ.

ದಲಿತ ಕಾವ್ಯದ ತುಂಬೆಲ್ಲಾ, ಕಾವ್ಯದ ಅಂಗ ಅಂಗಗಳಲ್ಲಿ ಪ್ರತಿಭಟನೆಯೇ ಹುದುಗಿದೆ. 'ದಲಿತ ಕಾವ್ಯ ಇರುವುದೇ ಪ್ರತಿಭಟನೆ'ಗಾಗಿ ಎಂಬ ಸೂತ್ರವನ್ನು ಇದು ಅನುಸರಿಸುತ್ತಿದೆ. ದಲಿತರ ತಾತ್ವಿಕ ಹಿನ್ನೆಲೆಯ ಪ್ರತಿಭಟನೆ ಅಡಕವಾಗಿರುವುದು ತಮ್ಮ ಅಸ್ಥಿತ್ವದ ಮೇಲೆ. ನಮಗೆ ಒಂದು ನೆಲೆ ಇದೆ, ಇದಕ್ಕೊಂದು ನಿಲ್ದಾಣ, ತಂಗುದಾಣದ ಅವಶ್ಯಕತೆಗಾಗಿ ದಲಿತ ಕವಿಗಳು ಕಾವ್ಯದ ಮೂಲಕ ಪ್ರತಿಭಟನೆ ಆರಂಭಿಸಿದರು.

ಉದಾ: ಚನ್ನಣ್ಣ ವಾಲಿಕಾರ ಎಂಬ ಸಾಹಿತಿಗಳು 'ಧರ್ಮಸ್ಥಳದಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದಲಿತ ಸಾಹಿತ್ಯಕ್ಕೆ ಪ್ರತ್ಯೇಕವಾದ ಗೋಷ್ಠಿಯ ಅವಶ್ಯಕತೆ ಇದೆ ಎಂದಾಗ ಅದು ನಿರಾಕರಣೆಯಾಯಿತು. ಮುಂದೆ ಈ ನಿರಾಕರಣೆಯೇ ದಲಿತ ಕಾವ್ಯಕ್ಕೆ ಅಥವಾ ದಲಿತ ಸಾಹಿತ್ಯಕ್ಕೆ ಒಂದು ನೆಲೆ ಪಡೆಯಲು ಸಹಕಾರಿಯಾಯಿತು'. ಇಂಥ ಕೆಲವು ಘಟನೆಗಳಿಂದ ಕುಗ್ಗದೇ, ಮುನ್ನುಗ್ಗಿದ ಸಂದರ್ಭದಲ್ಲಿ ಮಾತ್ರ ಸಾಹಿತ್ಯಕ್ಕೆ ಒಂದು ನೆಲೆ ಸಾಧ್ಯ ಎಂದು ತೋರಿಸಿದರು. ಈ ಬೆಳವಣಿಗೆ ದಲಿತ ಸಾಹಿತ್ಯಕ್ಕೆ ಸಿಕ್ಕ ಗೆಲುವಾಗಿರಬಹುದು. ಆದರೆ ದಲಿತ ಸಾಹಿತ್ಯ ಇಟ್ಟ ಎಲ್ಲಾ ಪ್ರತಿಭಟನಾ ಹೆಜ್ಜೆಗಳು ಯಶಸ್ವಿಯ ದಾರಿ ಹಿಡಿಯಲಿಲ್ಲ.

ದಲಿತರು ಒಗ್ಗೂಡಿ, ಒತ್ತಡದ ಗುಂಪುಗಳಾದರೂ, ಹಿಂದಿನಿಂದ ನಮ್ಮ ಪ್ರಜಾಪ್ರಭುತ್ವದ ಕ್ರಾಂತಿಗೆ ಬೇಕಾದ ಚಾರಿತ್ರಿಕ ಹಿನ್ನೆಲೆ ಸೃಷ್ಟಿಸಬೇಕಾದ ಹೊಣೆಗಾರಿಕೆಯಿಂದ ನುಣುಚಿಕೊಂಡ ಅಹಿತಕರ ಕಾರಣಗಳಿಂದ ಸಂಪೂರ್ಣವಾಗಿ ಸೋತಿದೆ. ಇಂಥ ಅನೇಕ ಉದಾಹರಣೆಗಳ ಮೂಲಕ ದಲಿತ ಕಾವ್ಯ ಕಂಡ ಗೆಲುವು-ಸೋಲಿನ ಒಟ್ಟು ಫಲಿತಗಳು ಈ ಸಂಶೋಧನೆಯಲ್ಲಿ ಗೋಚರಿಸುತ್ತವೆ.

1

ದಲಿತ ಸಮುದಾಯದವರು ಸ್ವಾತಂತ್ರ್ಯದ ಪೂರ್ವದಲ್ಲಿ ಅತ್ಯಂತ ಹೀನ ಸ್ಥಿತಿಯಲ್ಲಿದ್ದರು. ಪೂರ್ಣ ಪ್ರಮಾಣದ ಅನಕ್ಷರಸ್ಥರಾಗಿದ್ದ ಇವರು ವ್ಯವಸ್ಥೆ ಜಾರಿಗೆ ತಂದಿದ್ದ ಗುಲಾಮಗಿರಿ ಪದ್ಧತಿಯನ್ನು ಮಾನಸಿಕವಾಗಿ ಒಪ್ಪಿಕೊಂಡು, ದುಡಿದು ಕಂಗಾಲಾಗಿದ್ದರು.ಒಂದು ಹಂತದಲ್ಲಿ ತಮ್ಮ ಬದುಕಿನ ಬಗೆಗೆ ತಿಳುವಳಿಕೆಯನ್ನು ಕಳೆದುಕೊಂಡರು. ಆದರೆ ಸ್ವಾತಂತ್ರ್ಯದ ನಂತರ ಬಂದ ದಲಿತ ತಲೆಮಾರಿನವರು ವ್ಯವಸ್ಥೆಯ ಜೊತೆ ಹೊಂದಿಕೊಂಡು ಬಾಳುವೆ ಮಾಡುವುದನ್ನು ರೂಢಿಸಿಕೊಂಡಿದ್ದು ಒಂದು ರೀತಿಯ ಸಮಾಧಾನದ ವಿಷಯ. ಅಕ್ಷರ ಕಲಿತ ಸಮುದಾಯದವರು ವ್ಯವಸ್ಥೆಯ ಅನ್ಯಾಯ, ಅಸಮಾನತೆಗಳಲ್ಲಿ ಸಿಲುಕಿದರೂ, ಪ್ರತಿಭಟಿಸುವ ಗೋಜಿಗೆ ಹೋಗದೆ, ಅದನ್ನೇ ಒಪ್ಪಿಕೊಂಡು ಬದುಕಿದವರೂ ಉಂಟು. ಮುಂದೆ ಆಧುನಿಕತೆಯ ವರದಿಂದ ಇವರಲ್ಲಿ ಅಕ್ಷರಸ್ಥರ ಸಂಖ್ಯೆ ಹೆಚ್ಚಿ, ವ್ಯವಸ್ಥೆಯ ಬಗ್ಗೆ ಅರಿವು ಮೂಡಿ, ಪ್ರತಿಭಟಿಸುವ ಪ್ರಜ್ಞೆ ಬೆಳೆಯಿತು.

ಸಾಹಿತ್ಯದ ಮೂಲಕ ಸೈದ್ಧಾಂತಿಕ ನಿಲುವುಗಳನ್ನು, ಸಮಾನತೆಯನ್ನು ಬಯಸಿ ತನ್ನವರ ಬದುಕಿಗೆ ಸ್ಪಂದಿಸತೊಡಗಿದರು.ದಲಿತರ ಮೇಲೆ ನಿರಂತರ ಆಕ್ರಮಣ ಮಾಡುತ್ತಿದ್ದ ವ್ಯವಸ್ಥೆಯ ಪರಂಪರಾಗತ ಮೌಲ್ಯವನ್ನು ಪ್ರಶ್ನಿಸಿ, ವಿಡಂಬಿಸಿ, ಪ್ರತಿಭಟಿಸಿದ್ದು ಇಲ್ಲಿನ ಪ್ರಮುಖ ಕಾರ್ಯಗಳಲ್ಲಿ ಒಂದು. ವ್ಯವಸ್ಥೆಯನ್ನು ಪ್ರಶ್ನಿಸಲು ದಲಿತ ಕಾವ್ಯಗಳು ಬಳಸಿಕೊಂಡ ಅಸ್ತ್ರಗಳೆಂದರೆ ಕೋಪ, ರೊಚ್ಚು, ಸಿಟ್ಟು, ಅಬ್ಬರ, ಆವೇಶ. ಇವುಗಳ ಅನಿವಾರ್ಯತೆಯಿಂದಾಗಿ ದಲಿತ ಕಾವ್ಯಗಳು ಮನೆಮಾತಾಗಿ ಒಂದು ಹಂತದ ಗೆಲುವು ಪಡೆಯಿತು. ಒಟ್ಟಿನಲಿ ಕನ್ನಡ ಸಾಹಿತ್ಯ ಅಥವಾ ಕಾವ್ಯ ಸಂಪ್ರದಾಯಕ್ಕೆ ದಲಿತ ಕಾವ್ಯ ಹೊಸ ಚೈತನ್ಯವನ್ನು ನೀಡಿತು. ದಲಿತ ಕಾವ್ಯದ ಯಶಸ್ಸಿಗೆ "ಸಾಮಾಜಿಕ ಶಕ್ತಿಗಳ, ಪ್ರವೃತ್ತಿಗಳ, ಅಭಿವ್ಯಕ್ತಿ ಕಾವ್ಯ ಅದರ ಜೊತೆಗೆ ವರ್ತಮಾನದಲ್ಲಿಲ್ಲದ ಇನ್ನೊಂದು ಸಮಾಜದ ಆವಾಹನೆ, ಕಾವ್ಯ ಬರೀ ಲೋಲುಪತೆಯಾಗದೆ ನವ ಸಮಾಜಕ್ಕೆ ಆವಾಹಿಸಬೇಕಾದ ಸಾಮಾಜಿಕ ವೈರುಧ್ಯಗಳಿಗೆ ತೀವ್ರವಾಗಿ ಸ್ಪಂದಿಸಬೇಕಾಗುತ್ತದೆ." (ಕನ್ನಡ ದಲಿತ ಸಾಹಿತ್ಯದ ನೆಲೆ, ತಿಪ್ಪೇಸ್ವಾಮಿ ಜಿ.ಆರ್. (ಸಂ.), 2001, ಪುಟ 25) ಬ್ಲೇಕ್ ಎಂಬುವರು ದಲಿತ ಕಾವ್ಯದ ಲಕ್ಷಣವನ್ನು ವ್ಯಕ್ತಪಡಿಸಿ, ಕಾವ್ಯದ ಘನತೆಯನ್ನು, ಗೆಲುವಿನ ಓಟದ ವೇಗವನ್ನು ಇಮ್ಮಡಿಗೊಳಿಸಿದ್ದಾರೆ.

ಮೇಲಿನ ಹೇಳಿಕೆಯ ಪ್ರಕಾರ ವ್ಯವಸ್ಥೆಯಿಂದಲೇ ದೂರ ಉಳಿದ ಸಮುದಾಯ ಒಂದು ಸಾಮಾಜಿಕ ಚಟುವಟಿಕೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ತೀವ್ರತರವಾದ ಪ್ರತಿಭಟನೆಯನ್ನು ಕಾವ್ಯದ ಮುಖೇನ ವ್ಯಕ್ತಪಡಿಸಿ ಇಂದು ಸಮಾಜಮುಖಿಯಾಗಿ ಬೆಳೆದಿರುವುದು ಸಮುದಾಯಕ್ಕೆ ಸಂದ ಗೆಲುವಾಗಿದೆ.ದಲಿತ ಕವಿಗಳು ತಮ್ಮ ಸಿಟ್ಟು, ಆಕ್ರೋಶಗಳನ್ನು ಕಾವ್ಯದಲ್ಲಿ ತಂದು ಜಮೀನ್ದಾರಿ ಪದ್ಧತಿಯಿಂದ ಉಂಟಾದ ಆರ್ಥಿಕ ಅನ್ಯಾಯವನ್ನು ಬಂಡೇಳುವ ಮೂಲಕ ಪ್ರತಿಭಟಿಸಿ, ಜಾಗೃತರಾದದ್ದು, ಸಮಾಜದಲ್ಲಿ ಚಾಲ್ತಿಯಲ್ಲಿದ್ದ ನಂಬಿಕೆಯನ್ನು ಸುಳ್ಳುಮಾಡಿ, ಹೊಸ ಸಂಸ್ಕೃತಿಯನ್ನು ಸೃಷ್ಟಿಸಿದ್ದು ತನ್ನವರನ್ನು ಜಾಗೃತಗೊಳಿಸುವ ಜತೆಗೆ ಸಹೃದಯರ ಮನಸ್ಸನ್ನು ತಲ್ಲಣಗೊಳಿಸುವ ಚಿಂತನೆ ಮತ್ತು ಜಾಗೃತಿಗೊಳಿಸಲು, ತಮ್ಮ ಭಾವನೆಗಳನ್ನು ಹೇಳಲು ಗ್ರಾಮೀಣ ಪರಿಸರದ ಭಾಷೆಯನ್ನು ಬಳಸಿಕೊಂಡಿದ್ದು, ಇದರಿಂದ ದಲಿತೇತರರೂ ಈ ಕಾವ್ಯದ ಕಡೆ ಗಮನ ಹರಿಸಿದ್ದು ವಿಶೇಷವಾಗಿದೆ.

ದಲಿತ ಕಾವ್ಯಕ್ಕೆ ಅಥವಾ ಸಾಹಿತ್ಯಕ್ಕೆ ಪ್ರೇರಣೆ ಒದಗಿಸಿದವರು ಆಫ್ರಿಕಾ ಮತ್ತು ಅಮೇರಿಕಾದ ಬರಹಗಾರರು, ಅಲ್ಲಿನ ವರ್ಣವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಎದ್ದಿರುವುದು ನಮ್ಮ ದಲಿತ ಸಾಹಿತ್ಯದ ಮೇಲೂ ಪ್ರಭಾವಬೀರಿತು. ಎಂದೂ ಕಾಣದ ಅಪರಿಚಿತ ಅನುಭವವು ದಲಿತ ಸಾಹಿತ್ಯದ ಮುಖೇನ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿ ಇಡೀ ಸಾಹಿತ್ಯದ ಮಾರ್ಗವನ್ನು 'ಅಸ್ಪೃಶ್ಯ' ಅಥವಾ ದಲಿತ ಸಮುದಾಯದ ಕಡೆ ಏಕಾಏಕಿ ತಿರುಗಿಸಿದ ಕೀರ್ತಿ ಈ ಸಾಹಿತ್ಯಕ್ಕಿದೆ. ದಲಿತ ಸಾಹಿತ್ಯಕ್ಕಿಂತ ಪೂರ್ವದಲ್ಲಿ ಸಾಹಿತಿಗಳು ತಮಗೆ ಮುದ ನೀಡುವ ಕಾವ್ಯ, ಕಥೆ, ಕಾದಂಬರಿಗಳನ್ನು ಬರೆದರೆ, ದಲಿತ ಕವಿಗಳು ಹಾಗೂ ಲೇಖಕರು ತಮಗೆ ವ್ಯತಿರಿಕ್ತವಾಗಿ ಶೋಷಣೆ ನೀಡುತ್ತಿದ್ದ ಉಳ್ಳವರ ಸಂಸ್ಕೃತಿಯ ಧೋರಣೆಗಳನ್ನು ತಿರಸ್ಕರಿಸುವಲ್ಲಿ ಯಶಸ್ವಿಯಾಯಿತು. ಉದಾಹರಣೆಗೆ 'ಜೀತ ಪದ್ಧತಿ'. ಈ ಜೀತಪದ್ಧತಿಯು ದಲಿತ ಸಮುದಾಯಕ್ಕೆ ಮಾತ್ರ ಸೀಮಿತವಾಗಿದ್ದ ಕಾಲವನ್ನು ಗಮನದಲ್ಲಿರಿಸಿಕೊಂಡು ಇದರಿಂದ ಶಾಶ್ವತ ಪರಿಹಾರ ಪಡೆಯುವ ಸಲುವಾಗಿ ವ್ಯವಸ್ಥೆಯ ವಿರುದ್ಧ ಕಾವ್ಯದ ಮೂಲಕ ಬಂಡೆದ್ದರು.

ಇದರಿಂದ ಸಂಪೂರ್ಣ ಬದಲಾವಣೆ ತರಲು ಸಫಲರಾಗದಿದ್ದರು, ತನ್ನವರಿಗೆ ಹಾಗೂ ವ್ಯವಸ್ಥೆಗೆ ಜಾಗೃತಿ, ಅರಿವು, ಎಚ್ಚರಿಕೆ ಮೂಡಿಸುವಲ್ಲಿ ಯಶಸ್ವಿಯಾಯಿತು. ದಲಿತ ಕವಿಗಳು ಕೂಡ ತಮ್ಮ ಕಾವ್ಯದಲ್ಲಿ ಸಾಮಾಜಿಕ ನ್ಯಾಯವು ಅವಿಭಾಜ್ಯ ಅಂಗದಂತೆ ತರ್ಕಬದ್ಧ ನೆಲೆಯಲ್ಲಿ ಯೋಚಿಸಿದರು.

ದಲಿತ ಕಾವ್ಯಗಳು ತಾನು ಇರುವ ಸ್ವರೂಪದಲ್ಲೇ ಪ್ರತಿಭಟನೆಯಾಗಿ ಮೂಡಿ ಬಂದಿವೆ. ದಲಿತೇತರ ಲೇಖಕರು, ಕವಿಗಳು ಇತಿಹಾಸದ ಘಟನೆಗಳ ಬಗ್ಗೆ, ರಾಮಾಯಣ, ಮಹಾಭಾರತ ಗ್ರಂಥಗಳ ಬಗ್ಗೆ ಓದುಗರಲ್ಲಿ ಮನರಂಜನೆ ನೀಡುವ ಉದ್ದೇಶದಿಂದ ಕಾವ್ಯ-ಕವನ ರಚಿಸಿದರೆ, ದಲಿತ ಸಾಹಿತಿಗಳು ಇದಕ್ಕೆ ವಿರುದ್ಧವಾಗಿ ನಿಂತು, ವಾಸ್ತವದ ಚಿತ್ರವನ್ನು ಕಟ್ಟಿಕೊಟ್ಟು, ಆ ವಾಸ್ತವ ಸ್ಥಿತಿಯಲ್ಲೇ ಪ್ರತಿಭಟಿಸುವಲ್ಲಿ ಪ್ರವೃತ್ತರಾಗಿದ್ದರು. ಹಿಂದಿನ ಕಾಲದಿಂದಲೂ ಶ್ರಮ ಪಡದ ವರ್ಗವೊಂದು ಮೌಢ್ಯತೆ, ಜಾತಿ ಹೆಸರಿನಲ್ಲಿ ಅಸ್ಪೃಶ್ಯರಿಗೆ ನೀಡಿದ ಶೋಷಣೆಯೇ ದಲಿತ

ಕಾವ್ಯದ ವಸ್ತುವಾಗಿ, ಅಂದು ನೀಡಿದ ದೈಹಿಕ, ಮಾನಸಿಕ ಶೋಷಣೆಯನ್ನು, ಅಕ್ಷರದಿಂದ ದೂರ ಇಟ್ಟಿದನ್ನು ಕಾವ್ಯದಲ್ಲಿ ಪ್ರತಿಭಟಿಸಿದ್ದಾರೆ. ಮೇಲ್ವರ್ಗವು ದಲಿತ ಸಮುದಾಯವನ್ನು ಸೌಲಭ್ಯ ವಂಚಿತರಾಗುವಂತೆ ಮಾಡಲು 'ದಲಿತರು ಬುದ್ಧಿ ಹೀನರು' ಇವರಿಂದ ರಾಷ್ಟ್ರಕ್ಕೆ ಧಕ್ಕೆ ಬರುತ್ತದೆ. ಎಂಬ ನೆಪ ಹೇಳಿ ಪ್ರತಿಯೊಂದು ಕ್ಷೇತ್ರದಲ್ಲೂ ಹೀನರೆಂದು ವಿಭಾಗಿಸಿದರ ವಿರುದ್ಧ ದಲಿತ ಕಾವ್ಯ ಸಿಡಿದೆದ್ದು 'ಅಸ್ಪೃಶ್ಯತೆ' ಎಂಬುದು ದೇಶಕ್ಕೆ ಅಂಟಿದ ದೊಡ್ಡ ಪೀಡೆ ಎಂದು ನಿರ್ಧರಿಸಿ ಅಸ್ಪೃಶ್ಯತೆಯನ್ನು ನಿರ್ಮೂಲನೆ ಮಾಡುವಲ್ಲಿ ಕೊಂಚ ಯಶಸ್ಸು ಕಂಡಿದೆ.

ದೇಶದ ಅಭಿವೃದ್ಧಿಗೆ ಸಾಕ್ಷರತೆಯೂ ಒಂದು ಅಸ್ತ್ರ. ದಲಿತ ಕವಿಗಳು ತನ್ನ ಸಮುದಾಯದವರಲ್ಲಿ ಅಕ್ಷರ ಕ್ರಾಂತಿ ಮೂಡಿಸಿ, ಅಕ್ಷರ ಕಲಿಕೆಯಿಂದ ದೂರ ಉಳಿದವರನ್ನು ಸಾಧ್ಯವಾದ ಮಟ್ಟಕ್ಕೆ ಮೇಲೆತ್ತುವಲ್ಲಿ ದಲಿತ ಕಾವ್ಯಗಳ ಮೂಲಕ ರಚನಾತ್ಮಕವಾದ ಕಾರ್ಯಗಳನ್ನು ಮಾಡಿದ್ದಾರೆ. ದಲಿತ ಕಾವ್ಯವು ಪ್ರತಿಭಟನಾ ನೆಲೆಯಲ್ಲಿ ವೈದಿಕ ಸಂಪ್ರದಾಯದ ಮೈಲಿಗೆ, ಮಡಿ ಎಂಬ ಆಚರಣೆಗಳು ಹಾಗೂ ತನ್ನವರ ಸಮುದಾಯದ ಮೇಲೆ ನಿರಂತರವಾದ ಲೈಂಗಿಕ ಶೋಷಣೆ, ದಹನ ಇವೆಲ್ಲವನ್ನೂ ನಿರ್ಮೂಲನೆ ಮಾಡುವ ಉದ್ದೇಶ ಹೊಂದಿದೆ.

ದಲಿತ ಕಾವ್ಯ ತಾನು ಇರುವ ಸ್ಥಿತಿಯಲ್ಲಿಯೇ ಪ್ರತಿಭಟನೆಯಾಗಿ ಮೂಡಿರುವುದು ಒಂದು ವಿಶೇಷ. ತನಗೆ ಶೋಷಣೆಯಾಗಿದೆ ಎಂದು, ಮಾಡುವ ಕೆಲಸ ಬಿಟ್ಟು ಪ್ರತ್ಯೇಕವಾಗಿ ನಿಂತು ಪ್ರತಿಭಟನೆ ಮಾಡುವ ಬದಲು, ಕೆಲಸ ಮಾಡುತ್ತಲೇ ಶೋಷಣೆ ವಿರುದ್ಧ ಪ್ರತಿಭಟಿಸಿ, ಅಲ್ಪ ಮಟ್ಟದ ಗೆಲುವು ಪಡೆದಿರುತ್ತಾರೆ. ತನ್ನವರು ನೊಂದ ನೋವನ್ನು ಹಾಗೂ ತಾವು ಪಡೆದ ನೋವನ್ನು ತಾವೇ ಹೊರ ಹಾಕಿ ಇತರರ ಅನುಕಂಪದ ಅಲೆಗೆ ಸಿಕ್ಕಿದರೂ ತಮ್ಮ ನೋವನ್ನು ತಾವೇ ಸರಿಪಡಿಸಿಕೊಂಡಿರುತ್ತಾರೆ. ದಲಿತ ಕಾವ್ಯವು ಹಲವು ಮಾರ್ಗಗಳಲ್ಲಿ ಹುಟ್ಟಿಕೊಂಡಿದ್ದರೂ ತನ್ನ ಸಮುದಾಯದವರ ಅಭಿವೃದ್ಧಿಯೇ ಕೊನೆಯ ಮಾರ್ಗವೆಂದು ತಿಳಿದಿದ್ದರಿಂದ ಎಲ್ಲರ ಗುರಿಯೂ ಒಂದೇ ಆಗಿರುತ್ತದೆ. ದಲಿತ ಸಾಹಿತ್ಯವು "ತರ್ಕದ ಹಿನ್ನೆಲೆಯಲ್ಲಿ ಪ್ರತಿಭಟನೆಯ ಎಳೆಗಳನ್ನು ಬಿಡಿಸುತ್ತಿದ್ದ ಕನ್ನಡ ಸಾಹಿತ್ಯಕ್ಕೆ ಪ್ರತಿಭಟನೆ ಒಂದು ಮೌಲ್ಯವಾಗುವಂತೆ ಕೆಲಸ ಮಾಡಿತು. ಅಸಲಿ ಅನುಭವಗಳಿಂದ ಕೂಡಿದ ದಲಿತ ಬದುಕು ಭಾರತೀಯ ಸಾಹಿತ್ಯಕ್ಕೆ ಒಂದು ವಿಶಿಷ್ಟ ಕೊಡುಗೆ ಎನಿಸಿತು." (ತಿಪ್ಪೇಸ್ವಾಮಿ ಜಿ.ಆರ್., ಕನ್ನಡ ದಲಿತ ಸ್ಯಾಹಿತ್ಯದ ನೆಲೆ, 2001, ಪುಟ 30)

ಇಲ್ಲಿ ಲೇಖಕರು ದಲಿತ ಸಾಹಿತ್ಯವು ಕಂಡ ಯಶಸ್ಸಿನ ಬಗ್ಗೆ ಇಡಿಯಾಗಿ ಹೇಳಿದ್ದಾರೆ. ದಲಿತ ಕಾವ್ಯದ ಯಶಸ್ಸಿನ ಜೀವಾಳದ ಮೂಲವೇ ಅಸಲಿ ಅನುಭವ.

ಒಂದು ಕಾಲ ಘಟ್ಟಕ್ಕೆ ದಲಿತರೆಂದರೆ 'ಜೀತ'ಕ್ಕೆ ಮಾತ್ರ ಮೀಸಲು ಎಂದಿದ್ದದ್ದು, ದಲಿತ ಕಾವ್ಯದ ಪ್ರಭಾವದಿಂದ ದಲಿತ ಸಮುದಾಯು 'ಜೀತ'ದಿಂದ ಕೊಂಚ ನಿರಾಳವಾಯಿತು. ಇಲ್ಲಿ ಎಲ್ಲಾ ದಲಿತರು 'ಜೀತ'ಕ್ಕೆ ಒಳಗಾದವರಲ್ಲ, ಆದರೆ 'ಜೀತ'ಕ್ಕೆ ಇದ್ದವರೆಲ್ಲ ದಲಿತರೆ. ಇಂಥ ಅನಿಷ್ಟ ಪದ್ಧತಿಯಿಂದ ದೂರ ಉಳಿಯಲು ದಲಿತ ಪ್ರತಿಭಟನಾಕಾರರು ದಲಿತ ಕಾವ್ಯಗಳನ್ನೇ ಅಸ್ತ್ರವಾಗಿ ಬಳಸಿಕೊಂಡು, ಇಂದಿನ ಮಟ್ಟಕ್ಕೆ 'ಜೀತ' ನಿರ್ಮೂಲನೆಯಲ್ಲಿ ಜಯ ಪಡೆದಿದ್ದಾರೆ, ಆದರೂ ಒಂದೋ-ಎರಡೋ ಘಟನೆಗಳು ನಿಧಾನವಾಗಿ ಬೆಳಕಿಗೆ ಬರುತ್ತಿರುವುದುಂಟು.

ದಲಿತ ಕಾವ್ಯ ಅಸಮಾನತೆಯ ವಿರುದ್ಧ ಹೋರಾಡಿರುವ ಫಲಿತವಾಗಿ, ಊರ ಒಳಭಾಗದಲ್ಲಿ ದಲಿತರು ಹೋರಾಡುವಂತಾಯಿತು. ಒಂದು ಕಾಲದಲ್ಲಿ ದಲಿತರು ಕೆರೆ, ಬಾವಿ ನೀರನ್ನು ಪಡೆಯಬೇಕಾದರೂ ವ್ಯವಸ್ಥೆಯ ಸಹಾಯ ಪಡೆದುಕೊಳ್ಳಬೇಕಾದ ಅನಿವಾರ್ಯತೆ ಇತ್ತು. ಅಪ್ಪಿತಪ್ಪಿಯೂ ದಲಿತರು ವ್ಯವಸ್ಥೆಯ ಅನುಮತಿ ಇಲ್ಲದೇ ನೀರನ್ನು ಮುಟ್ಟಿದರೆ ಅದು ಕಾನೂನು ಬಾಹಿರ ಅಪರಾಧವೇ ಆಗುತ್ತಿತ್ತು. ಇಂಥ ಪರಿಸ್ಥಿತಿಯನ್ನು ಇಂದಿನ ಮಟ್ಟಕ್ಕೆ ಸಂಪೂರ್ಣವಾಗಿ ಬದಲಾಯಿಸುವಲ್ಲಿ ದಲಿತ ಕಾವ್ಯಗಳು ಯಶಸ್ಸು ಕಂಡಿವೆ. ದಲಿತ ಕಾವ್ಯವನ್ನು ಆಧಾರವಾಗಿ ಪಡೆದ ಪ್ರತಿಭಟನಾಕಾರರು ಕ್ರಾಂತಿ ಗೀತೆಗಳನ್ನು ಅಸಮಾನತೆ ತೋರಿದ ಜಾಗದಲ್ಲಿ ಹಾಡುವ ಮೂಲಕ ಪ್ರತಿಭಟಿಸಿ ಜಾತಿ 'ವ್ಯವಸ್ಥೆ'ಯಲ್ಲಿ ಸುಧಾರಣೆ ತಂದಿದ್ದಾರೆ.

ಮೈಸೂರಿನಲ್ಲಿರುವ ಸರಸ್ವತಿಪುರಂ ಪ್ರದೇಶದಲ್ಲಿ ಒಂದು ಕಾಲಘಟ್ಟಕ್ಕೆ ದಲಿತರು ಕಾಲಿಟ್ಟರೆ ಕಲ್ಲಿನಿಂದ ಹೊಡೆಯುತ್ತಿದ್ದ ನೈಜ ಘಟನೆಯಿಂದ ದಲಿತರು ಜರ್ಜರಿತರಾಗಿದ್ದರೂ, ಇಂದಿನ ದಿನಗಳಲ್ಲಿ ಎಲ್ಲರಿಗೂ ಮುಕ್ತ ಅವಕಾಶ ಸಿಕ್ಕಿರುವುದರಿಂದ ಆ ಬದಲಾವಣೆಯಲ್ಲಿ ದಲಿತ ಕಾವ್ಯಗಳು ಸಕ್ರಿಯವಾಗಿ ಕೆಲಸ ಮಾಡಿವೆ ಎನ್ನಬಹುದು.

ದಲಿತ ಪರ ಸಂಘಟನೆಗಳಿಂದ ದಲಿತ ಕಾವ್ಯಗಳು ಬೆನ್ನೆಲುಬಾಗಿ ನಿಂತು, ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯ ಧ್ವನಿಯಾಗಿ ಹೊರಬಂದು,

ಇಡೀ ಪ್ರಜಾಪ್ರಭುತ್ವಕ್ಕೆ ಚುಚ್ಚುಮದ್ದಿನ ಕಾವ್ಯವಾಯಿತು. ದಲಿತ ಕಾವ್ಯವು ಕುರುಡು ಯಜಮಾನ ಸಂಸ್ಕೃತಿಯ ವಿರುದ್ಧ ಬಂಡೆದ್ದು, ಜವಾಬ್ದಾರಿ ಹೊಂದಿ ಜಾತಿ-ಜಾತಿಗಳ ನಡುವೆ ಇದ್ದ ಅಸಮಾನತೆಯ ಕೋಟೆಯನ್ನು ಬೀಳಿಸಿ, ಅಮಾನವೀಯ ಬದುಕನ್ನು ಉತ್ತಮಗೊಳಿಸುವ ಧೋರಣೆ ಹೊಂದಿದೆ. ದಲಿತ ಕಾವ್ಯ ಬರಿ ಕಾವ್ಯವಾಗದೇ ಒಂದು ಶಕ್ತಿಯಾಗಿ, ಕೊರಳಿಲ್ಲದವರಿಗೆ ಕೊರಳಾಗಿ, ಮೂಕ ಸಮೂಹಕ್ಕೆ ಮಾತಾಗಿ ಹೊರ ಬಂದಿದ್ದು ಅಶಾಶ್ವತ ಮೌಲ್ಯಗಳ ಸ್ಥಳದಲ್ಲಿ ಮೌಲ್ಯಗಳ ಉಳಿವಿಗಾಗಿ ದುಡಿದು ಸಮುದಾಯಕ್ಕೆ ಸಹಾಯಕವಾಗಿ ಇಂದು ನಿಂತಿದೆ. ದಲಿತ ಕಾವ್ಯಗಳಲ್ಲಿ ವೈಯಕ್ತಿಕ ಕೋಪಕ್ಕಿಂತ ಸಾರ್ವಜನಿಕ ಸ್ವರೂಪದ ಕೋಪವೇ ಪ್ರಧಾನವಾದಾಗ ಗೆದ್ದಿದೆ.

2

ದಲಿತ ಸಾಹಿತ್ಯವು ಒಟ್ಟಾರೆಯಾಗಿ ಸ್ವಾಭಿಮಾನ, ಪ್ರತಿರೋಧ, ಸಹಾನುಭೂತಿ, ಸಹನೆ, ಸಮಗ್ರ ಜೀವನ, ದೃಷ್ಟಿಕೋನ ಎಂಬಿತ್ಯಾದಿ ಅಂಶಗಳನ್ನು ವ್ಯಕ್ತಪಡಿಸಿದರೂ, ಇದು ಎಲ್ಲಾ ಕಡೆಯಲ್ಲೂ ಯಶಸ್ವಿ ಕಂಡಿಲ್ಲ. ಪ್ರತಿರೋಧ ಹಾಗೂ ಒಣ ಸ್ವಾಭಿಮಾನದಿಂದ ಪರಿಪೂರ್ಣ ಬದಲಾವಣೆ ಕಾಣಲಾಗುವುದೂ ಇಲ್ಲ. ದಲಿತ ಕವಿಗಳು ತಮ್ಮ ಬರವಣಿಗೆಯಲ್ಲಿ ಪೂರ್ಣ ಪ್ರಮಾಣದ ದಲಿತ ಸಂವೇದನೆಯನ್ನು ಅಳವಡಿಸಿಕೊಳ್ಳಬೇಕು. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನದಲ್ಲಿ ಕಿಚ್ಚು, ಆಕ್ರೋಶ, ಕೋಪ ಇವುಗಳನ್ನು ಹೊರತುಪಡಿಸಿದರೆ ಬೇರೆ ಅಂಶಗಳನ್ನು ಕಾಣಲಾಗದು. ಆದರೆ ದಲಿತ ಸಾಹಿತ್ಯ ಬರೀ ಮೇಲಿನ ಅಂಶಗಳಿಗಷ್ಟೇ ಸೀಮಿತವಾಗಿಲ್ಲ.

ದಲಿತ ಸಂಘಟನೆಗಳಲ್ಲೂ ಒಡಕು ಉಂಟಾಗಿರುವುದು ದಲಿತ ಪ್ರತಿಭಟನೆಯ ಕಾವನ್ನು ತಗ್ಗಿಸಿದೆ. ಈ ಸಂಘಟನೆಗಳು ಎಡವಿದ್ದು ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಜ್ಞೆಯನ್ನು ಅರ್ಥಮಾಡಿಕೊಳ್ಳುವುದರಲ್ಲಿ. ದಲಿತ ಸಮುದಾಯದಲ್ಲಿರುವ ಜಾತಿಗಳಿಗೆ ಮಣೆ ಹಾಕಿ ಒಳಜಾತಿಗಳ ಕಿತ್ತಾಟಕ್ಕೆ ಮುಂದಾಗಿವೆ. ಇದರ ಫಲಿತಾಂಶವೆಂದರೆ ಕಂಬಾಲಪಲ್ಲಿಯಲ್ಲಿ ದಲಿತರನ್ನು ಬರ್ಬರವಾಗಿ ಸುಟ್ಟು ಹಾಕಿದ ಪ್ರಕರಣಕ್ಕೆ ಸರಿಯಾದ ಸಾಕ್ಷಿ ಆಧಾರಗಳಿಲ್ಲದೆ ಮುಚ್ಚಿ ಹೋಗಿದೆ.

ತನ್ನವರೆ ಬೆಂಕಿಯಲ್ಲಿ ಬೆಂದುದ್ದನ್ನು ನೋಡಿದವರೆ ಸಾಕ್ಷಿ ಹೇಳುವಲ್ಲಿ ವಿಫಲರಾಗಲು ಕಾರಣ ದಲಿತರಲ್ಲಿ ಅಡಗಿರುವ ಭಯ ಅಥವಾ ಹತಾಶೆ ಅಲ್ಲ, ಬದಲಿಗೆ ದಲಿತರೇ ವ್ಯವಸ್ಥೆ ತೋರಿರುವ ಅನೇಕ ಆಮಿಷಗಳಿಗೆ ಬಲಿಯಾಗಿದ್ದಾರೆ ಎಂಬುದು ತಿಳಿದು ಬರುತ್ತದೆ.

ದಲಿತ ಕಾವ್ಯದ ಹೋರಾಟದ ನೆಲೆಗಳು 'ಜಾತಿ' ವ್ಯವಸ್ಥೆಯ ವಿರುದ್ಧವೂ ಇತ್ತು. ಆದರೆ ಇತ್ತೀಚಿನ ದಿನಗಳಲ್ಲಿ ದಲಿತರೇ 'ಜಾತಿ' ಪ್ರಜ್ಞೆಗೆ ಕಟ್ಟು ಬಿದ್ದು, ತಮ್ಮಲ್ಲೇ ಇರುವ ಒಳಜಾತಿಗಳಲ್ಲಿ ಒಡಕು ಮೂಡಿಸಿ ವ್ಯವಸ್ಥೆಯ ವಿರುದ್ಧ ನಿಲ್ಲುವ ಬದಲು, ತಮ್ಮವರಲ್ಲೇ ಮನಸ್ತಾಪ ಉದ್ಭವಿಸುವಂತೆ ಮಾಡಿರುವುದು ಸೋಲಿಗೆ ಕಾರಣವಾಗಿದೆ.

ಸಮಾಜವನ್ನು ಒಳ್ಳೆಯ ಮಟ್ಟದಲ್ಲಿ ಬದಲಾವಣೆ ಮಾಡುವಲ್ಲಿ ದಲಿತ ಕವಿಗಳು ಸಾಕಷ್ಟು ಚಿಂತನಾ ಕಾವ್ಯಗಳನ್ನು ರಚಿಸಿದ್ದರೂ, ಕ್ಷೇತ್ರ ಮಟ್ಟದಲ್ಲಿ ನೋಡಿದಾಗ ಇನ್ನಷ್ಟು ಬದಲಾವಣೆಯ ಅವಶ್ಯಕತೆ ಬೇಕಾಗಿದೆ ಅನಿಸಿದೆ. ಸದ್ಯಕ್ಕೆ ಆಗಿರುವ ಬದಲಾವಣೆ ಹೊರಗಿನ ಒತ್ತಡದಿಂದ ಆಗಿದ್ದು, ಆಂತರಿಕವಾಗಿ ಆಗಿಲ್ಲ ಅಂದರೇ ವ್ಯವಸ್ಥೆಯ ಬದಲಾವಣೆಯನ್ನು ಮೇಲುನೋಟಕ್ಕೆ ಒಪ್ಪಿದರೂ, ಒಳಗೊಳಗೆ ಜಾತಿ ತಾರತಮ್ಯ ತೋರುತ್ತಿದ್ದಾರೆ. ದಲಿತ ಕಾವ್ಯಗಳಲ್ಲಿ ನೋವಿನಿಂದ ಉಂಟಾದ ಬೇಸರವನ್ನು, ನೋವಿನ ಫಲಿತವನ್ನು ಹೇಳಬೇಕೋ, ಬೇಡವೋ ಎಂಬ ಗೊಂದಲ ಎದ್ದು ಕಾಣುತ್ತಿದೆ. ಒಂದು ಕಾಲದಲಿದ್ದ ನೋವನ್ನೇ ಸದಾ ಹೇಳಿ ಓದುಗರಲ್ಲಿ ವರ್ತಮಾನದ ಕಲ್ಪನೆಯನ್ನು ತೊಡೆದು ಹಾಕಿದ್ದಾರೆ. ಆರಂಭದ ದಲಿತ ಕವಿಗಳು ಅಥವಾ ಲೇಖಕರು ಅ ನೋವನ್ನು ಕಾವ್ಯದ ವಸ್ತುವಾಗಿಸಿಕೊಂಡು, ವರ್ತಮಾನದಲ್ಲಿ ಎದುರಾಗುವ ಬೇರೆ ಸಮಸ್ಯೆಗಳನ್ನು ತಿಳಿಯದಾದರು.

ಭೂತ ಕಾಲದಲ್ಲಿ ದಲಿತ ಸಮುದಾಯದವರ ಸ್ಥಿತಿಯನ್ನು ಕಾವ್ಯದಲ್ಲಿ ಸೆರೆ ಹಿಡಿದು, ವರ್ತಮಾನದಲ್ಲಿ ಹಿಂದಿನ ಸ್ಥಿತಿ ಮರುಕಳಿಸದಂತೆ ತಡೆದು, ಭವಿಷ್ಯದಲ್ಲಿ ಉತ್ತಮರಾದಂಥ ಕವಿಗಳು ಇಂದಿನ ದಲಿತರ ಸ್ಥಿತಿಯನ್ನು ಪರಿಗಣನೆಗೆ ತೆಗೆದುಕೊಳ್ಳದೆ, ತಮ್ಮ ಆರ್ಭಟವನ್ನು ಸಂಪೂರ್ಣವಾಗಿ ತಗ್ಗಿಸಿದ್ದಾರೆ. ತನಗೆ ಎದುರಾದ ಹೀನ ಸ್ಥಿತಿಯನ್ನು ನಿರ್ಮೂಲನೆ ಮಾಡಿಕೊಂಡು ಒಂದು ಉನ್ನತ ಹಂತಕ್ಕೆ ಬಂದ ನಂತರ ಕಾವ್ಯದಲ್ಲಿ ತೋರಿದ ಪ್ರತಿಭಟನೆಯ ಆಕ್ರೋಶಗಳು ದಿಢೀರನೆ ನೆಲಕಚ್ಚಿ, ಸ್ವಾರ್ಥಕ್ಕೆ ಬರೆದ ಕಾವ್ಯಗಳಾಗಿ ಇಂದು ಬದಲಾಗಿವೆ.

ದಲಿತ ಸಮುದಾಯದಲ್ಲಿ ಪುರುಷ ದಲಿತನಿಗಿಂತ ಹೆಚ್ಚು ಶೋಷಣೆ ಅನುಭವಿಸಿದವರೆಂದರೆ  ಮಹಿಳಾ ದಲಿತರು ಈ ಅಂಶಗಳು ಕಾವ್ಯದಲ್ಲಿ ವ್ಯಕ್ತವಾದರೂ ಪೂರ್ಣ ಪ್ರಮಾಣದಲ್ಲಿ ಹೆಣ್ಣು ಮಕ್ಕಳ ಬದುಕು ಬವಣೆಯನ್ನು ಸರಿಯಾಗಿ ಮಾಡಲಿಲ್ಲ. ಹೆಣ್ಣಿನ ಬವಣೆಯನ್ನು ಮುಕ್ತವಾಗಿ ಪ್ರಸ್ತಾಪಿಸದೇ ಕಂಡದನ್ನು ಕಾವ್ಯವಾಗಿಸಿ, ಹೆಣ್ಣಿನ ಕಣ್ಣೀರೊರೆಸಿದಿದ್ದೇವೆ ಎಂದು ಬೀಗಿಕೊಳ್ಳುತ್ತಿದ್ದಾರೆ.

ದಲಿತ ಕಾವ್ಯದ ದನಿ ಮತ್ತಷ್ಟು ಪ್ರಖರವಾಗಿ ಚಳುವಳಿಗೆ ಕಾವು ತುಂಬುವ ದೃಷ್ಟಿಯಿಂದ ವ್ಯಕ್ತಿಗತವಾಗದೆ, ಸಮುದಾಯದ ದನಿಯಾಗಬೇಕು. ಎಲ್ಲೇ ಚಳುವಳಿಗಳು ನಡೆದಾಗ ಹೋರಾಟಗಾರರಾಗಿ ಸಾಹಿತಿಗಳು, ಕವಿಗಳು ಜತೆಗೂಡಿ ಸಮುದಾಯದ ಒಗ್ಗಟ್ಟನ್ನು ತೋರುತ್ತಿದ್ದರು. ಎಂತಹ ಹೋರಾಟವಾದರೂ ಸಾಧಿಸಿಯೇ ತೀರುತ್ತೇವೆ ಎಂಬ ಭಾವನೆ ಕಾಲಕ್ರಮೇಣ ಮೃದುವಾಗಿದೆ. ಕವಿ, ಸಾಹಿತಿಗಳು ಪ್ರತಿಭಟನಾ ಸ್ಥಳದಲ್ಲಿದ್ದಾಗ ಹುಟ್ಟುವ ಕಾವ್ಯಗಳಲ್ಲಿ ಹೆಚ್ಚು ಗಟ್ಟಿತನವಿರುತ್ತದೆ. ಆದರೆ ಪರಿಸ್ಥಿತಿ ಈಗ ತಿರುವು ಮುರುವಾಗಿದೆ. ಉದಾ: ಬೆಂಗಳೂರಿನ ಮೆಟ್ರೋ ಕಾಮಗಾರಿಯಲ್ಲಿ ಹಲವಾರು ಮರಗಳು, ರಸ್ತೆಗಳು ನಶಿಸಿದವು. ಅದೇ ರೀತಿ ವಿಧಾನಸೌಧದ ಎದುರು ನಿರ್ಮಿಸಿದ ಅಂಬೇಡ್ಕರ್ ಪ್ರತಿಮೆಯನ್ನು ಸ್ಥಳಾಂತರಿಸುವ ವಿಚಾರ ಬಂದಾಗ ದಲಿತ ಸಮುದಾಯದ ಜತೆ ಎಲ್ಲರೂ ಒಗ್ಗೂಡಿದರು. ಇಂಥ ಒಗ್ಗಟ್ಟು ಪ್ರತಿಯೊಂದರಲ್ಲೂ ಕಾಣುವ ಅಗತ್ಯವಿದೆ. ಇತ್ತೀಚಿನ ಕಾವ್ಯಗಳ ಕಾವು ತನ್ನ ಸ್ವಂತ ಸಮಸ್ಯೆಯನ್ನೇ ಇಡೀ ದೇಶದ ಸಮಸ್ಯೆ ಎಂದು ಬಗೆದು, ಕಾವ್ಯದ ಗುಣಮಟ್ಟವನ್ನು ಕಸಿಯುತ್ತಿದ್ದಾರೆ. 'ಸಾಹಿತಿಯೊಬ್ಬ ಜನ್ಮತಃ ಅಸ್ಪೃಶ್ಯನೇ ಆಗಿದ್ದರೂ ಮೇಲಿನವರ ಸಂಸ್ಕೃತಿಯ ಮೌಲ್ಯಗಳನ್ನು ಅಳವಡಿಸಿಕೊಂಡಿದ್ದರೆ, ಅಂಥ ಸಮುದಾಯದಿಂದ ಬಂದ ಬರಹಗಾರರು ದಲಿತ ಸಾಹಿತ್ಯಕ್ಕೆ ಯಾವ ಕೊಡುಗೆ ನೀಡಲು ಸಾಧ್ಯವಾಗುವುದಿಲ್ಲ. ದಲಿತ ಕವಿಗಳಲ್ಲಿ ಅಸ್ಪೃಶ್ಯತೆಯಿಂದ ಅನುಭವಿಸಿದ ನೋವಿದ್ದಾಗಲೇ ದಲಿತ ಕಾವ್ಯದಲ್ಲಿ ಅದನ್ನು ವ್ಯಕ್ತಪಡಿಸಲು ಸಾಧ್ಯ. ಒಬ್ಬ ದಲಿತ ನೋವನ್ನು ನೋಡಿದಾಕ್ಷಣ, ಅದನ್ನು ಕಾವ್ಯದಲ್ಲಿ ಇಳಿಸಿದಾಕ್ಷಣ, ದಲಿತ ಕಾವ್ಯ ಗೆದ್ದಿತು ಎಂದು ಭಾವಿಸುವುದು ಸರಿಯಲ್ಲ. ದಲಿತ ಕಾವ್ಯಗಳ ಹುಟ್ಟಿನಲ್ಲಿದ್ದ ಆಕ್ರೋಶ ನಂತರ ಕಡಿಮೆಯಾಗಿ ಅದು ಅಸಮಾಧಾನ, ವ್ಯಂಗ್ಯ ವಿಡಂಬನೆಗಳನ್ನು ಅಲಂಕರಿಸಿತು.

ಪ್ರತಿಭಟನೆಯನ್ನೇ ಅಸ್ತ್ರವಾಗಿಸಿಕೊಂಡು ಕಾವ್ಯ ಪ್ರಯೋಗಿಸಿದ ಕವಿಗಳಿಗೆ ಪ್ರತಿಭಟನೆಯಲ್ಲಿ ಹಿನ್ನೆಡೆಯಾದಾಗ ಕಾವ್ಯದ ಗುಣಮಟ್ಟಕ್ಕೂ ಪೆಟ್ಟು ಬಿತ್ತು.

ತನ್ನ ಸಮುದಯದವರ ಬಗ್ಗೆ ಬರೀ ಬಾಹ್ಯ ಸಮಸ್ಯೆಗಳಿಗೆ ಪರಿಹಾರ ಕೊಡಿಸುವ ನಿಟ್ಟಿನಲ್ಲಿ ಕಾವ್ಯ ಪ್ರಯೋಗಿಸಿ, ಜನ ಮನ್ನಣೆಯೇ ದೊಡ್ಡದೆಂದು ಭಾವಿಸಿದರು. ಆದರೆ ತನ್ನವರ ಪೂರ್ಣ ಪ್ರಮಾಣದ ಜೀವನಾನುಭವವನ್ನು ಸಾಹಿತ್ಯದಲ್ಲಿ ದಾಖಲಿಸಲು ಸಾಧ್ಯವಾಗಲಿಲ್ಲ. ಜೀವನದ ಅನುಭವಗಳನ್ನು ಕಾವ್ಯದಲ್ಲಿ ತಂದರೂ ನಿರೀಕ್ಷಿತ ಮಟ್ಟವನ್ನು ಅದು ತಲುಪಲಿಲ್ಲ. ಎಲ್ಲಿ ರಾಜಕೀಯ ಅಮಿಷಗಳಿಗೆ ಒಳಗಾದರೋ ಅಲ್ಲಿ ದಲಿತ ಸಾಹಿತ್ಯ, ಕಾವ್ಯಗಳು ನೆಲ ಕಚ್ಚಿತು. ದಲಿತರಿಗೆ ಅನೇಕ ರೀತಿಯ ಸವಾಲುಗಳಿದ್ದು ಅವುಗಳನ್ನು ಒಂದು ಹಂತದಲ್ಲಿ ಗೆದ್ದರು. ಆದರೆ ಪೂರ್ಣ ಪ್ರಮಾಣದಲ್ಲಿ ಗೆಲ್ಲುವಲ್ಲಿ ವಿಫಲರಾದರು.

ಒಟ್ಟಿನಲ್ಲಿ ದಲಿತ ಕಾವ್ಯಗಳು ಸೋಲು ಗೆಲುವಿನ ಮಿಶ್ರ ಅನುಭವವನ್ನು ಹೊಂದಿದೆ. ಸಾಹಿತ್ಯ ಘಟ್ಟದ ಆರಂಭದಲ್ಲಿ ಗೆಲುವಿನ ಕುದುರೆ ಏರಿದರೆ, ನಂತರದಲ್ಲಿ ಗೆಲುವು ಎಂಬುದು ಮರೀಚಿಕೆಯಾಯಿತು.

# ಅಧ್ಯಾಯ – 7

## ಸಮಾನತೆಯ ಹೋರಾಟಕ್ಕೆ ದನಿಯಾದ ದಲಿತ ಕಾವ್ಯ
## (ಫಲಿತಗಳು)

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರತಿಭಟನಾ ಸಾಹಿತ್ಯವಾಗಿ ತನ್ನ ಛಾಪು ಮೂಡಿಸಿದ ದಲಿತ ಸಾಹಿತ್ಯದ ಮುಖ್ಯ ಪ್ರಾಕಾರವಾದ ಕಾವ್ಯಕ್ಷೇತ್ರವು ವಸ್ತುವಿನ ದೃಷ್ಟಿಯಿಂದಲೂ, ಭಾಷಾ ಶೈಲಿಯ ದೃಷ್ಟಿಯಿಂದಲೂ ವೈವಿಧ್ಯವಾಗಿದೆ. ದಲಿತ ಕಾವ್ಯಗಳು ಹಿಂದಿನ ಸಾಹಿತ್ಯ ಘಟ್ಟಗಳ ಕಾವ್ಯಗಳಿಗಿಂತ ಮೊಟ್ಟಮೊದಲಿಗೆ ಭಿನ್ನವಾಗಿ ಕಾಣಿಸಿದ್ದು ವಸ್ತು ಮತ್ತು ಭಾಷೆಯ ದೃಷ್ಟಿಯಿಂದಲೇ ಎನ್ನುವುದು ಕಂಡು ಬರುತ್ತದೆ. ದಲಿತ ಕಾವ್ಯಗಳು ಸಮಾಜಮುಖಿಯಾಗಿ, ಸಮುದಾಯಮುಖಿಯಾಗಿ ಪ್ರಕಟವಾದವು. ಜನವರ್ಗ ಮಾತನಾಡುವ ಭಾಷಾ ಸಾಹಿತ್ಯದಿಂದ ದೂರವಾಗಿದ್ದ ಕೊರಗನ್ನು ಕಳೆದದ್ದು ಈ ಕಾವ್ಯಗಳ ವೈಶಿಷ್ಟಗಳಲ್ಲೊಂದು.

ಅನುಭವದ ಅಧಿಕೃತತೆ ದಲಿತ ಕವಿಗಳಲ್ಲಿ ಕಾಣುವುದರ ಜೊತೆಗೆ ಕವಿಗಳ ಆಶಯ ಹೊಸ ಸಮಾಜವನ್ನು ಸೃಷ್ಟಿಸುವ ಹೊಣೆಗಾರಿಕೆಯಿಂದ ಸೃಜನಶೀಲಕ್ರಿಯೆಯನ್ನು ಸ್ವೀಕರಿಸಿರುವುದು ಸವಾಲಾಗಿ ಕಂಡು ಬರುತ್ತದೆ. ಕಾವ್ಯಕಲೆ ಸಮುದಾಯದ ಅನುಭವದಿಂದ ಬಂದಿರುವುದರಿಂದ ಸಾಮಾನ್ಯ ಜನರ ನುಡಿಗಟ್ಟುಗಳಿಂದ ರೂಪುಗೊಂಡಿದೆ.

ದಲಿತ ಕಾವ್ಯ ಹುಟ್ಟಿಕೊಂಡಿದ್ದು ಅಸಮಾನತೆಯ ಒತ್ತಡ, ಸಾಮೂಹಿಕ ಶೋಷಣೆಗಳಿಂದ ಎಂಬುದನ್ನು ಕಂಡುಕೊಳ್ಳಬಹುದು. ತಳ ಸಮುದಾಯದ ಎಚ್ಚರ, ಹೊಸ ಆಲೋಚನೆ, ಬದಲಾವಣೆಯ ತುರ್ತುಗಳು ದಲಿತ ಕಾವ್ಯಗಳಲ್ಲಿವೆ. ವ್ಯವಸ್ಥೆಯ ಅವಕೃಪೆಗೆ ಒಳಗಾಗಿ ವ್ಯಕ್ತಿತ್ವವೇ ಇಲ್ಲದಂತೆ ಬದುಕುತ್ತಿದ್ದ ಕ್ಷುದ್ರ ಜೀವಿಗಳು ತಮ್ಮದೇ ಆದ ಅಸ್ತಿತ್ವಕ್ಕಾಗಿ ಹೋರಾಟ ನಡೆಸಿದ ಘಟನೆಗಳ ಜೀವನ ವೃತ್ತಾಂತಗಳು ದಲಿತ ಕಾವ್ಯಗಳಲ್ಲಿ ಕಂಡು ಬರುತ್ತವೆ.ದಲಿತ ಕವಿಗಳು ಸ್ವಂತ ಅನುಭವದಿಂದಲೇ ತನ್ನ ಸಮುದಾಯದವರ ಮನಸ್ಸನ್ನು ಹೊಕ್ಕು, ಅವರ ಅನಿಸಿಕೆಗಳನ್ನು ಕಾವ್ಯವಾಗಿಸಿರುವುದು ಇಲ್ಲಿನ ವಿಶೇಷತೆ. ಕೆಳ ಸಮುದಾಯದವರು ವ್ಯವಸ್ಥೆಯ ಮುಂದೆ ಎದುರಿಸುತ್ತಿದ್ದ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳಲು ದಲಿತ ಕವಿಗಳು ಸಾಕಷ್ಟು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ. ವ್ಯವಸ್ಥೆಯ ಕ್ರೌರ್ಯದಿಂದ ಸಮುದಾಯವು ಅಸಹಾಯಕವಾಗಿದ್ದು,

ಪ್ರಭುತ್ವವು ತನ್ನವರ ಒಳ್ಳೆತನಗಳ ಮೇಲೆ ಹಲ್ಲೆ ಮಾಡಿದಾಗ ಪ್ರಭುತ್ವದ ರಕ್ಷಣೆ ದೊರೆಯದೆ ಅನಾಥವಾಗಿದ್ದ ಸಂದಿಗ್ಧತೆಯನ್ನು ಕ್ರೋಢಿಕರಿಸುವಲ್ಲಿ ಕಾವ್ಯ ಯಶಸ್ವಿಯಾಗಿ ಪ್ರಯೋಗವಾಗಿವೆ. ಬಂಡವಾಳಶಾಹಿಗಳ ಅವಿರತ ಬೆಳವಣಿಗೆಯಿಂದ ಸಮುದಾಯದ ಸಾಂಸ್ಕೃತಿಕ ಮಹತ್ವದ ಅಂಶಗಳು ವಿನಾಶದ ಅಂಚಿಗೆ ತಲುಪಿ ನಿರ್ನಾಮವಾಗುತ್ತವೆ. ಇಂತಹ ಸಾಹಿತ್ಯಕ ಕಾರಣಗಳಿಂದ ದಲಿತ ಕಾವ್ಯಗಳು ಉತ್ತಮ ಮಟ್ಟದಾಗಿವೆ. ಪ್ರಸ್ತುತ ದಲಿತ ಕಾವ್ಯ ಪ್ರಾಕಾರವನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಶಿಸ್ತುಗಳ ಮೂಲಕ ಅಧ್ಯಯನ ಮಾಡಲಾಗಿದೆ. ಭಾಷೆ, ವಸ್ತು, ಶೈಲಿ, ಸಾಹಿತ್ಯಕ ಅಧ್ಯಯನದ ವ್ಯಾಪ್ತಿಗೆ ಬಂದರೆ, ವಸ್ತು ವಿಷಯದ ಆಯ್ಕೆಗೆ ಕಾರಣವಾದ 'ವ್ಯವಸ್ಥೆ'ಅದರ ಕ್ರೌರ್ಯ, ಸಾಮಾಜಿಕ ಸಂದರ್ಭಗಳು ಸಾಹಿತ್ಯೋತ್ತರ ಅಧ್ಯಯನದ ವ್ಯಾಪ್ತಿಗೆ ಬರುತ್ತವೆ. ಕಾವ್ಯಗಳ ವಾತಾವರಣ, ಅಲ್ಲಿ ವ್ಯಕ್ತವಾಗುವ ತಳ ಸಮುದಾಯದ ಸಾಮಾಜಿಕ ಹಿನ್ನೆಲೆಯನ್ನು ಪ್ರಧಾನವಾಗಿ ಪರಿಗಣಿಸಿ, ಅಧ್ಯಯನವನ್ನು ಕೈಗೊಂಡು ಚರ್ಚಿಸಲಾಗಿದೆ. ಇಲ್ಲಿನ ಕವಿ ವೃಂದವು ತಳ ಸಮುದಾಯದ ಸಮಗ್ರ ಜೀವನವನ್ನು ಸೆರೆಹಿಡಿಯುವಲ್ಲಿ ಸಫಲರಾಗಿದ್ದಾರೆ. ಇದು ಕವಿಗಳಿಗೆ ಸವಾಲು ಹಾಗೂ ಸಹನೆಯ ಪರೀಕ್ಷೆಯೂ ಹೌದು. ತಮ್ಮದೇ ಅನುಭವದ ವಿವರಗಳನ್ನು ಬರೆಯುವಾಗ ವಾಸ್ತವತೆಗೆ ಹತ್ತಿರವಾಗಿ ಅನುಭವ ಪ್ರಾವಿಣ್ಯದಲ್ಲಿ ಕಾವ್ಯಗಳು ಸಂಪೂರ್ಣ ಯಶಸ್ವಿಯಾಗಿವೆ.

ಇಷ್ಟಾದರೂ ದಲಿತ ಕಾವ್ಯಕ್ಕೆ ಸಾಹಿತ್ಯಕ ದೃಷ್ಟಿಯಿಂದ ಒಂದೆರಡು ಕೊರತೆ ಎದ್ದು ಕಾಣುತ್ತದೆ. ಅದೇನೆಂದರೆ ಪ್ರಾರಂಭದಲ್ಲಿದ್ದ ಸಿಟ್ಟು, ಅಬ್ಬರ, ಆಕ್ರೋಶ ಕಾಲಕ್ರಮೇಣ ಕಡಿಮೆಯಾಯಿತು ಎಂಬುದು. ಕೆಲ ವಿಮರ್ಶಕರ ಪ್ರಕಾರ ದಲಿತ ಕವಿಗಳು ಮೊದಲಿನ ಗತ್ತನ್ನು ಕಾಪಾಡಿಕೊಳ್ಳಲು ವಿಫಲರಾಗಿದ್ದು, ಕವಿಗಳು ಅನಾನುಕೂಲರಾಗಿದ್ದಾಗ ಇದ್ದ ಕಾವ್ಯ ಪ್ರೌಢ್ಯಮೆಗೂ, ಅನುಕೂಲಸ್ಥರಾದಾಗ ಇದ್ದ ಕಾವ್ಯ ಪ್ರೌಢ್ಯಮೆಗೂ ತೀರ ವ್ಯತ್ಯಾಸವಿದೆ ಎಂದು ಟೀಕಿಸುತ್ತಾರೆ. ಹಾಗೂ ಅಪಾರವಾದ ಅನುಭವವುಳ್ಳ ದಲಿತ ಮಹಿಳೆಯರಲ್ಲಿ ಪುರುಷ ಪ್ರಮಾಣ ಮತ್ತು ಸಮನ್ವಯ ದೃಷ್ಟಿಯುಳ್ಳ ಕವಯತ್ರಿಯರು ಬಂದಿಲ್ಲದಿರುವುದು ಕಂಡು ಬರುತ್ತದೆ. ಇಂತಹ ಕೆಲವನ್ನು ಹೊರತುಪಡಿಸಿದರೆ ದಲಿತ ಕಾವ್ಯಕ್ಕೆ, ಕವಿಗಳ ವರ್ಚಸ್ಸಿಗೆ ಯಾವುದೇ ಧಕ್ಕೆ ಇಲ್ಲದೆ ಯಶಸ್ವಿಯಾಗಿದೆ ಎನ್ನಬಹುದು.

ಕನ್ನಡ ಸಾಹಿತ್ಯದ ಪ್ರಾದೇಶಿಕತೆಯ ಆಧಾರದಲ್ಲಿ ಕಾವ್ಯಗಳು ಸಾಮಾಜಿಕ ಬದುಕಿನ ಮೇಲೆ ಪರಿಣಾಮ ಉಂಟು ಮಾಡುವುದರಿಂದ ಇದೊಂದು ಅನಿವಾರ್ಯವಾದ ಸಾಹಿತ್ಯ ಕ್ರಮ. ಇಂಥ ಕಾವ್ಯ ಕೃಷಿಗೆ ವಿಮರ್ಶೆ ಸಾಕಷ್ಟು ಆಗಿಲ್ಲವೆಂಬುದು ಕಂಡು ಬಂದಿದ್ದು, ಇನ್ನಷ್ಟು ವ್ಯಾಪಕವಾಗಿ ವಿಮರ್ಶೆ ನಡೆಯಬೇಕಾಗಿದೆ ಎಂಬುದು ಮಾತ್ರ ಸ್ಪಷ್ಟ. ವಿಮರ್ಶೆ ಮತ್ತು ಸಂಶೋಧನೆ ಸಮಗ್ರ ಅಧ್ಯಯನದ ಎರಡು ಮಾರ್ಗಗಳು ಎನ್ನಬಹುದು.ಪ್ರಸ್ತುತ ಪ್ರಬಂಧವು 'ದಲಿತ ಸಾಹಿತ್ಯದ ಪರಿಕಲ್ಪನೆ', 'ಕನ್ನಡ ಸಾಹಿತ್ಯದಲ್ಲಿ ಪ್ರತಿಭಟನಾ ಇತಿಹಾಸ', 'ಪ್ರತಿಭಟನೆಯ ನೆಲೆಗಳು' ಕೊನೆಯದಾಗಿ 'ಪ್ರತಿಭಟನೆಯ ಗೆಲುವು – ಸೋಲು' ಎಂಬ ಅಧ್ಯಾಯಗಳಿಂದ ರೂಪುಗೊಂಡಿದೆ.

'ದಲಿತ ಸಾಹಿತ್ಯದ ಪರಿಕಲ್ಪನೆ' ಎಂಬ ಅಧ್ಯಾಯದಲ್ಲಿ ಮೊದಲಿಗೆ ದಲಿತ ಯಾರು? ಎಂಬುದರ ಬಗ್ಗೆ ನಿಖರವಾದ ನಿಲುವು ತೆಗೆದುಕೊಳ್ಳುವ ಸಲುವಾಗಿ ಚರ್ಚಿಸಲಾಗಿದ್ದು, ಇದರಲ್ಲಿ ದಲಿತ ಎಂಬುದು ಒಂದು ಸಮುದಾಯವಾಗಿದ್ದು, ಜಾತಿಯಲ್ಲವೆಂದು ಖಾತರಿಪಡಿಸಿಕೊಂಡಿದ್ದೇನೆ. ಈ ಸಮುದಾಯದಲ್ಲಿ ಬರುವ ಮಾದಿಗ, ಹೊಲೆಯ ಎಂಬಿತ್ಯಾದಿ ಜಾತಿಗಳಾಗಿವೆ. ಈ ಜಾತಿಗಳ ಒಟ್ಟು ಕ್ರೋಢೀಕರಣವೆ ದಲಿತ ಸಮುದಾಯವಾಗಿದ್ದು, ಇವರು ಊರಿನ ಹೊರ ಭಾಗದಲ್ಲಿ ಉನ್ನತ ವರ್ಗದಿಂದ ದೂರ ಉಳಿದು ವಾಸಿಸುವವರಾಗಿದ್ದಾರೆ. ದಲಿತ ಕಾವ್ಯದ ವಿಚಾರವಾಗಿ ದಲಿತ ಕವಿಗಳು ತನ್ನ ಸಮುದಾಯದ, ಜಾತಿ, ಜನಾಂಗದವರ ಕುರಿತು ರಚಿಸುವ ಕಾವ್ಯಗಳು ಮಾತ್ರ ದಲಿತ ಕಾವ್ಯಗಳು. ಇದೇ ದಲಿತ ಕವಿಗಳು ಪ್ರಕೃತಿಯನ್ನೋ, ಪುರಾಣವನ್ನೋ ಕುರಿತು ರಚಿಸಿದರೆ ಅದು ದಲಿತ ಕಾವ್ಯವಾಗುವುದಿಲ್ಲ ಎಂಬುದನ್ನು ತಿಳಿದುಕೊಂಡಿದ್ದೇನೆ. ದಲಿತ ಸಮುದಾಯದವರ ಬಗ್ಗೆ ಇತರರು ಅಂದರೆ, ದಲಿತೇತರು ಬರೆದ ಕಾವ್ಯ, ಕಥೆ, ಕಾದಂಬರಿ, ನಾಟಕ ಇತ್ಯಾದಿ ಸಾಹಿತ್ಯಕ ಕೃತಿಗಳು ದಲಿತ ಸಂವೇದನೆಯುಳ್ಳ ಕೃತಿಗಳಾಗುವುದೆಂದು ನಿರ್ಧರಿಸಿದ್ದೇನೆ. ಭಾಷೆಯ ವಿಚಾರವಾಗಿ ಹೇಳುವುದಾದರೆ ದಲಿತರ ಆಡು ಭಾಷೆಗೂ, ಕಾವ್ಯದಲ್ಲಿ ವ್ಯಕ್ತವಾಗಿರುವ ಭಾಷೆಗೂ ಹೆಚ್ಚೇನು ಅಂತರವಿಲ್ಲ. ಕವಿಗಳು ಕೆಲವು ಕಡೆ ಆಕ್ರೋಶದಿಂದ ಕೆರಳಿ ಸಾಹಿತ್ಯಿಕ ಭಾಷೆಗೆ ಧಕ್ಕೆ ತರುವ ಭಾಷೆಗಳನ್ನು ಬಳಸಿದರೂ, ಅದರಿಂದ ಭಾಷೆಗೆ ಅವಮರ್ಯಾದೆ ಮಾಡುವುದಾಗಲಿ,

ಸಾಹಿತ್ಯಕ್ಕೆ ಮುಜುಗರ ಉಂಟು ಮಾಡುವುದಾಗಲಿ ಅಥವಾ ಯಾವುದೇ ರೀತಿಯ ತೊಂದರೆ ಕೊಡುವ ಉದ್ದೇಶವಾಗಲಿ ಅವರಿಗೆ ಇರಲಿಲ್ಲ. ಆದರೆ ತನ್ನವರ ಹೀನ ಸ್ಥಿತಿಗೆ ಅನುಗುಣವಾಗಿ ವ್ಯವಸ್ಥೆ ಮೇಲಿನ ಸಿಟ್ಟು ಆ ರೀತಿಯ ಭಾಷಾ ಪ್ರಯೋಗಕ್ಕೆ ಕಾರಣವಾಗಿದೆ. ಕೆಲವು ಭಾಗಗಳಲ್ಲಿ ಸೌಮ್ಯವಾಗಿಯೇ ತಮ್ಮ ಆಕ್ರೋಶವನ್ನು, ಸಮುದಾಯದ ಸಂಕಟವನ್ನು ಅಭಿವ್ಯಕ್ತಿಸಿ, ಎಂತಹ ಸಂದರ್ಭದ ಭಾಷೆಗೂ ದಲಿತ ಕಾವ್ಯ, ದಲಿತ ಕವಿ ಸದಾ ಸಿದ್ಧ ಎಂಬುದು ತಿಳಿದು ಬರುತ್ತದೆ. ದಲಿತ ಪ್ರಜ್ಞೆ ವಿಷಯವಾಗಿ ದಲಿತರು ಬದಲಾವಣೆ ಬಯಸುವ ಸಲುವಾಗಿ ತನ್ನ ಸಮುದಾಯದವರಲ್ಲಿ ಜಾಗೃತಿ ಮೂಡಿಸಿ,ಸಮಾಜದಲ್ಲಿ ದಲಿತರಿಗೊಂದು 'ಅಥೆಂಟಿಸಿಟಿ' ಅವಶ್ಯಕತೆ ಇದೆ ಎಂದು ಸಾಹಿತ್ಯದ ಮೂಲಕ ಸಮುದಾಯದವರಿಗೆ ಅರಿವು ಮೂಡಿಸುವ ಕಾರ್ಯ ನಡೆದಿದೆ.

ಎರಡನೆಯ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ ಪ್ರತಿಭಟನೆಯ ನೆಲೆಗಳನ್ನು ಹುಡುಕುವ ಸಲುವಾಗಿ ಪಂಪನ ಪ್ರಸಿದ್ಧ ಕೃತಿ 'ವಿಕ್ರಮಾರ್ಜುನ ವಿಜಯ'ದಲ್ಲಿ ಕರ್ಣನ ಪಾತ್ರವನ್ನು ಆರಿಸಿಕೊಂಡಿದ್ದು, ಈ ಕೃತಿಯಲ್ಲಿ ಕರ್ಣನು ಜಾತಿ ನಿಂದನೆಗೆ ಒಳಗಾಗಿ, ಆತನಲ್ಲಿ ಅಡಗಿರುವ ಶೌರ್ಯಕ್ಕಿಂತ ವ್ಯವಸ್ಥೆ ಸೃಷ್ಟಿಸಿರುವ ಜಾತಿಯೇದೊಡ್ಡದಾಗಿ ನಿಂದನೆಗೆ ಒಳಗಾಗುವ ಪ್ರಸಂಗ ಹಾಗೂ ಕರ್ಣನ ಬಲವನ್ನು ಕಂಡು ಇವನ ಸರಿಸಮಾನಕ್ಕೆ ನಿಲ್ಲಲಾಗದವರು ಜಾತಿಹೆಸರಲ್ಲಿ ಕರ್ಣನ ಬಲವನ್ನು ಅಡಗಿಸಿ ಮೆರೆದರು. ಆದ್ದರಿಂದ ಈ ಕೃತಿಯಲ್ಲಿ ಜಾತಿಯೇ ನಿರ್ಣಾಯಕದಂತೆ ಕಂಡು ಬಂದಿದೆ. ಬಸವಣ್ಣನ ಕಾಲವನ್ನು ಕ್ರಾಂತಿಯ ಕಾಲವೆಂದು ಪರಿಗಣಿಸಬಹುದು. ಇಡೀ ಸಾಹಿತ್ಯ ಲೋಕದಲ್ಲಿ ಕ್ರಾಂತಿಯ ಅಲೆ ಎಬ್ಬಿಸಿದ ಮೊದಲ ಕಾಲ ಘಟ್ಟವೇ 'ವಚನ ಸಾಹಿತ್ಯ'. ಜಾತಿ ತಾರತಮ್ಯ ದೂರಮಾಡಿ ಎಲ್ಲಾ ವರ್ಗದ ಜನರಿಗೂ ಸಾಹಿತ್ಯ ರಚನೆಗೆ ಅವಕಾಶ ಕೊಟ್ಟು, ಮಹಾಮನೆ ನಿರ್ಮಾಣ ಮಾಡಿ, ಜಾತಿ ಸೋಂಕು ತೊಲಗಿಸುವ ಪ್ರಥಮ ಪ್ರಯತ್ನ ಈ ಘಟ್ಟದಲ್ಲಿ ನಡಯಿತು. ಆದರೆ ಸಂಪೂರ್ಣ ನಿರ್ಮೂಲನೆ ಆಗಲಿಲ್ಲವಾದರೂ ದಲಿತ ಸಾಹಿತ್ಯಕ್ಕೆ, ಕಾವ್ಯದ ಪ್ರತಿಭಟನೆಗೆ ಈ ಘಟ್ಟದ ಸಾಹಿತ್ಯ ಸ್ಫೂರ್ತಿಯಾಯಿತು. ಸರ್ವಜ್ಞನ ಕಾಲದಲ್ಲೂ ಸಹ ದಲಿತರ ಮೇಲಿನ ಅವಹೇಳನಕಾರಿ ಘಟನೆಗಳು ಜರುಗಿದ್ದು, ಈ ಕಾಲದಲ್ಲಿ ಇದ್ದ ದಲಿತರು ಯಾವುದೇ ಪ್ರತಿರೋಧ ತೋರದೆ ಅನುಭವಿಸಿರುವುದನ್ನು ಸರ್ವಜ್ಞ ದಾಖಲಿಸಿದ್ದಾನೆ.

ಕನಕದಾಸರ 'ರಾಮಧಾನ್ಯ ಚರಿತ'ದಲ್ಲಿ ಭತ್ತದ ವಿರುದ್ಧ ರಾಗಿ ವಿಜಯ ಪತಾಕೆ ಹಾರಿಸಿ ಕೆಳ ಜಾತಿಯವರು ಮನುಷ್ಯರೆ, ಇವರಿಗೂ ಸಮಾನವಾದ ಅವಕಾಶ ಕಲ್ಪಿಸಬೇಕು ಎಂಬ ನಿಲುವು ದಾಸರ ಕೃತಿಯಿಂದ ತಿಳಿದು ಬಂದಿದೆ. ವ್ಯವಸ್ಥೆಯಿಂದ ಶೋಷಣೆ ಅನುಭವಿಸಿದರೂ ಆ ವ್ಯವಸ್ಥೆಯ ಮಧ್ಯದಲ್ಲಿಯೇ ಬಾಳಬೇಕೆನ್ನುವ ಕೆಳವರ್ಗದ ನಿರ್ಧಾರವನ್ನು ಈ ಕಾಲಘಟ್ಟದ ಸಾಹಿತ್ಯದಲ್ಲಿ ಕಾಣಬಹುದು. ಕುಮಾರ ವ್ಯಾಸರ 'ಕರ್ಣಾಟ ಕಥಾಮಂಜರಿ' ಕೃತಿಯಲ್ಲಿ ಕರ್ಣನ ವಂಶ ವೃತ್ತಾಂತದ ಸಂದರ್ಭದಲ್ಲಿ ಕೃಷ್ಣ, ಕುಂತಿ ಇಬ್ಬರೂ ಕರ್ಣನನ್ನು ಪಾಂಡವರ ಬಳಿ ಸೆಳೆಯಲು ಮಾಡಿದ ತಂತ್ರವನ್ನು ಗಮನಿಸಿದಾಗ ವ್ಯವಸ್ಥೆಗೆ ತಾವೇ ನಿರ್ಮಿಸಿಕೊಂಡ ನಿಬಂಧನೆಗಳನ್ನು ಸಮಯ ಬಂದಾಗ ಯಾವ ರೀತಿ ಬೇಕಾದರೂ ಬದಲಾಯಿಸಿಕೊಳ್ಳುವುದನ್ನು ಹಾಗೂ ಕರ್ಣ ತನ್ನ ಹಿನ್ನೆಲೆ ಕೇಳಿ, ಮರುಗಿ ತನ್ನ ತಾಯಿಗೆ ವಚನ ನೀಡಿ, ನುಡಿದಂತೆ ನಡೆಯುವ ಮೂಲಕ ಪ್ರತಿಭಟನೆ ವ್ಯಕ್ತಪಡಿಸಿರುವುದನ್ನು ಕಾಣಬಹುದು. ಆಧುನಿಕ ಸಾಹಿತ್ಯದಲ್ಲಿ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡತಿ' ಕಾದಂಬರಿಗಳಲ್ಲಿ ವ್ಯವಸ್ಥೆಯು ದಲಿತರನ್ನು ತಮ್ಮ ಸ್ವಾರ್ಥದ ಅಡಿ ಆಳಾಗಿ ದುಡಿಸಿಕೊಳ್ಳುವ ಪರಿ, ಇತರ ಧರ್ಮದವರು ಮತಾಂತರ ಮಾಡುವ ಮೂಲಕ ಬಲವಂತವಾಗಿ ತಮ್ಮ ವಶಪಡಿಸಿಕೊಳ್ಳವ ವಿಧಾನಗಳಿಗೆ ದಲಿತರು ಯಾವುದೇ ರೀತಿಯಲ್ಲೂ ವ್ಯವಸ್ಥೆಗೆ ಎದುರು ಬೀಳದೆ ಶೋಷಣೆ ಅನುಭವಿಸಿದ್ದು ಹಾಗೂ ಚೋಮನ ದುಡಿಯಲ್ಲಿ ವ್ಯವಸ್ಥೆಯ ತಾಳಕ್ಕೆ ಜೋತು ಕುಣಿದರೂ, ಜಮೀನ್ದಾರನಾಗುವ ಆಸೆ ಕೈಗೂಡದೆ, ತನ್ನ ಮಗ ಮತಾಂತರ ಹೊಂದಿ ಜಮೀನ್ದಾರನಾಗುವುದನ್ನು ಕಂಡು ಸಂತೋಷಪಡಬೇಕೊ, ದುಃಖಪಡಬೇಕೊ ಅರಿವಿಲ್ಲದೇ, ಸೊರಗಿದ್ದಾರಿಂದ ಹೊಲೆಯನೊಬ್ಬನಿಗೆ ವ್ಯವಸ್ಥೆಯಿಂದ ಯಾವುದೇ ರೀತಿಯ ಉಪಯೋಗವಿಲ್ಲವೆಂಬ ಮಹತ್ತರವಾದ ಅಂಶ ಈ ಅಧ್ಯಾಯದಲ್ಲಿ ಕಂಡು ಬಂದಿದೆ. ಪ್ರತಿಭಟನೆ ಮಾಡಲು ಯಾವುದಾದರೊಂದು ಅಥವಾ ಯಾವ ರೀತಿಯಲ್ಲಾದರು ಶೋಷಣೆ ಉಂಟಾಗಬೇಕು. ಶೋಷಣೆಗೆ ಮುಖ್ಯ ಕಾರಣ ಹಾಗೂ ಯಾವ ಕೋನದಿಂದ, ನೆಲೆಯಿಂದ ವ್ಯಕ್ತಗೊಂಡಿದೆ ಎಂಬುದನ್ನು ಸಾಬೀತು

ಪಡಿಸಿಕೊಂಡು, ಆಗಿರುವ ಶೋಷಣೆಗೆ ಯಾವ ನೆಲೆಗಟ್ಟಿನಿಂದ ಪ್ರತಿಭಟನೆ ಮಾಡಬೇಕು ಎಂಬುದನ್ನು ಸ್ಪಷ್ಟಪಡಿಸಬೇಕು. ಹಾಗಾಗಿ ಈ ಪ್ರಬಂಧದಲ್ಲಿ ದಲಿತರ ಪ್ರತಿಭಟನೆಗೆ ಅತಿ ಮುಖ್ಯವಾಗಿ ಅವಮಾನ, ಸಾಮಾಜಿಕ ನಿರ್ಬಂಧ, ಧಾರ್ಮಿಕ ಶೋಷಣೆ, ಅಸಮಾನತೆ, ಅಸ್ಪೃಶ್ಯತೆ, ಹಸಿವು, ನೋವು, ಲೈಂಗಿಕ ಶೋಷಣೆ, ಅರಿವಿನ ವಂಚನೆಗಳೆಂಬ ನೆಲೆಗಳಲ್ಲಿ ವ್ಯಕ್ತವಾದ ಶೋಷಣೆ ಹಾಗೂ ಇದರ ವಿರುದ್ಧ ವ್ಯಕ್ತವಾದ ಪ್ರತಿಭಟನೆಯನ್ನು ತಿಳಿಯಲು 'ಪ್ರತಿಭಟನೆಯ ನೆಲೆಗಳು' ಎಂಬ ಅಧ್ಯಾಯದಲ್ಲಿ ಕ್ರಮವಾಗಿ 'ಅಸ್ಪೃಶ್ಯತೆ : ಪ್ರತಿಭಟನೆ', 'ಹಸಿವು : ಪ್ರತಿಭಟನೆ', 'ನೋವು : ಪ್ರತಿಭಟನೆ', 'ಲೈಂಗಿಕ ಶೋಷಣೆ : ಪ್ರತಿಭಟನೆ' ಹಾಗೂ 'ಅರಿವಿನ ವಂಚನೆ : ಪ್ರತಿಭಟನೆ' ಎಂಬ ಉಪ ಅಧ್ಯಾಯಗಳನ್ನು ರೂಪಿಸಿಕೊಂಡಿರುತ್ತೇನೆ. ಮುಂದೆ ಪ್ರತಿ ಉಪ ಅಧ್ಯಾಯದಲ್ಲಿ ಕಂಡ ಫಲಿತವನ್ನು ತಿಳಿಸಿರುತ್ತೇನೆ.

ಅ. 'ಅಸ್ಪೃಶ್ಯತೆ: ಪ್ರತಿಭಟನೆ'ಯಲ್ಲಿ ಸಮಾನತೆಗಾಗಿ, ತನ್ನವರ ಬದಲಾವಣೆಗಾಗಿ ಕಾವ್ಯ ರಚಿಸಿ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಅಸ್ಪೃಶ್ಯತೆಗಳಿಂದ ಬೆಂದವರಿಗೆ ಕಾವ್ಯದಿಂದ ಪ್ರತಿಭಟಿಸುವ ಅಂಶಗಳು ಹಾಗೂ ಕೆಲವು ಕಡೆ ದಲಿತರೇ ತಿರುಗಿ ಬಿದ್ದ ಅಂಶಗಳು ಕಂಡುಬರುತ್ತವೆ. ಆ ಅಧ್ಯಾಯದಲ್ಲಿ ದಲಿತರಿಗೆ ಎದುರಾದ ಎಲ್ಲಾ ರೀತಿಯ ಅಸ್ಪೃಶ್ಯತೆಗಳ ಗುಟ್ಟಿರುವುದು ಕಂಡು ಬಂದಿದೆ. ಅಸ್ಪೃಶತ್ಯೆಯಿಂದ ಬಿಡುಗಡೆ ಬಯಸಿ ದಲಿತರಿಗೂ ಸಮಾನವಾದ ಅವಕಾಶ ಕಲ್ಪಿಸುವಂತಹ ಪ್ರತಿಭಟನೆಯ ಕಾರ್ಯಗಳು ಈ ಅಧ್ಯಾಯದಲ್ಲಿ ಕಂಡು ಬರುತ್ತವೆ.

ಆ. 'ಹಸಿವು : ಪ್ರತಿಭಟನೆ'ಯಲ್ಲಿ ದಲಿತರು ಆರ್ಥಿಕವಾಗಿ ಸಬಲರಾಗಬೇಕೆಂದು ನಿರ್ಧರಿಸಿದರೂ ಜೀತ ಪದ್ಧತಿ, ಸಾಲಬಾಧೆಗಳಿಂದ ತತ್ತರಿಸಿ, ಅವರಿಗೆ ವ್ಯವಸ್ಥೆಯ ನೆರಳೆ ಶಾಶ್ವತ ಆಶ್ರಯವಾಯಿತು. ಅನ್ನದ ಕಣಜದಲ್ಲೇ ಇದ್ದರೂ ಹೊಟ್ಟೆ ತುಂಬಾ ಊಟ ಮಾಡಲಾಗದ ಸ್ಥಿತಿಯನ್ನು ದಲಿತ ಕವಿ ವೃಂದ ಮಾರ್ಮಿಕವಾಗಿ ಕಾವ್ಯಗಳಲ್ಲಿ ಚಿತ್ರಿಸಿದೆ. ವ್ಯವಸ್ಥೆಯಿಂದ ಯಾವುತ್ತೋ ಪಡೆದ ಸಾಲಕ್ಕೆ, ಅಸಲಿಗಿಂತ ಬಡ್ಡಿಯೇ ಹೆಚ್ಚಾಗಿ, ಸಾಲದ ಮರುಪಾವತಿಯಾಗದೇ ಜೀತದಲ್ಲೇ ಇರುವ ದಲಿತರಿಗೆ ವ್ಯವಸ್ಥೆಯೂ ವಿಶೇಷವಾದ ಸಂಚು ರೂಪಿಸಿಕೊಂಡಂತೆ ಕಂಡು ಬರುತ್ತದೆ.

ದಲಿತರ ಹಸಿವಿಗೆ ವ್ಯವಸ್ಥೆಯಷ್ಟೇ ಅಲ್ಲದೆ ದಲಿತರಲ್ಲೇ ಇರುವ ನಿರ್ಲಕ್ಷ್ಯದಿಂದ ದುಡಿತಕ್ಕೆ ತಕ್ಕ ಹಣ ಪಡೆಯದೆ ಹಸಿವಿನಲ್ಲಿ ಒದ್ದಾಡಿರುವ ಹಾಗೂ ತನ್ನವರ ಹಸಿವಿಗೆ ವ್ಯವಸ್ಥೆಯೇ ಕಾರಣವೆಂದು ಕವಿಗಳು ಕಾವ್ಯದ ಮೂಲಕ ಪ್ರತಿಭಟಿಸಿದ್ದಾರೆ.

ಇ. 'ನೋವು : ಪ್ರತಿಭಟನೆ'ಯಲ್ಲಿ 'ನೋವು' ದಲಿತರಿಗೆ ಶತ-ಶತಮಾನಗಳಿಂದಲೂ ಒದಗಿ ಬಂದಿರುವಂಥದ್ದು. ಇದು ದಲಿತ ಸಮುದಾಯದವರ ಹಾಗೂ ದಲಿತ ಕವಿಗಳ ಸ್ವಂತ ಅನುಭವಗಳ ಹೂರಣವಾಗಿದೆ. ಈ ಅಧ್ಯಾಯಕ್ಕೆ ಬಳಸಿಕೊಂಡ ಕಾವ್ಯಗಳಲ್ಲಿ ಎಲ್ಲಿಯೂ ವ್ಯವಸ್ಥೆಗೆ ಪ್ರತಿರೋಧ ತೋರುವ ಪದ್ಯಗಳಿಲ್ಲ. ಬದಲಿಗೆ ವ್ಯವಸ್ಥೆಯಿಂದ ಎಂಥ ನೋವು ಬಂದರೂ ಸಹ ಮೂಕರಾಗಿ ಅನುಭವಿಸಿ, ಅನುಭವಿಸುವ ಮೂಲಕವೇ ಪ್ರತಿಭಟಿಸುವ ಅಂಶಗಳು ಕಂಡು ಬಂದಿವೆ. ಕೆಲವೆಡೆ ನಾವು ಇರುವುದೇ ನೋವು ಪಡೆಯಲು ಎಂದು ಮಾನಸಿಕವಾಗಿ ಸಿದ್ಧರಾಗಿದ್ದ ದಲಿತರನ್ನು ಕಾಣಬಹುದು. ಒಟ್ಟಾರೆಯಾಗಿ ಕವಿಗಳು ತನ್ನ ಹಾಗೂ ತನ್ನವರ ನೋವನ್ನು ಪ್ರತಿಬಿಂಬಿಸುವುದರ ಮೂಲಕವೇ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿದ್ದಾರೆ. ದಲಿತರು ದೈಹಿಕ ಹಾಗೂ ಮಾನಸಿಕ ನೋವುಗಳಿಂದ ಜರ್ಜರಿತರಾಗಿದ್ದು, ದೈಹಿಕ ನೋವಿಗಿಂತ ಮಾನಸಿಕ ನೋವಿನಿಂದಲೇ ಹೆಚ್ಚು ಯಾತನೆಪಟ್ಟಿದ್ದಾರೆ. ಇದಕ್ಕೆ ವ್ಯವಸ್ಥೆಯು ದಲಿತರನ್ನು ಬಳಸಿಕೊಂಡ ರೀತಿಯೂ ಕಾರಣವಾಗಿದೆ. ಎಲ್ಲಾ ತಪ್ಪಿಗೂ ಸಮುದಾಯವೇ ಕಾರಣವೆಂದು ಹೀಯಾಳಿಸಿ ಅವಹೇಳನ ಮಾಡುವುದು ಒಂದು ರೀತಿಯ ಮಾನಸಿಕ ನೋವಿಗೆ ಕಾರಣವಾಗಿದೆ.

ಈ. 'ಲೈಂಗಿಕ ಶೋಷಣೆ : ಪ್ರತಿಭಟನೆ'ಯಲ್ಲಿ ದಲಿತ ಹೆಣ್ಣಿಗೆ ತನ್ನವರಿಗಿಂತಲೂ ಹೆಚ್ಚಾಗಿ ವ್ಯವಸ್ಥೆಯಿಂದ, 'ವ್ಯವಸ್ಥಿತ'ವಾಗಿ ನಡೆದ ಶೋಷಣೆಯಿಂದ ಹೆಣ್ಣು ತನ್ನ ಅಸಹಾಯಕತೆಯಿಂದ, ಸಂಕಟದಿಂದ ಅನುಭವಿಸಿ ಪ್ರತಿಭಟಿಸಿದ್ದಾಳೆ. ಧಾರ್ಮಿಕತೆಯ ಹೆಸರಲ್ಲಿ ದಲಿತ ಹೆಣ್ಣಿನ ಮುಗ್ಧತೆಯ ಲಾಭ ಪಡೆದು ನೀಡಿದ ಶೋಷಣೆ ದಲಿತ ಸಮುದಾಯದಿಂದಲೇ ವಿರೋಧವಾಗುವ ಕಾವ್ಯಗಳು ಇಲ್ಲಿ ವ್ಯಕ್ತವಾಗಿವೆ. ಕವಿಗಳು ತಮ್ಮ ಸಮುದಾಯದಲ್ಲಿ 'ಲೈಂಗಿಕ ಶೋಷಣೆ'ಗೆ ಒಳಗಾದವರನ್ನು ಅಕ್ಕ-ತಂಗಿ ಎಂದು ಸಂಬೋಧಿಸಿ, ಇವರ ಪರನಿಂತು 'ವ್ಯವಸ್ಥೆ'ಯನ್ನು ಪ್ರತಿಭಟಿಸಿದ್ದಾರೆ.

ಉ. ‘ಅರಿವಿನ ವಂಚನೆ : ಪ್ರತಿಭಟನೆ’ಯಲ್ಲಿ ದಲಿತರ ಅಜ್ಞಾನಕ್ಕೆ ದಲಿತರಲ್ಲೇ ಅಡಗಿರುವ ನಿರಾಸಕ್ತಿ ಹಾಗೂ ವ್ಯವಸ್ಥೆಯ ಸ್ವಾರ್ಥ ಎರಡೂ ಕಾರಣವಾಗಿವೆ. ಓದಿನಿಂದ ರಾಜ್ಯ ಆಳಲಾಗದು, ದುಡಿದರೆ ಗಂಜಿಗೆ ಕಾಸಾಗುತ್ತದೆ, ಮಗನನ್ನು ಜೀತಕ್ಕೆ ಇಟ್ಟರೆ ಹಣ ಪಡೆದು ಸುಖವಾಗಿರಬಹುದೆಂಬ ಅಂಧಃಶ್ರದ್ಧೆ ಹಾಗೂ ವ್ಯವಸ್ಥೆಯು ದಲಿತರಿಗೆ ಅಕ್ಷರ ಕಲಿಸಿದರೆ ದುಡಿಯುವ ಕೈ ಕಡಿಮೆಯಾಗಿ ನಮ್ಮ ವಿರುದ್ಧ, ನಮ್ಮ ಎದೆಮಟ್ಟಕ್ಕೆ ಬೆಳೆದು ಆರ್ಥಿಕವಾಗಿ ಸಬಲರಾಗುವರೆಂದು ತಿಳಿದು,ಒಂದಿಷ್ಟು ಪುಡಿಗಾಸಿನ ಆಸೆ ತೋರಿಸಿ, ಸಾಲ ಕೊಟ್ಟು ಶಾಶ್ವತವಾಗಿ ತಮ್ಮ ಮನೆಯ ಆಳಾಗಿ ದುಡಿಸಿಕೊಳ್ಳುವ ಹೀನ ಯೋಜನೆಯನ್ನು ಕಾವ್ಯದ ಮೂಲಕ ಬಯಲಿಗೆಳೆದು ಪ್ರತಿಭಟಿಸಿದ್ದಾರೆ.

‘ಪ್ರತಿಭಟನೆಯ ಗೆಲುವು – ಸೋಲು’ ಎಂಬ ಅಧ್ಯಾಯದಲ್ಲಿ ದಲಿತ ಕಾವ್ಯಗಳು ಅಜಾಗೃತರಾಗಿದ್ದ ತನ್ನ ಸಮುದಾಯದವರಲ್ಲಿ ಜಾಗೃತಿಯ ಅರಿವು ಮೂಡಿಸಿದ ಯಶೋಗಾಥೆ, ಇದರ ಜೊತೆಗೆ ವ್ಯವಸ್ಥೆಯಿಂದ ಬೇರೆಯಾಗಿ, ಸ್ವಾವಲಂಬಿಗಳಾಗಿ ಬದುಕು ನಡೆಸಬೇಕೆಂದು ನೀಡಿದ ಕರೆ, ಅಕ್ಷರಸ್ಥರಾಗಬೇಕೆಂದು ನೀಡಿದ ಎಚ್ಚರ, ಆರ್ಥಿಕವಾಗಿ ಸಬಲರಾಗಿದ್ದರೆ ಸಮಾನತೆ ತಾನೇ ತಾನಾಗಿ ಬರುವುದೆಂದು ತಿಳಿಸುವಂತಹ ಅನೇಕ ಪರಿಣಾಮಗಳಿಂದ ಕಾವ್ಯ ಗೆಲುವು ಪಡೆದರೆ,ದಲಿತ ಕವಿಗಳು ಪ್ರಾರಂಭದಲ್ಲಿ ತನ್ನವರಿಗಾಗಿ ತೋರಿದ ಆಸಕ್ತಿ ತಾವು ಉನ್ನತ ಮಟ್ಟಕ್ಕೆ ಹೋದಾಗ ಕಾಲಕ್ರಮೇಣ ಕ್ಷೀಣಿಸಿದ್ದು ಮಾತ್ರ ದೊಡ್ಡ ದುರಂತ. ಎಲ್ಲಿ ಜನ ಮನ್ನಣೆ, ಜನಪ್ರಿಯತೆ, ಬಾಹ್ಯ ಸಮಸ್ಯೆಗಳಿಗೆ ಹೆಚ್ಚು ಒತ್ತು ಕೊಟ್ಟು, ತನ್ನವರ ಅಂತರಿಕ ಸಮಸ್ಯೆಗಳಿಗೆ ಒಲವು ತೋರದಿದ್ದಾಗ ಕೆಲವೊಂದು ಸಮಸ್ಯೆಗಳು, ಸಮಸ್ಯೆಗಳಾಗಿ ಉಳಿಯಿತು. ಜತೆಗೆ ಕವಿಗಳು ತನ್ನ ಸಮುದಾಯಕ್ಕಿಂತ ತನ್ನ ಕುಟುಂಬಕ್ಕೆ ಹೆಚ್ಚು ಅನುಕೂಲ ಪಡೆದರು ಎಂಬ ಅಂಶ ಕಂಡು ಬರುತ್ತದೆ. ದಲಿತ ಕವಿಗಳ ಕಾವ್ಯದ ಪ್ರಭಾವ ದಲಿತೇತರಲ್ಲಿ ಯಾವುದೇ ರೀತಿಯ ಗುರುತರವಾದ ಬದಲಾವಣೆಗೆ ಸಾಧ್ಯವಾಗಲಿಲ್ಲ ಎಂಬುದು ಸೋಲಿಗೆ ಕಾರಣವಾಗಿದೆ. ಒಟ್ಟಿನಲ್ಲಿ ಈ ಅಧ್ಯಾಯದಲ್ಲಿ ದಲಿತರ ಯಶಸ್ಸಿನ ಹಿಂದೆ ಸೋಲು ಎಂಬ ಕರಿ ನೆರಳು ಹಿಂಬಾಲಿಸುತ್ತಿದೆ.

## ಅನುಬಂಧ

## ಪ್ರಾಥಮಿಕ ಆಕರ ಗ್ರಂಥಗಳು ಮತ್ತು ಪರಾಮರ್ಶನ ಗ್ರಂಥಗಳು

### ಪ್ರಾಥಮಿಕ ಆಕರ ಗ್ರಂಥಗಳು


1. **ಅನಸೂಯ ಕಾಂಬಳೆ**

   ಮತ್ಸ್ಯಗಂಧಿಯ ಹಾಡು, 2001 – ಮೊದಲ ಮುದ್ರಣ, ಕೆಂಗುಲಾಬಿ ಪ್ರಕಾಶನ, ಬಳ್ಳಾರಿ.

2. **ಅರವಿಂದ ಮಾಲಗತ್ತಿ**

   1. ಕಪ್ಪು ಕಾವ್ಯ, 1985 – ಪ್ರಥಮ ಮುದ್ರಣ, ಶೈಲಿ ಪ್ರಕಾಶನ, ಮುದ್ದೇಬಿಹಾಳ.

   2. ನಾದ ನಿನಾದ, 1999 – ಪ್ರಥಮ ಮುದ್ರಣ, ಶೈಲಿ ಪ್ರಕಾಶನ, ಮುದ್ದೇಬಿಹಾಳ.

   3. ಮೂರನೆಯ ಕಣ್ಣು, 1996 – ಪ್ರಥಮ ಮುದ್ರಣ, ಶೈಲಿ ಪ್ರಕಾಶನ, ಮುದ್ದೇಬಿಹಾಳ.

3. **ಜವರಯ್ಯ ಮ.ನ.**

   ವಿದ್ರೋಹ, (ಐದು ಸಂಕಲನಗಳ ಸಮಗ್ರ ಕಾವ್ಯ ಸಂಪುಟ), 2002 – ಮೊದಲ ಮುದ್ರಣ, ಬಹುಜನ ಮಾಧ್ಯಮ ಕೇಂದ್ರ, ಮೈಸೂರು.

4. **ಮುನಿವೆಂಕಟಪ್ಪ ವಿ.**

1) ಕಾಡು ಕಣಿವೆಯ ಹಕ್ಕಿ, 1999 – ಮೊದಲ ಮುದ್ರಣ, ವಿಚಾರವಾದಿ ಪ್ರಕಾಶನ, ಮೈಸೂರು.

2) ಸ್ವಾಭಿಮಾನದ ಬೀಡಿಗೆ, 1996 – ಎರಡನೆಯ ಮುದ್ರಣ, ವಿಚಾರವಾದಿ ಪ್ರಕಾಶನ, ಮೈಸೂರು.

5. **ಮೂಡ್ನಾಕೂಡು ಚಿನ್ನಸ್ವಾಮಿ**

ಚಂದಿರನ ಕಣ್ಣು ಇಂಗಲಾರದ ಹುಣ್ಣು, (ಆಯ್ದ ಕವಿತೆಗಳು), 2007 – ಪ್ರಥಮ ಮುದ್ರಣ, ಮಾನವ ಧರ್ಮ ಪೀಠ, ಬೆಂಗಳೂರು.

6. **ಮುಳ್ಳೂರು ನಾಗರಾಜ್**

1)ದಾಖಲೆ, 1987 – ಮೊದಲ ಮುದ್ರಣ, ಹೊಸ ದಿಕ್ಕು ಪ್ರಕಾಶನ, ಬೆಂಗಳೂರು.

2)ನೆಲದ ಜೋಗುಳ, 1993 – ಮೊದಲ ಮುದ್ರಣ, ವಿಚಾರವಾದಿ ಪ್ರಕಾಶನ, ಮೈಸೂರು.

7. **ಲಲಿತಾ ನಾಯಕ್ .ಬಿ.ಟಿ**

ಒಡಲ ಬೇಗೆ, 1996 – ಮೊದಲ ಮುದ್ರಣ, ವೈದ್ಯ ವಾರ್ತಾ ಪ್ರಕಾಶನ,ಮೈಸೂರು.

8. **ಸರಸ್ವತಿ ದು.**

ಜೀವ ಸಂಪಿಗೆ, 2006 – ಮೊದಲ ಮುದ್ರಣ, ಅಭಿನವ, ಬೆಂಗಳೂರು.

9. **ಸಿದ್ಧಲಿಂಗಯ್ಯ**

ಮೆರವಣಿಗೆ, (ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಕಪ್ಪು ಕಾಡಿನ ಹಾಡು ಮತ್ತು ಹೊಸ ಕವಿತೆಗಳು), 2007 – ಎರಡನೆಯ ಮುದ್ರಣ, ಅಂಕಿತ ಪ್ರಕಾಶನ, ಬೆಂಗಳೂರು.

10. **ಸಿದ್ಧಯ್ಯ ಕೆ.ಬಿ**

ಗಲ್ಲೆ ಬಾನಿ, 2009 – ಮೊದಲ ಮುದ್ರಣ, ನಮ್ಮ ಪ್ರಕಾಶನ, ತಿಪಟೂರು.

11. **ಸುಬ್ಬು ಹೊಲೆಯರ್**

1) ಎಲ್ಲರ ಬೆರಳಲ್ಲೂ ಅಂಟಿಕೊಂಡ ದುಃಖವೇ, 2013 – ಮೊದಲ ಮುದ್ರಣ, ಸಂಸ್ಕೃತಿ ಪ್ರಕಾಶನ, ಬಳ್ಳಾರಿ.
2) ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು, 2003 – ಪ್ರಥಮ ಮುದ್ರಣ, ದ್ರಾವಿಡ್ ಪಬ್ಲಿಕೇಷನ್ಸ್, ಮೈಸೂರು.

12. **ಹನುಮಂತಯ್ಯ .ಎಲ್**

ಕಳ್ಳಿ ಹಾಲಿನ ಕಡಲು (ಈವರಗಿನ ಕಾವ್ಯ), 2009 – ಪ್ರಥಮ ಮುದ್ರಣ, ಚಾರುಮತಿ ಪ್ರಕಾಶನ, ಬೆಂಗಳೂರು.

## ಪರಾಮರ್ಶನ ಗ್ರಂಥಗಳು

1. **ಅರ್ಜುನ ಗೊಳಸಂಗಿ**

1) ಕನ್ನಡ ದಲಿತ ಸಾಹಿತ್ಯ (ಸಂ.) 2003 –ಮೊದಲ ಮುದ್ರಣ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
2) ಕಾವ್ಯ ಮಂಥನ, 2009 – ಪ್ರಥಮ ಮುದ್ರಣ, ದಲಿತ ಸಾಹಿತಪರಿಷತ್ತು ರಾಜ್ಯ ಘಟಕ, ಗದಗ.
3) ದಲಿತಜ್ಞ , 2000 –ಪ್ರಥಮ ಮುದ್ರಣ, ಕಾಂಬಳೆ ಪ್ರಿಂಟರ್ಸ್, ಗದಗ.
4) ದಲಿತ ಚಿಂತನ, 2010 –ಮೊದಲನೇ ಮುದ್ರಣ, ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು.

2. **ಅಪ್ಪಗೆರೆ ಸೋಮಶೇಖರ**

1) ತನು ಮುಟ್ಟದ ಮುನ್ನ, 2006 – ಪ್ರಥಮ ಮುದ್ರಣ, ಪ್ರಸಾದ್ ಏಜೆನ್ಸೀಸ್, ಮೈಸೂರು.

2) ಬಯಲ ಬೆಳಕು, 2007 – ಮೊದಲ ಮುದ್ರಣ, ನಂದಿ ಬುಕ್ ಹೌಸ್, ಮೈಸೂರು.

3) ಸಂಬಂಜ ಅನ್ನೋದು ದೊಡ್ಡದು ಕನಾ, 2006 – ಪ್ರಥಮ ಮುದ್ರಣ, ವಿಜಯ ಲಕ್ಮಿ ಪ್ರಕಾಶನ, ಮೈಸೂರು.

4) ಸುಟ್ಟಾವು ಬೆಳ್ಳಿ ಕಿರಣ, 2006 – ಪ್ರಥಮ ಮುದ್ರಣ, ಪ್ರಸಾದ್ ಏಜೆನ್ಸೀಸ್, ಮೈಸೂರು.

3. **ಅರವಿಂದ ಮಾಲಗತ್ತಿ**

1) ದಲಿತ ಮಾರ್ಗ (ಸಂ.) 2002 – ಪ್ರಥಮ ಮುದ್ರಣ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು.

2) ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, 2003 ಪ್ರಥಮ ಮುದ್ರಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

4. **ಎಚ್ಚೆಸ್ಕೆ,**

ಶಾರದೆಯ ಕುಣಿಸಿದ ಕವಿ ಪ್ರೊ. ಅರವಿಂದ ಮಾಲಗತ್ತಿ, 2007 – ಮೊದಲ ಮುದ್ರಣ, ಚೇತನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಮೈಸೂರು.

5. **ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್**

1) ಕರ್ಣಾಟ ಭಾರತ  ಕಥಾ ಮಂಜರಿ (ಸಂ.) 1988 – ಮೂರನೆಯ ಮುದ್ರಣ, ಪ್ರಸಾರಾಂಗ, ಮೈಸೂರು.

2) ಕಾನೂರು ಹೆಗ್ಗಡತಿ, 2015 – ಇಪ್ಪತ್ತೊಂದನೆಯ ಮುದ್ರಣ, ಉದಯ ರವಿ ಪ್ರಕಾಶನ, ಮೈಸೂರು.

3) ಮಲೆಗಳಲ್ಲಿ ಮದುಮಗಳು, 2015 – ಇಪ್ಪತ್ತೆರಡನೆಯ ಮುದ್ರಣ, ಉದಯ ರವಿ ಪ್ರಕಾಶನ, ಮೈಸೂರು.

6. **ಚಂದ್ರಶೇಖರ ಟಿ.ಆರ್.** (ಸಂ.)

ದಲಿತ ಅಧ್ಯಯನ, 2005 – ಪ್ರಥಮ ಮುದ್ರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

7. **ಚಿನ್ನಸ್ವಾಮಿ ಸೋಸಲೆ ಎನ್.**

1) ಅಂಬೇಡ್ಕರ್ ವಾದ ಮತ್ತು ಪ್ರಸ್ತುತ ದಲಿತರು, 2012 – ಪ್ರಥಮ ಮುದ್ರಣ, ಸಪ್ನ ಬುಕ್ ಹೌಸ್, ಬೆಂಗಳೂರು.

2) ಪ್ರಭುತ್ವ ಮತ್ತು ದಲಿತರು, 2006 – ಪ್ರಥಮ ಮುದ್ರಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

3) ಭಾರತೀಯ ಸಮಾಜ ಮತ್ತು ದಲಿತರು, 2008 – ಪ್ರಥಮ ಮುದ್ರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

8. **ಜವರೇಗೌಡ ದೇ.**

1) ಕನಕ ದರ್ಶನ, 2003 – ಮೊದಲ ಮುದ್ರಣ, ತನು ಮನು ಪ್ರಕಾಶನ, ಮೈಸೂರು.

2) ಕನಕದಾಸರ ರಾಮಧಾನ್ಯ ಚರಿತ್ರೆ, ಎರಡನೆಯ ಮುದ್ರಣ, ಕರ್ನಾಟಕ ಪ್ರೆಸ್, ಮೈಸೂರು.

3) ಪೂರ್ವ ಕವಿಗಳಿಗೆ ನಮನ, 2006 ಮೊದಲ ಮುದ್ರಣ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

**9. ತಿಪ್ಪೇಸ್ವಾಮಿ ಜಿ.ಆರ್.**

ಕನ್ನಡ ದಲಿತ ಸಾಹಿತ್ಯದ ನೆಲೆ, 2010 – ಪ್ರಥಮ ಮುದ್ರಣ, ವಿಚಾರವಾದಿ ಪ್ರಕಾಶನ, ಮೈಸೂರು.

10. **ತಿಪ್ಪೇರುದ್ರಸ್ವಾಮಿ ಎಚ್.**

ಬಸವೇಶ್ವರ ವಚನ ದೀಪಿಕೆ, 2013 – ಮೂರನೆಯ ಮುದ್ರಣ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

11. **ದೊಡ್ಡಹುಲ್ಲೂರು ರುಕ್ಕೋಜಿ**

ಡಾ॥ ಸಿದ್ಧಲಿಂಗಯ್ಯನವರ ಸದನದ ಭಾಷಣಗಳು ಭಾಗ– 2, 2005 – ಪ್ರಥಮ ಮುದ್ರಣ, ಕಾಮಧೇನು ಪುಸ್ತಕ ಭವನ, ಬೆಂಗಳೂರು.

**12. ನಾರಾಯಣ ಸ್ವಾಮಿ ಜ.ಹೊ.**

ಮನುಸ್ಮೃತಿ ಮತ್ತು ದಲಿತರು, 2013 – ಪ್ರಥಮ ಮುದ್ರಣ, ಲಡಾಯಿ ಪ್ರಕಾಶನ, ಗದಗ.

13. **ಪುಟ್ಟಪ್ಪ ಕೆ.ವಿ.**

ಪಂಪ ಭಾರತಂ ಎಂಬ ವಿಕ್ರಮಾರ್ಜುನ ವಿಜಯಂ(ಎರಡನೆಯ ಭಾಗ : 9–14 ಆಶ್ವಾಸಗಳು), 1992 – ಮೂರನೆಯ ಮುದ್ರಣ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

14. **ಪೋತೆ ಎಚ್.ಟಿ.**
ದಲಿತಾಂತರಂಗ, 2004 – ಪ್ರಥಮ ಮುದ್ರಣ.

15. **ಬಸವರಾಜು ಎಲ್.**
ಸರಳ ಪಂಪ ಭಾರತ, 1999 – ಪ್ರಥಮ ಮುದ್ರಣ, ಗೀತಾ ಬುಕ್ ಹೌಸ್, ಮೈಸೂರು.

16. **ಮಹಾದೇವಯ್ಯ ಪಿ.**
ದಲಿತರು ಭಾಷೆ ಮತು ಸಮಾಜ, 2006 – ಪ್ರಥಮ ಮುದ್ರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

17. **ಮಹಾದೇವಯ್ಯ ಟಿ.ಆರ್.**
ದಲಿತೋದಯ, 1996 – ಮೊದಲನೆಯ ಮುದ್ರಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

18. **ಮಲ್ಲಿಕಾ ಘಂಟಿ** (ಸಂ.)
ದಲಿತ ಸಾಹಿತ್ಯ ಚಳವಳಿ, 1996 – ಮೊದಲನೆಯ ಮುದ್ರಣ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

19. **ಮುನಿವೆಂಕಟಪ್ಪ ವಿ.**
ದಲಿತ ಚಳವಳಿ ಮತ್ತು ಸಾಹಿತ್ಯ, 2009 – ಎರಡನೆ ಮುದ್ರಣ, ತನುಮನು ಪ್ರಕಾಶನ, ಮೈಸೂರು.

20. **ಮಾಗಡಿ ರಂಗನರಸಿಂಹಯ್ಯ**
ಸರ್ವಜ್ಞ ವಂಚನ ಸಂಪದ, 2007 – ಪ್ರಥಮ ಮುದ್ರಣ, ವಿಜಯವಾಹಿನಿ ಪಬ್ಲಿಕೇಷನ್ಸ್, ಶಿವಮೊಗ್ಗ.

**21. ಮೂಡ್ನಾಕೂಡು ಚಿನ್ನಸ್ವಾಮಿ**
ಒಂದು ಕೊಡ ಹಾಲಿನ ಸಮರ, 2008 – ಮೊದಲ ಮುದ್ರಣ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

22. **ರಾಜಶೇಖರಯ್ಯ ಎಲ್.**
ಡಾ.ಸಿದ್ಧಲಿಂಗಯ್ಯ ದಲಿತ ಕಾವ್ಯ ಕುತೂಹಲ, 2007 – ಪ್ರಥಮ ಮುದ್ರಣ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

**23. ಲಂಕೇಶ್ ಪಿ. (ಸಂ.)**
ಅಕ್ಷರ ಹೊಸ ಕಾವ್ಯ, 2011 – ಮೂರನೆಯ ಮುದ್ರಣ, ಲಂಕೇಶ್ ಪ್ರಕಾಶನ, ಬೆಂಗಳೂರು.

24. **ಲಕ್ಷ್ಮೀ ನಾರಾಯಣ ನಾಗವಾರ (ಪ್ರಸಂ.)**
ಬತ್ತದ ಬೆಳದಿಂಗಳು ಡಾ॥ ಸಿದ್ಧಲಿಂಗಯ್ಯ, 2006 – ಪ್ರಥಮ ಮುದ್ರಣ, ಮಿಲಿಂದ್ ಪ್ರಕಾಶನ, ಬೆಂಗಳೂರು.

25. **ವೆಂಕಟೇಶ್ ಎಚ್.**
ಮಾನವತಾವಾದಿ ಅಂಬೇಡ್ಕರ್, 1995 – ಪ್ರಥಮ ಮುದ್ರಣ, ಅಮರ ಸಾಹಿತ್ಯ, ಬೆಂಗಳೂರು.

26. **ಮೊಗಳ್ಳಿ ಗಣೇಶ್**
ದಲಿತ ಕಥನ, 2006 – ಪ್ರಥಮ ಮುದ್ರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

27. **ಶಶಿಕಲಾ ಎಸ್.ಡಿ.**

1) ಕಾವ್ಯ ಕುಂಕುಮೆ (ಸಂ.) 2009 – ಪ್ರಥಮ ಮುದ್ರಣ, ಜ್ಯೋತಿ ಪ್ರಕಾಶಕರು, ಮೈಸೂರು.

2) ಪಗಡಿಯ ಕೌದಿಯಲಿ ದೀಪಗಳು ಬೆಳಗಿ, 2009 – ಪ್ರಥಮ ಮುದ್ರಣ, ಜ್ಯೋತಿ ಪ್ರಕಾಶಕರು, ಮೈಸೂರು.

28. **ಶಿವರಾಮ ಕಾರಂತ**

ಚೋಮನ ದುಡಿ, 2012 – ಮೂರನೇ ಮುದ್ರಣ, ಎಸ್‌ಬಿಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

29. **ಶಿವರುದ್ರಪ್ಪ ಜಿ.ಎಸ್.**

ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, 1989 – ಪ್ರಥಮ ಮುದ್ರಣ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

30. **ಶೇಷಗಿರಿರಾವ್ ಎಲ್.ಎಸ್.**

ಹೊಸಗನ್ನಡ ಸಾಹಿತ್ಯ ಚರಿತ್ರೆ, 2013 – ಹತ್ತನೆಯ ಮುದ್ರಣ, ಅಂಕಿತ ಪುಸ್ತಕ, ಬೆಂಗಳೂರು.

31. **ಸಣ್ಣಗುಡ್ಡಯ್ಯ ಎಚ್.ಜಿ.**

ತೀ.ನಂ.ಶ್ರೀಕಂಠಯ್ಯ, 2004 – ಪರಿಷ್ಕೃತ ಮುದ್ರಣ, ಅಕ್ಷಯ, ತುಮಕೂರು.

32. **ಸಿದ್ಧಲಿಂಗಯ್ಯ**

ಜನಸಂಸ್ಕೃತಿ, 2007 – ಪ್ರಥಮ ಮುದ್ರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**33. ಸುಬೋಧ ಯಂ. ರಾಮರಾವ್**
ಶ್ರೀ ಕನಕದಾಸರ ಮತ್ತು ಶ್ರೀ ಜಗನ್ನಾಥದಾಸರ
ಕೃತಿಗಳು, 1976 – ತೃತೀಯ ಮುದ್ರಣ, ಸುಬೋಧ
ಮುದ್ರಣಾಲಯ, ಬೆಂಗಳೂರು.

**34. ಹನುಮಂತಯ್ಯ. ಎಲ್.**
ಕಥಾಕಥನ, 2010 – ಎರಡನೆ ಮುದ್ರಣ, ಪ್ರಗತಿ ಗ್ರಾಫಿಕ್ಸ್,
ಬೆಂಗಳೂರು.